# ಹಿಂದೀ ಹೇರಿಕೆ: ಮೂರು ಮಂತ್ರ – ನೂರು ತಂತ್ರ

ನಿಜಕ್ಕೂ ನಮ್ಮ ಮೇಲೆ ಹಿಂದೀ ಹೇರಿಕೆ ಆಗುತ್ತಿದೆಯೇ? ಹಿಂದೀಯನ್ನು ಒಪ್ಪುತ್ತಿರುವುದರಿಂದ ನಮಗಾಗಿರುವ ನಷ್ಟವೇನು? ಕೇಂದ್ರಸರ್ಕಾರದ ಉದ್ದೇಶಗಳೇನು? ಭಾಷಾವಾರು ರಾಜ್ಯಗಳ ಒಕ್ಕೂಟವಾದ ಪ್ರಜಾಪ್ರಭುತ್ವದ ನೆಲೆಯೂ ಆಗಿರುವ ದೇಶವೊಂದರ ರೀತಿನೀತಿಗಳನ್ನು, ಅವು ಹೇಗೆ ನಮ್ಮ ಬದುಕನ್ನು ನಿಯಂತ್ರಿಸುತ್ತಿವೆ ಎನ್ನುವುದನ್ನು ಮನವರಿಕೆ ಮಾಡಿಕೊಡುವ ಯತ್ನವೇ ನಿಮ್ಮ ಕೈಲಿರುವ ಈ ಹೊತ್ತಗೆ.

ಸರ್ಕಾರಿ ದಾಖಲೆಗಳು, ಸಂವಿಧಾನದ ಕಾಲಂಗಳು, ಸರ್ಕಾರಿ ಅಂತರ್ಜಾಲ ತಾಣಗಳು, ದಿನಪತ್ರಿಕೆಯ ಸುದ್ದಿಗಳು, ಕಣ್ಣಾರೆ ಕಂಡು ಅನುಭವಿಸಿದ ಅನುಭವಗಳೇ ಈ ಹೊತ್ತಗೆಯ ಮಾಹಿತಿ ಮೂಲವಾಗಿವೆ. ಹೆಚ್ಚಿನೆಡೆಗಳಲ್ಲಿ ಹಿಂದೀ/ ಇಂಗ್ಲೀಶಿನ ಈ ಮಾಹಿತಿಯನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಕೊಟ್ಟಿದ್ದೇನೆ. ಕನ್ನಡಿಗರಲ್ಲಿ ಭಾರತದ ಭಾಷಾನೀತಿಯ ಬಗ್ಗೆ, ಅದರ ಇಂದಿನ ಸ್ವರೂಪದ ಬಗ್ಗೆ, ಇರಬೇಕಾದ ರೀತಿಯ ಬಗ್ಗೆ ಅರಿವುಂಟಾದರೆ ಸಾಕು. ಅದೇ ಈ ಹೊತ್ತಗೆಗೆ ಸಾರ್ಥಕತೆ. ಕರ್ನಾಟಕದಾದ್ಯಂತ ಹಿಂದೀ ಸಾಮ್ರಾಜ್ಯಶಾಹಿಯ ಸ್ಥಾಪನೆಯ, ಹಿಂದೀ ಸಾರ್ವಭೌಮತ್ವದ ಪ್ರತೀಕವಾಗಿ ನಡೆಯುತ್ತಿರುವ ಹಿಂದೀ ದಿವಸ್–ಹಿಂದೀ ಪಾಕ್ಷಿಕಗಳು ನಿಲ್ಲಲಿ.. ಭಾರತಕ್ಕೆ ಒಂದು ಸರಿಯಾದ ಭಾಷಾನೀತಿಯ ಅಗತ್ಯವಿದೆ ಎಂಬುದು ನಮ್ಮ ಜನರಿಗೆ ಅರಿವಾಗಲೀ, ಹೈಕಮಾಂಡಿನ ಕೈಗೊಂಬೆಗಳಾಗಿರುವ ರಾಷ್ಟ್ರೀಯ ಪಕ್ಷಗಳು ಹಿಂದೀಯಿಂದಲೇ ದೇಶದ ಒಗ್ಗಟ್ಟು ಎಂಬ ಪೊಳ್ಳು ರಾಷ್ಟ್ರೀಯತೆಯ ಸಿದ್ಧಾಂತಗಳಿಗೆ ತಿಲಾಂಜಲಿ ಕೊಡಲೀ, ಕರ್ನಾಟಕದಲ್ಲಿ ತ್ರಿಭಾಷಾಸೂತ್ರದ ಶೂಲ ಇನ್ನಿಲ್ಲವಾಗಲೀ... ಎಂಬ ಒಡಲಾಳದ ಆಶಯಗಳಿಂದ ಈ ಹೊತ್ತಗೆಯನ್ನು ನಿಮ್ಮ ಕೈಗಿಡುತ್ತಿದ್ದೇವೆ.

ಬೆಲೆ : ರೂ. ೧೫೦/–

ಭಾರತದ ಭಾಷಾನೀತಿ

# ಹಿಂದೀ ಹೇರಿಕೆ

## ಮೂರು ಮಂತ್ರ : ನೂರು ತಂತ್ರ

ಆನಂದ್ ಜಿ

ಬನವಾಸಿ ಬಳಗ ಪ್ರಕಾಶನ



**ಹಿಂದೀ ಹೇರಿಕೆ: ಮೂರು ಮಂತ್ರ–ನೂರು ತಂತ್ರ**: ಭಾರತದೇಶದಲ್ಲಿ ಅನುಸರಿಸಲಾಗುತ್ತಿರುವ ಭಾಷಾನೀತಿಯಿಂದಾಗಿ ಕನ್ನಡಿಗರ ಮೇಲಾಗುತ್ತಿರುವ ಹಿಂದೀಹೇರಿಕೆಯ ಬಗ್ಗೆ ಕಣ್ತೆರೆಸುವ ಮಾಹಿತಿಗಳನ್ನೊಳಗೊಂಡ ಕನ್ನಡದ ಹೊತ್ತಗೆ.


ಪ್ರಕಾಶಕರು: ಬನವಾಸಿ ಬಳಗ
ಬರಹಗಾರರು: ಆನಂದ್ ಜಿ
ಹಕ್ಕುಗಳು: ಬರಹಗಾರರದು
ಅಚ್ಚುಮನೆ: ವರ್ಣಿಲ, ಬಸವನಗುಡಿ
ಪುಟಗಳು : ೩೫೦
ಮೊದಲ ಅಚ್ಚು: ೨೦೧೧

ಹೊರಪುಟ ವಿನ್ಯಾಸ: ರಾಕೇಶ್, ವರ್ಣಿಲ

---

ಬನವಾಸಿ ಬಳಗ, ೩೨/ ೨೯, “ಪವನ ನಿಲಯ”, ಮೊದಲ ಮಹಡಿ, ಮೊದಲನೇ ಅಡ್ಡರಸ್ತೆ, ಟಾಟಾ ಸಿಲ್ಕ್ ಫಾರಂ, ಓಬಳಪ್ಪ ಗಾರ್ಡನ್, ಬೆಂಗಳೂರು ೫೬೦ ೦೭೦

www.banavasibalaga.org

kacheri@banavasibalaga.org

anand@banavasibalaga.org

www.enguru.blogspot.com

---

**“HINDI HERIKE: MURU MANTRA: NURU TANTRA”** :– A book written in kannada that advocates the need for change in the official language policy of India and explains the impact of Hindification on kannadigas.

Published by: Banavasi Balaga
Writer : Anand G
Rights: Writers
Printer: Varnila, Basavana gudi
Pages: 350
First edition: 2011
Cover page design : Rakesh, Varnila

## ಮೊದಲ ಮಾತು

ಒಮ್ಮೆ ಆಕಸ್ಮಿಕವಾಗಿ ಭೇಟಿಯಾದ ಹಿರಿಯರಿಂದಾಗಿ ಹಿಂದೀ ಬಗ್ಗೆ ನನ್ನ ಅನಿಸಿಕೆಗಳು ಬದಲಾದ ಘಟನೆ ನಡೆದದ್ದು ೨೦೦೬ರಲ್ಲಿ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನುಡಿ ಪತ್ರಿಕೆಯ ಬರಹಗಾರರಾಗಿದ್ದ ಹಿರಿಯ ಚಿಂತಕ ಶ್ರೀ. ರಾಜ್‌ಕುಮಾರ್ ಅವರು ಹಿಂದೀ ಭಾಷೆಯ ಬಗ್ಗೆ ಮಾತನ್ನಾಡುತ್ತಾ, ಕನ್ನಡಿಗರ ಮೇಲೆ ಹೇಗೆ ಭಾರತದ ಕೇಂದ್ರಸರ್ಕಾರವು ಹಿಂದೀಯನ್ನು ವ್ಯವಸ್ಥಿತವಾಗಿ ಹೇರುತ್ತಿದೆಯೆಂಬುದರ ಬಗ್ಗೆ ಅನೇಕ ಅಂಕಿಅಂಶಗಳ ಸಹಿತವಾದ ಮಾಹಿತಿಗಳನ್ನು ನೀಡಿದರು. ‘‘ಹಿಂದೀ ಭಾರತದ ರಾಷ್ಟ್ರಭಾಷೆ’’, ‘‘ಭಾರತದ ಒಗ್ಗಟ್ಟಿಗೆ ಹಿಂದೀ ಬೇಕು’’ ಎಂದೆಲ್ಲಾ ನನ್ನ ಮನದಲ್ಲಿದ್ದ ಪೊಳ್ಳುನಂಬಿಕೆಗಳ ಬುಡವನ್ನು ಅಂದು ಅವರು ಅಲುಗಾಡಿಸಿಬಿಟ್ಟರು. ಅಂದಿನಿಂದ ಶುರುವಾದ ದಿಟದ ಹುಡುಕಾಟ, ಮಾಹಿತಿ ಕೂಡಿಡುವಿಕೆ ಮತ್ತು ಸೀಳುನೋಟಗಳು ಇಂದು **ಹಿಂದೀ ಹೇರಿಕೆ: ಮೂರು ಮಂತ್ರ–ನೂರು ತಂತ್ರ**ಎನ್ನುವ ಈ ಹೊತ್ತಗೆಯಾಗಿ ನಿಮ್ಮ ಕೈಯ್ಯಲ್ಲಿದೆ.

ಈ ಹೊತ್ತಗೆಯ ಮೂಲ ಉದ್ದೇಶವು – ಇಂದಿಗೂ ಹಿಂದೀ ಭಾಷೆಯನ್ನು ಭಾರತದ ರಾಷ್ಟ್ರಭಾಷೆ ಎಂದೇ ನಂಬಿರುವ, ಹಿಂದೀ ಭಾರತವನ್ನು ಜೋಡಿಸುತ್ತದೆ ಎಂದು ಕಲ್ಪಿಸಿಕೊಂಡಿರುವ, ಕನ್ನಡ ಲೋಕಲ್, ಹಿಂದೀ ನ್ಯಾಶನಲ್ ಮತ್ತು ಇಂಗ್ಲೀಶ್ ಇಂಟರ್‌ನ್ಯಾಶನಲ್ ಎಂದೇ ಭ್ರಮಿಸಿರುವ... ಹಾಗೆ ಭ್ರಮಿಸುತ್ತಾ, ಭ್ರಮಿಸುತ್ತಾ ಕನ್ನಡನಾಡಿಗೆ ಅರಿಯದೇ ಮಾರಕವಾಗುವಂತೆ ಆತ್ಮಹತ್ಯಾತ್ಮಕವಾಗಿ ನಡೆದುಕೊಳ್ಳುತ್ತಾ ಇರುವ ಕನ್ನಡಿಗರಲ್ಲಿ... ‘ಭಾರತದ ಭಾಷಾನೀತಿ’ಯು ಉಂಟು ಮಾಡಿರುವ ಕೆಡುಕುಗಳ ಬಗ್ಗೆ ಮಾಹಿತಿ ನೀಡಿ ಆ ಮೂಲಕ ಭಾರತದಲ್ಲಿ ಸರಿಯಾದ ಭಾಷಾನೀತಿಯೊಂದನ್ನು ಜಾರಿಗೆ ತರಬೇಕಾದ ಅಗತ್ಯದ ಬಗ್ಗೆ ಎಚ್ಚರ ಮೂಡಿಸುವುದೇ ಆಗಿದೆ.

ನಿಜಕ್ಕೂ ನಮ್ಮ ಮೇಲೆ ಹಿಂದೀಹೇರಿಕೆ ಆಗುತ್ತಿದೆಯೇ? ಹಿಂದೀಯನ್ನು ಒಪ್ಪುತ್ತಿರುವುದರಿಂದ ನಮಗಾಗಿರುವ ನಷ್ಟವೇನು? ಕೇಂದ್ರಸರ್ಕಾರದ ಉದ್ದೇಶಗಳೇನು? ಭಾಷಾವಾರು ರಾಜ್ಯಗಳ ಒಕ್ಕೂಟವೂ, ಪ್ರಜಾಪ್ರಭುತ್ವದ ನೆಲೆಯೂ ಆಗಿರುವ ಈ ದೇಶದಲ್ಲಿ ಹುಳುಕಿನ ಭಾಷಾನೀತಿಯೊಂದು ಹೇಗೆ ನಮ್ಮ ಬದುಕಲ್ಲಿ ಪರಿಣಾಮ ಬೀರುತ್ತಿದೆ ಎನ್ನುವುದನ್ನು ತಿಳಿಸಿಕೊಡುವ ಯತ್ನವೇ ನಿಮ್ಮ ಕೈಲಿರುವ ಈ ಹೊತ್ತಗೆ.

ಸರ್ಕಾರಿ ದಾಖಲೆಗಳು, ಸಂವಿಧಾನದ ಕಾಲಂಗಳು, ಸರ್ಕಾರಿ ಅಂತರ್ಜಾಲ ತಾಣಗಳು, ದಿನಪತ್ರಿಕೆಯ ಸುದ್ದಿಗಳು, ಕಣ್ಣಾರೆ ಕಂಡು ಅನುಭವಿಸಿದ ಅನುಭವಗಳೇ ಈ ಹೊತ್ತಗೆಯ ಮಾಹಿತಿ ಮೂಲವಾಗಿವೆ. ಹಲವೆಡೆಗಳಲ್ಲಿ ಹಿಂದೀ/ ಇಂಗ್ಲೀಶಿನ ಮೂಲಮಾಹಿತಿಯನ್ನು ಕನ್ನಡಕ್ಕೆ ತರ್ಜುಮೆ ಮಾಡಿ ಕೊಡಲಾಗಿದೆ. ಕನ್ನಡಿಗರಲ್ಲಿ ಭಾರತದ ಭಾಷಾನೀತಿಯ ಬಗ್ಗೆ, ಅದರ ಇಂದಿನ ಸ್ವರೂಪದ ಬಗ್ಗೆ, ಅದು ಉಂಟುಮಾಡಿರುವ ಕೆಡಕುಗಳ ಬಗ್ಗೆ, ಅದು ಇರಬೇಕಾದ ರೀತಿಯ ಬಗ್ಗೆ ಅರಿವುಂಟಾದರೆ ಅದೇ ನಮಗೆ ಸಾರ್ಥಕತೆ. ಕರ್ನಾಟಕದಾದ್ಯಂತ ಹಿಂದೀ ಸಾಮ್ರಾಜ್ಯಶಾಹಿಯ ಸ್ಥಾಪನೆಯ, ಹಿಂದೀ ಸಾರ್ವಭೌಮತ್ವದ ಪ್ರತೀಕವಾಗಿ ನಡೆಯುತ್ತಿರುವ ಹಿಂದೀದಿವಸ್, ಹಿಂದೀಪಾಕ್ಷಿಕಗಳು ನಿಲ್ಲಲಿ.. ಭಾರತಕ್ಕೆ ಒಂದು ಸರಿಯಾದ ಭಾಷಾನೀತಿಯ ಅಗತ್ಯವಿದೆ ಎಂಬುದು ನಮ್ಮ ಜನರಿಗೆ ಅರಿವಾಗಲೀ... ಹೈಕಮಾಂಡಿನ ಕೈಗೊಂಬೆಗಳಾಗಿರುವ ರಾಷ್ಟ್ರೀಯ ಪಕ್ಷಗಳು ಹಿಂದೀಯಿಂದಲೇ ದೇಶದ ಒಗ್ಗಟ್ಟು ಎಂಬ ಪೊಳ್ಳು ರಾಷ್ಟ್ರೀಯತೆಯ ಸಿದ್ಧಾಂತಗಳಿಗೆ ತಿಲಾಂಜಲಿ ಕೊಡಲಿ... ಕರ್ನಾಟಕದಲ್ಲಿ ತ್ರಿಭಾಷಾಸೂತ್ರದ ಶೂಲ ಇನ್ನಿಲ್ಲವಾಗಲೀ... ಎಂಬ ಒಡಲಾಳದ ಆಶಯಗಳಿಂದ ಈ ಹೊತ್ತಗೆಯನ್ನು ನಿಮ್ಮ ಕೈಗಿಡುತ್ತಿದ್ದೇವೆ.

ಈ ಹೊತ್ತಗೆಯನ್ನು ಸಿದ್ಧಪಡಿಸುವಲ್ಲಿ ಅನೇಕ ಗೆಳೆಯರು ನನ್ನೊಂದಿಗೆ ಕೈಜೋಡಿಸಿದ್ದಾರೆ. ಅನೇಕ ಬರಹಗಳನ್ನು ಅವರಿಂದ ಎರವಲು ಪಡೆದಿದ್ದೇನೆ. ಕನ್ನಡ ಕನ್ನಡಿಗ ಕರ್ನಾಟಕಗಳ ಬಗ್ಗೆ ಪ್ರಶ್ನಾತೀತ ಬದ್ಧತೆ ಹೊಂದಿರುವ ಆ ಎಲ್ಲಾ ಗೆಳೆಯರಿಗೂ ನನ್ನ ಮನದುಂಬಿದ ನೆನೆಕೆಗಳನ್ನು ಸಲ್ಲಿಸಲು ಬಯಸುತ್ತೇನೆ.

ಮುಖಪುಟ ಚಿತ್ರ ಬಿಡಿಸಿಕೊಟ್ಟ ಶ್ರೀ ಮಂಜುಗೌಡರಿಗೆ, ವಿನ್ಯಾಸ ಮಾಡಿದ ಗೆಳೆಯರಾದ ಶ್ರೀ ರಾಕೇಶ್ ಅವರಿಗೆ, ಅಂದವಾಗಿ ಅಚ್ಚು ಮಾಡಿದ ವರ್ಣಲ ಅವರಿಗೆ, ಹೊತ್ತಗೆಯನ್ನು ಹೊರತರಲು ದೇಣಿಗೆಯನ್ನು ನೀಡುವ ಮೂಲಕ ಹಣಕಾಸು ನೆರವು ನೀಡಿದ ಹಿತೈಶಿಗಳಿಗೆ ನಲ್ಮೆಯ ನೆನಕೆಗಳು.

ಆನಂದ್ ಜಿ, ಬನವಾಸಿ ಬಳಗ

# ಅಧ್ಯಾಯ – ೧

# ಮುನ್ನುಡಿ

ಭಾರತದ ಭಾಷಾನೀತಿಯ ಬಗ್ಗೆ ಇಂದಿಲ್ಲಿ ನಾವು ಚರ್ಚಿಸಬೇಕಾದ ಅಗತ್ಯವಾದರೂ ಏನಿದೆ? ಭಾರತದಂತಹ ಬಹುಭಾಷೆಯ ನಾಡಿನಲ್ಲಿ ಒಂದು ಭಾಷೆಯನ್ನು ಆಡಳಿತ ಭಾಷೆ ಮಾಡಿದ್ದರಿಂದಾಗಿ ಉಳಿದ ಭಾಷೆಗಳ ಮೇಲೆ ಎಂತಹ ಪರಿಣಾಮವಾದೀತು? ಇಷ್ಟಕ್ಕೂ ಭಾರತದ ಇಂದಿನ ಭಾಷನೀತಿ ಏನು?

# ಮುನ್ನುಡಿ

ಭಾರತದೇಶಕ್ಕೆ ಶತಶತಮಾನಗಳ ಇತಿಹಾಸವಿದೆ. ಆದರೆ ರಾಜಕೀಯವಾಗಿ ಒಂದು ಸ್ವತಂತ್ರ ದೇಶದ ಸ್ವರೂಪ ಪಡೆದದ್ದು ಆಗಸ್ಟ್ ೧೫, ೧೯೪೭ರಂದು. ಬ್ರಿಟೀಶ್ ಆಳ್ವಿಕೆಯು ಕೊನೆಗೊಂಡು ತನ್ನದೇ ಸ್ವತಂತ್ರವಾದ ಸಂವಿಧಾನ, ಧ್ವಜ, ಸೇನೆ, ಆಡಳಿತ ವ್ಯವಸ್ಥೆಗಳನ್ನು ಕಟ್ಟಿಕೊಳ್ಳುವ ನಿಟ್ಟಿನಲ್ಲಿ ಇದೊಂದು ಮಹತ್ವದ ತಿರುವಿನ ದಿವಸ. ನಾನಾ ಆಡಳಿತಗಳಲ್ಲಿ ಹರಡಿ ಹೋಗಿದ್ದ ಸುಮಾರು ೫೬೮ ಪ್ರದೇಶಗಳು ಒಟ್ಟಿಗೆ ಸ್ವತಂತ್ರ ಗಳಿಸಿ ಭಾರತ ಪಾಕಿಸ್ತಾನಗಳು ಉದಿಸಿ, ಸ್ವತಂತ್ರ ಭಾರತವು ಒಂದೇ ಆಳ್ವಿಕೆಯಡಿ ಬಂದು, ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರವಾಗಿ ಹೊರಹೊಮ್ಮಿದ ದಿವಸ ಅದು. ಭಾರತದ ಸಂವಿಧಾನವು ರೂಪುಗೊಂಡು, ಜಾರಿಗೊಂಡ ದಿವಸ ಜನವರಿ ೨೬, ೧೯೫೦. ಆ ದಿನವನ್ನು ದೇಶದೆಲ್ಲೆಡೆ ಗಣರಾಜ್ಯೋತ್ಸವ ದಿನವಾಗಿ ಆಚರಿಸಲಾಗುತ್ತದೆ. ಆಂಗ್ಲರಿಂದ ಬಿಡುಗಡೆ ಪಡೆದು ಹೊಸರೂಪ ಗಳಿಸಿಕೊಂಡ ಭಾರತವು ತನ್ನದೇ ಆದ ಸಂವಿಧಾನವನ್ನು ರಚಿಸಿಕೊಳ್ಳುವಾಗ ಸಾಕಷ್ಟು ಚರ್ಚೆಗಳನ್ನು, ಚಿಂತನೆಗಳನ್ನು ನಡೆಸಲಾಯಿತೆಂದು ಇತಿಹಾಸದ ದಾಖಲೆಗಳು ಹೇಳುತ್ತವೆ. ಸಾಕಷ್ಟು ಜನ ಮಹನೀಯರು ಅದಕ್ಕಾಗಿ ದುಡಿದು, ಸಾವಿರಾರು ಸಭೆಗಳು ನಡೆದು ಕಡೆಯಲ್ಲಿ ಈಗಿನ ಸಂವಿಧಾನವನ್ನು ಒಪ್ಪಿಕೊಳ್ಳಲಾಗಿದೆ. ಈ ದೇಶದ ಹೆಸರಿನಿಂದ ಆರಂಭಿಸಿ ಅನೇಕ ವಿಷಯಗಳ ಬಗ್ಗೆ ಸಂವಿಧಾನದಲ್ಲಿ ಹೇಳಲಾಗಿದೆ. ಇವುಗಳಲ್ಲಿ ಪ್ರಮುಖವಾದ ಒಂದು ಅಂಶವೆಂದರೆ ಭಾರತದ ಭಾಷಾನೀತಿ.

**ರಾಷ್ಟ್ರಭಾಷೆಯಿಲ್ಲದ ದೇಶ:** ಭಾರತದ ಸಂವಿಧಾನದ ರೀತ್ಯಾ ನಮ್ಮ ದೇಶಕ್ಕೆ ಯಾವುದೇ ಒಂದು ರಾಷ್ಟ್ರಭಾಷೆಯಿಲ್ಲ. ಭಾರತದ ಸಂವಿಧಾನದ ಯಾವುದೇ ಸಾಲಿನಲ್ಲಿ ಯಾವೊಂದು ಭಾಷೆಯನ್ನೂ ಈ ದೇಶದ ರಾಷ್ಟ್ರಭಾಷೆಯೆಂದು ಬರೆಯಲಾಗಿಲ್ಲ. ಈ ಸತ್ಯವನ್ನು ಹೆಚ್ಚಿನ ಭಾರತೀಯರಿಂದ ಮರೆಮಾಚಲಾಗಿದೆಯೇನೋ ಎಂಬಂತಿದೆ ವಾಸ್ತವ. ಗೊತ್ತಿದ್ದೋ ಗೊತ್ತಿಲ್ಲದೆಯೋ ನಮ್ಮ ಮಕ್ಕಳಿಗೆ ಶಾಲೆಗಳಲ್ಲಿ ಹಿಂದೀ ಭಾಷೆಯನ್ನು ಭಾರತದ ರಾಷ್ಟ್ರಭಾಷೆಯೆನ್ನುವ ಸುಳ್ಳನ್ನು ದಿನನಿತ್ಯ ಕಲಿಸಲಾಗುತ್ತಿದೆ ಎನ್ನುವುದು ಸಂವಿಧಾನಕ್ಕೆಸಗಿರುವ ಅಪಚಾರವೆನ್ನುವುದು ಸರಿಯಾದ ಮಾತಾಗಿದೆ. ಹಾಗಾದರೆ ಭಾರತದ ಭಾಷಾನೀತಿಯೆಂಥದ್ದು ನೋಡೋಣ ಬನ್ನಿ.

**ಇಂದಿನ ಭಾರತದ ಭಾಷಾನೀತಿ:**

ಭಾರತ ಸಂವಿಧಾನದ ೩೪೩ನೇ ಕಲಮಿನ ಅನ್ವಯ ಭಾರತ ಒಕ್ಕೂಟದ ಆಡಳಿತ ಭಾಷೆ 'ದೇವನಾಗರಿಯಲ್ಲಿ ಬರೆಯಲ್ಪಡುವ ಹಿಂದೀ'ಯಾಗಿರುತ್ತದೆ. (Official language ಎಂದು ಬರೆಯಲಾಗಿರುವ ಈ ಪದದ ನೇರ ಅರ್ಥ ಅಧಿಕೃತ ಭಾಷೆ ಎಂದಾದರೂ ಆಡಳಿತ ಭಾಷೆ ಎಂದು ಬಳಸುವುದು ಹೆಚ್ಚು ಸೂಕ್ತ ಎಂದು ಎಲ್ಲೆಡೆ ಹಾಗೇ ಬಳಸಲಾಗಿದೆ.) ಒಕ್ಕೂಟದ ವಹಿವಾಟಿನಲ್ಲಿ ಅಂತರರಾಷ್ಟ್ರೀಯವಾಗಿ ರೂಢಿಯಲ್ಲಿರುವ ಭಾರತೀಯ ಅಂಕೆಗಳನ್ನು ಬಳಸಲಾಗುತ್ತದೆ.

ಹಿಂದೀ ಭಾಷೆಯ ಜೊತೆಯಲ್ಲೇ ಈಗೆಲ್ಲೆಲ್ಲಿ ಇಂಗ್ಲೀಶಿನ ಬಳಕೆಯಿದೆಯೋ ಅದನ್ನು ಹೀಗೇ ಮುಂದುವರೆಸಬೇಕು ಎನ್ನಲಾಗಿದೆ. ಇಂಗ್ಲೀಶಿನ ಜೊತೆಯಲ್ಲಿ ದೇವನಾಗರಿಯಲ್ಲಿನ ಹಿಂದೀಯ ಅಕ್ಷರಗಳನ್ನೂ, ಅಂಕೆಗಳನ್ನೂ ಬಳಸುವಂತೆ ಆದೇಶಿಸುವ ಅಧಿಕಾರವು ಭಾರತದ ರಾಷ್ಟ್ರಪತಿಗಳಿಗೆ ಇರುತ್ತದೆ. ಹಿಂದೀಯೊಂದಿಗೆ ಭಾರತದ ಅಧಿಕೃತ ಭಾಷೆಯಾಗಿ ಬಳಸಲಾಗುತ್ತಿರುವ ಇಂಗ್ಲೀಶಿನ ಈ ಬಳಕೆಯು ಸಂವಿಧಾನ ಜಾರಿಯಾದ ಹದಿನೈದು ವರ್ಷಗಳವರೆಗೆ ಜಾರಿಯಲ್ಲಿದ್ದು ನಂತರ ಹಿಂದೀಯೊಂದನ್ನೇ ಬಳಸಬೇಕಾಗಿರುತ್ತದೆ.

**ಹೊತ್ತಗೆಯ ಹೆಸರಿನ ಬಗ್ಗೆ:** ಭಾರತವು ಒಪ್ಪಿಕೊಂಡಿರುವ ಈ ಭಾಷಾನೀತಿಯ ಆಧಾರದ ಮೇಲೆ ಸಂವಿಧಾನದಲ್ಲಿ ೩೪೩ರಿಂದ ೩೫೧ರವರೆಗೆ ಅನೇಕ ವಿಧಿಗಳಲ್ಲಿ ವಿವರಣೆಗಳನ್ನು ನೀಡಲಾಗಿದೆ. ಇದರ ಆಧಾರದ ಮೇರೆಗೆ ಭಾರತದ ಭಾಷಾ ನಿಯಮವನ್ನು ರೂಪಿಸಲಾಗಿದೆ. ಈ ನಿಯಮದಲ್ಲಿ ಹೀಗೆ ಬರೆಯಲಾಗಿದೆ:

> **It has been the policy of the Government of India that progressive use of Hindi in the official work may be ensured through persuasion, incentive and goodwill.**

ಏನು ಹೀಗೆಂದರೆ ಅರ್ಥ? ಭಾರತ ಸರ್ಕಾರವು ಆಡಳಿತಾತ್ಮಕವಾಗಿ ಹಿಂದೀಭಾಷೆಯನ್ನು ಬಳಸುವುದನ್ನು ಒತ್ತಾಯ, ಆಮಿಶ ಮತ್ತು ವಿಶ್ವಾಸಗಳ ಮೂಲಕ ನಿರಂತರವಾಗಿ ಹೆಚ್ಚಿಸುವುದನ್ನು ಖಾತ್ರಿಪಡಿಸಿಕೊಳ್ಳುವುದನ್ನು ನೀತಿಯಾಗಿಸಿಕೊಂಡಿದೆ.

ಇಡೀ ನಿಯಮವನ್ನು ರೂಪಿಸುವಾಗ ಬಹಳ ಚಾಣಾಕ್ಷತನದಿಂದ ಪದಗಳನ್ನು ಬಳಸಲಾಗಿದೆ. 'ಭಾಷಾ ಹರಡುವಿಕೆ ಆಗಬೇಕು' ಎನ್ನುವುದರ ಅರ್ಥವೇ ಅದು ಸಹಜವಾಗಿ ಬಳಸುತ್ತಿಲ್ಲದ ಜನರಲ್ಲಿ ಹರಡಬೇಕೆನ್ನುವುದಾಗಿದೆ. ಹಾಗೇ ಹಿಂದೀಯೇತರರು ಹಿಂದೀಯನ್ನು ಒಪ್ಪಿಕೊಳ್ಳುವಂತೆ ಮಾಡಲು ಅನುಸರಿಸಬೇಕಾದ ಮಾರ್ಗಗಳ ಬಗ್ಗೆ ಮಾತನ್ನಾಡುವಾಗ persuasion ಎನ್ನುವ ಪದದ ಅರ್ಥ ಅಂತಹ ಜನರ ಮನವೊಲಿಸಿ ಹಿಂದೀಯನ್ನು ಒಪ್ಪಿಸು ಎಂದಾಗುತ್ತದೆ. ಹೌದೂ! ನಿಘಂಟಿನ ಅರ್ಥದಂತೆ persuasion ಎಂದರೆ ಮನವೊಲಿಸು, ಮನಒಪ್ಪಿಸು, ವಾದಮಾಡಿ ಮನವರಿಕೆ ಮಾಡು, ನಂಬಿಕೆಯೊಂದನ್ನು ಒಪ್ಪುವಂತೆ ಮಾಡು ಎಂದೇ ಆಗಿದೆ. ವಾಸ್ತವದಲ್ಲಿ ಕೇಂದ್ರಸರ್ಕಾರ ಮಾಡುತ್ತಿರುವುದು ಒಪ್ಪಿಸುವುದೇ ಆಗಿದ್ದರೂ ಹಾಗೆ ಒಪ್ಪಿಸಲು ಒತ್ತಾಯಪಡಿಸುವುದೇ ಆಗಿದೆ. ಎಲ್ಲಿದೆ ಒತ್ತಾಯ ಎಂದರೆ 'ಕನ್ನಡದ ಮಕ್ಕಳ ಶಾಲಾಕಲಿಕೆಯಲ್ಲಿ ಹಿಂದೀಕಲಿಕೆ ಕಡ್ಡಾಯ ಎಂಬುದರಲ್ಲಿದೆ.. ಕೇಂದ್ರಸರ್ಕಾರಿ ನೌಕರಿ ಬೇಕಿದ್ದರೆ ಹಿಂದೀಯನ್ನು ಒಂದು ಭಾಷೆಯಾಗಿ ಕಲಿತಿದ್ದಕ್ಕೆ ಪುರಾವೆಯಾಗಿ ಅಂಕಪಟ್ಟಿಯಲ್ಲಿ ಹಿಂದೀ ಎಂದು ಬರೆದಿರಬೇಕು ಎನ್ನುವಲ್ಲಿದೆ... ರೈಲ್ವೇಯಲ್ಲಿ ನೌಕರಿಗೆ ಅರ್ಜಿ ಹಾಕಬೇಕೆಂದರೆ ಹಿಂದೀಯಲ್ಲೇ ಅರ್ಜಿ ಬರೆಯುವುದು ಕಡ್ಡಾಯ ಎನ್ನುವುದರಲ್ಲಿದೆ... ಕೇಂದ್ರಸರ್ಕಾರಿ ಕಚೇರಿಗಳಲ್ಲಿ ಹಿಂದೀಯಲ್ಲಿ ಬರೆಯಲಾದ ಪತ್ರಗಳಿಗೆ ಹಿಂದೀಯಲ್ಲೇ ಉತ್ತರಿಸಬೇಕೆನ್ನುವ ಕಾಯ್ದೆ ಮಾಡಿರುವುದರಲ್ಲಿದೆ. ಆ ಮೂಲಕ ಹಿಂದೀಯನ್ನು ಒಪ್ಪುವ ಅನಿವಾರ್ಯತೆಗೆ, ಒತ್ತಾಯಕ್ಕೆ ಭಾರತದ ಎಲ್ಲಾ ಹಿಂದೀಯೇತರರನ್ನು ದೂಡುತ್ತಿರುವುದರಲ್ಲಿದೆ. ಹಾಗಾಗೇ ಸಂವಿಧಾನದ ಆಶಯವಾದ ಈ ವಾಕ್ಯವನ್ನು ಕನ್ನಡಕ್ಕೆ ತರುವಾಗ persuasion ಎಂಬುದಕ್ಕೆ ಮನವೊಪ್ಪಿಸುವಿಕೆ ಎನ್ನದೇ **ಒತ್ತಾಯ** ಎಂದು ನಾವು ಹೇಳಿರುವುದು. ಹಾಗಾಗೇ ಈ ಹೊತ್ತಗೆಯ ಹೆಸರಿನಲ್ಲೂ ಕೂಡಾ **ಒತ್ತಾಯ** ಎಂದು ಬರೆಯಲಾಗಿದೆ.

ಹಾಗೇ, ಎರಡನೆಯ ಸಾಧನವಾದ ಆಮಿಶದ ಬಗ್ಗೆಯೂ ಹೇಳಬೇಕಾಗಿದೆ. ಇಂದು ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಎಲ್ಲೆಡೆ ಹಿಂದೀ ದಿನಾಚರಣೆಗಳು, ಹಿಂದೀ ವಾರಗಳು, ಹಿಂದೀ ಪಾಕ್ಷಿಕಗಳೂ ನಡೆಯುತ್ತಿವೆ. ಈ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ನೌಕರರು ಮತ್ತು ಅವರ ಕುಟುಂಬದವರು ಈ ಕಾರ್ಯಕ್ರಮದ ಸ್ಪರ್ಧೆಗಳಲ್ಲಿ ಪಾಲ್ಗೊಂಡರೂ ಸಾಕು, ನೂರಾರು ರೂಪಾಯಿ ಬಹುಮಾನಗಳನ್ನು ಕೊಡಲಾಗುತ್ತದೆ. ಹಿಂದೀ ಭಾಷಿಕರು ಹಿಂದೀಯೇತರ ಪ್ರದೇಶಕ್ಕೆ ವರ್ಗವಾಗಲು ಒಪ್ಪಿದರೆ ಅವರಿಗೆ ಹೆಚ್ಚಿನ ಭತ್ಯೆ ನೀಡುವಂತೆ ಸಂಸತ್ ಸಮಿತಿಯು ಶಿಫಾರಸ್ಸು

ಮಾಡುತ್ತದೆ. ಇವೆಲ್ಲಾ ಉತ್ತೇಜನ ನೀಡುವುದು ಎಂದೇ ಕೇಂದ್ರಸರ್ಕಾರ ಹೇಳಿದರೂ ಇವೆಲ್ಲಾ ಹಿಂದೀ ಒಲ್ಲೆನೆನ್ನುವವರಿಗೆ ಒಡ್ಡುವ ಆಮಿಶವೇ ಆಗಿದೆ. ಹೀಗಾಗಿ ಸರ್ಕಾರದ ಎರಡನೇ ಸಾಧನವನ್ನು **ಆಮಿಶ**ವೆಂದು ಕರೆಯಲಾಗಿದೆ.

ಬಹುಮುಖ್ಯವಾಗಿ ಹಿಂದೀಯನ್ನು ಆಡಳಿತ ಭಾಷೆಯಾಗಿಸಲು ಕೊಡಲಾದ ಕಾರಣ ಅದು ಭಾರತೀಯ ಭಾಷೆಯೆನ್ನುವುದು ಮತ್ತು ಭಾರತದಲ್ಲಿ ಹೆಚ್ಚು ಜನರಿಗೆ ಅರ್ಥವಾಗುತ್ತದೆ ಎನ್ನುವುದು. ಇದಕ್ಕಿಂತ ಮುಖ್ಯವಾಗಿ ಹಿಂದೀಯನ್ನು ರಾಷ್ಟ್ರಭಾಷೆಯನ್ನಾಗಿ ಮಾಡಲಾಗಲಿಲ್ಲ ಎನ್ನುವುದು. ಸ್ವಾತಂತ್ರ ಬಂದಾಗ ಭಾರತದಲ್ಲಿ ಅಕ್ಷರಸ್ಥರ ಪ್ರಮಾಣವೇ ನೂರಕ್ಕೆ ೧೨ರಷ್ಟಿತ್ತಂತೆ. ಇಂತಹುದರಲ್ಲಿ 'ಇಡೀ ಭಾರತದ ಜನರೆಲ್ಲಾ ತಮ್ಮನ್ನು ತಾವು ಆಳಿಕೊಳ್ಳಲು ಸ್ವತಂತ್ರರು, ಆದರೆ ಆಡಳಿತದ ಭಾಷೆ ಮಾತ್ರಾ ಹಿಂದೀಯಾಗಿರಬೇಕು' ಎನ್ನುವ ನಿಲುವನ್ನು ಸಂವಿಧಾನದ ಮೂಲಕ ನಮ್ಮ ಹಿರಿಯರು ಮಾಡಿದ್ದು ಇಂದು ಅನೇಕ ಸಂಸ್ಕೃತಿಗಳು, ಭಾಷೆಗಳು ದುಃಸ್ಥಿತಿ ತಲುಪಲು ಕಾರಣವಾಗಿದೆ. ಹಿಂದೀಯನ್ನು ಒಪ್ಪಿಸಲು ಬಳಸಿದ ಕಾರಣಗಳು ಮಾತ್ರಾ ಮುಂದಾಲೋಚನೆ, ಪರಿಣಾಮಗಳ ಬಗ್ಗೆ ಚಿಂತನೆ ಮತ್ತು ವಾಸ್ತವದ ಅರಿವಿಗಿಂತಾ ಹೆಚ್ಚಾಗಿ ಭಾವುಕತೆಯನ್ನು ಆಧರಿಸಿತ್ತು ಎಂದರೆ ತಪ್ಪಾಗಲಾರದು. "ಭಾರತ ಪರಾಧೀನವಾಗಲು ಒಗ್ಗಟ್ಟಿಲ್ಲದ್ದು ಕಾರಣ. ಒಗ್ಗಟ್ಟಿಗೆ ಒಂದೇ ಭಾಷೆ ಇರುವುದು ಅತ್ಯಗತ್ಯ, ರಾಜ್ಯರಾಜ್ಯಗಳ ನಡುವಿನ ಸಂಪರ್ಕಕ್ಕೆ, ಕೇಂದ್ರ-ರಾಜ್ಯಗಳ ಸಂಪರ್ಕಕ್ಕೆ ಒಂದು ಭಾರತೀಯ ಭಾಷೆಯೇ ಇರಬೇಕು, ಇದಕ್ಕೆ ಸೂಕ್ತವಾದ ಭಾಷೆ ಹಿಂದೀ, ಸ್ವಾತಂತ್ರ ಹೋರಾಟದಲ್ಲಿ ಜನರ ಭಾಷೆ ಹಿಂದೀಯಾಗಿತ್ತು, ಹಾಗಾಗಿ ಹಿಂದೀಯೆಂದರೆ ದೇಶಪ್ರೇಮದ ಸಂಕೇತ, ಹಿಂದೀಯೆಂದರೆ ಭಾರತದ ಒಗ್ಗಟ್ಟಿನ ಸಾಧನ, ಪ್ರಪಂಚಕ್ಕೆ ತೋರಿಸಿಕೊಳ್ಳಲು ದೇಶಕ್ಕೆ ಒಂದು ಭಾಷೆ ಇರಬೇಕು" ಎಂಬ ಅನಿಸಿಕೆಗಳು ಇಂತಹ ನಿಲುವಿಗೆ ಕಾರಣವಾಯಿತು. ಈ ಅನಿಸಿಕೆಗಳು ಕಾಂಗ್ರೆಸ್ಸಿನ ಮಹಾತ್ಮಾಗಾಂಧಿಯವರಂತಹ ರಾಷ್ಟ್ರೀಯ ನಾಯಕರುಗಳಿಗೇ ಇದ್ದುದ್ದರಿಂದ ಅವರ ಅನುಯಾಯಿಗಳೆಲ್ಲಾ ಕಣ್ಣುಮುಚ್ಚಿ ತಮ್ಮ ತಮ್ಮ ರಾಜ್ಯಗಳಲ್ಲಿ ಹಿಂದೀ ಜಾರಿಗೆ ಪಣತೊಟ್ಟರು. ಇಂದಿಗೂ ಭಾರತದ ರಾಷ್ಟ್ರೀಯ ಪಕ್ಷಗಳ ಆಶಯವು 'ಒಂದು ದೇಶ, ಒಂದು ಭಾಷೆ' ಎನ್ನುವಂತೆಯೇ ಇದೆಯೆಂದರೆ ಅಚ್ಚರಿಯಾಗುತ್ತದೆ. ಆದರೆ ವೈವಿಧ್ಯತೆಯಲ್ಲಿ ಏಕತೆ ಎನ್ನುವುದೂ ನಮ್ಮ ಕಿವಿಗೆ ಆಗಾಗ ಬೀಳುತ್ತಿರುತ್ತದೆ. ಇಂತಹ ದ್ವಂದ್ವದ ಹಿಂದಿರುವ ಸಂದೇಶವೇನೆಂದರೆ

ನಿಮ್ಮ ನಿಮ್ಮ ಭಾಷೆಗಳನ್ನು ನಿಮ್ಮ ಮನೆಯಲ್ಲಿಟ್ಟುಕೊಳ್ಳಿ, ಬೀದಿಗೆ ಬಂದರೆ "ಹಿಂದೀ"ಯಲ್ಲಿ ವ್ಯವಹರಿಸಿ ಎನ್ನುವುದಾಗಿದೆ. ಅರೆ, ಹಿಂದೀಗೆ ಕೇಂದ್ರಸರ್ಕಾರದ ಆಡಳಿತ ಭಾಷೆ ಎನ್ನುವ ಸ್ಥಾನ ಸಿಕ್ಕಿದ ಮಾತ್ರಕ್ಕೇ ಕನ್ನಡ ಹೇಗೆ ಅಳಿದುಹೋಗುತ್ತದೆ ಎನ್ನುವ ಪ್ರಶ್ನೆ ಮನದಲ್ಲೇಳುವುದು ಸಹಜವಾಗಿದೆ. ಇಂತಹ ಪ್ರಶ್ನೆಗಳಿಗೆ ಉತ್ತರವಾಗಿ "ಸರಳವಾಗಿ ಒಂದು ಸಾಲಿನಲ್ಲಿ ಹಿಂದೀ ಭಾಷೆಗೆ ಭಾರತದ ಕೇಂದ್ರಸರ್ಕಾರದ ಆಡಳಿತ ಭಾಷೆ ಎಂದು ನೀಡಿರುವ ಪಟ್ಟವು ಇಡೀ ಭಾರತದ ಭೌಗೋಳಿಕ ಅಸಮಾನತೆಗೆ, ಹಿಂದೀಯೇತರರನ್ನು ಎರಡನೇ ದರ್ಜೆಯ ಪ್ರಜೆಗಳನ್ನಾಗಿಸುವುದಕ್ಕೆ ಕಾರಣವಾಗಿದೆ" ಎನ್ನುವುದನ್ನು ಕಣ್ತೆರೆದು ನೋಡಿ ಅರಿಯಬೇಕಾಗಿದೆ.

ಭಾರತದ ಸಂವಿಧಾನ, ಆಡಳಿತ ಭಾಷಾನೀತಿ ನಿಯಮಗಳು, ಕಾಯ್ದೆಗಳು ಹಿಂದೀಯನ್ನು "ಆಡಳಿತ ಭಾಷೆ" "ರಾಜ್‌ಭಾಷಾ" ಎನ್ನುವ ಮೂಲಕ ಇಡೀ ಭಾರತಕ್ಕೆ ಹಿಂದೀಯನ್ನು ಆಡಳಿತ ಭಾಷೆಯನ್ನಾಗಿಸಿದ ನಡೆಯನ್ನು ಕಂಡಾಗ ಹಲವು ಪ್ರಶ್ನೆಗಳೂ ಮನದಲ್ಲೇಳುತ್ತವೆ. ಭಾರತದಂತಹ ಬಹುಭಾಷಾ ನಾಡಲ್ಲಿ ಹಿಂದೀಗೆ ಮಾತ್ರಾ ಯಾಕೆ ಇಂತಹ ವಿಶೇಷ ಸ್ಥಾನಮಾನ? ಯಾಕೆ ಹಿಂದೀಗೆ ರಾಷ್ಟ್ರಭಾಷೆಯ ಸ್ಥಾನಮಾನವನ್ನು ನೀಡಿಲ್ಲ? ಯಾಕೆ ಹಿಂದೀಗೆ ಆಡಳಿತ ಭಾಷೆ (ಅಫಿಶಿಯಲ್ ಲಾಂಗ್ವೇಜ್) ಅನ್ನುವ ಹೆಸರು ನೀಡಲಾಗಿದೆ? ಯಾಕೆ ಹಿಂದೀಯ ಜೊತೆಯಲ್ಲೇ ಇಂಗ್ಲೀಶಿಗೂ ಅಂತಹ ಸ್ಥಾನಮಾನವನ್ನು ನೀಡಲಾಗಿದೆ? ಸಂವಿಧಾನದಲ್ಲಿ ಬರೆಯಲಾದ ಈ ಸಾಲುಗಳ ಹಿಂದಿನ ಇತಿಹಾಸವೇನು? ನಡೆದ ಚರ್ಚೆಗಳೇನು? ಯಾರು ಹಿಂದೀಯನ್ನು ರಾಷ್ಟ್ರಭಾಷೆ ಮಾಡಬೇಕೆಂದರು? ಯಾಕೆ ಹಾಗೆಂದರು? ಯಾರು ಹಿಂದೀಯನ್ನು ರಾಷ್ಟ್ರಭಾಷೆಯನ್ನಾಗಿಸುವುದರ ವಿರುದ್ಧವಾಗಿ ನಿಂತರು? ಅವರುಗಳು ಯಾವ ಕಾರಣಕ್ಕೆ ಹಾಗೆಂದರು?... ಹೀಗೆ ಹತ್ತಾರು ವಿಷಯಗಳತ್ತ ಕಣ್ಣು ಹಾಯಿಸೋಣ.

ಹಿಂದೀ ಭಾಷೆಯ ಮೂಲಕ ಭಾರತದೇಶ ಒಂದಾಗುತ್ತಿದೆಯೋ? ಒಡೆದು ಹೋಗುತ್ತಿದೆಯೋ? ಹಿಂದೀ ಭಾಷೆಯು ಭಾರತದ ಜನರಲ್ಲಿ ದೇಶಪ್ರೇಮ ಹೆಚ್ಚು ಮಾಡುತ್ತಿದೆಯೋ? ಅಥವಾ ಆ ಭ್ರಮೆಯಲ್ಲಿಟ್ಟೇ ಹಿಂದೀಯೇತರ ಜನಾಂಗಗಳ ಅಳಿವಿಗೆ ಮುನ್ನುಡಿ ಹಾಡುತ್ತಿದೆಯೋ? ಹಿಂದೀಭಾಷೆಯು ನಮ್ಮ ನೆಲದಲ್ಲೇ ನಮ್ಮನ್ನು ಪರಕೀಯರನ್ನಾಗಿಸುತ್ತಿದೆಯೋ? ಎಂಬುದನ್ನು ಅರಿಯಬೇಕಾಗಿದೆ.

ಯಾವ ಕಾರಣಗಳನ್ನು ನೀಡಿ ಹಿಂದೀಯನ್ನು ಒಪ್ಪಿಸಲಾಗುತ್ತಿದೆಯೋ ಆ ಕಾರಣಗಳೆಲ್ಲಾ ಹೇಗೆ ಹುಸಿ ಎನ್ನುವುದನ್ನು ನಾವು ಅರಿಯಬೇಕಾಗಿದೆ. ಬಾಯಿಮಾತಲ್ಲಿ ವೈವಿಧ್ಯತೆಯಲ್ಲಿ ಏಕತೆ ಎನ್ನುತ್ತಾ, ಒಂದು ಭಾಷೆಗೆ ಮಾತ್ರಾ ವಿಶೇಷವಾದ ಸ್ಥಾನಮಾನ ನೀಡಿ ಸಮಾನ ಗೌರವದ ಒಕ್ಕೂಟ ವ್ಯವಸ್ಥೆಯೊಂದನ್ನು ಕಟ್ಟುವ ಅವಕಾಶವನ್ನು ಭಾರತ ಕಳೆದುಕೊಳ್ಳುತ್ತಿದೆಯೇನೋ ಎನ್ನಿಸುತ್ತಿದೆ. ಭಾರತದ ಇಂದಿನ ಭಾಷಾನೀತಿಯನ್ನು ಕಂಡಾಗ, ಯಾರ ಮೇಲೂ ಏನನ್ನಾದರೂ ಹೇರುವುದು ಹೇಯ ಎಂಬುದು ನಮ್ಮ ಸರ್ಕಾರಗಳಿಗೆ ಏಕಿನ್ನೂ ಅರ್ಥವಾಗುತ್ತಿಲ್ಲಾ ಎಂಬ ಕಳವಳವಾಗುತ್ತದೆ. ವೈವಿಧ್ಯತೆಯನ್ನು ಅಳಿಸಿ ಒಗ್ಗಟ್ಟು ಸಾಧಿಸಬಲ್ಲೆವು ಎನ್ನುವ ಭ್ರಮೆಯು ನಮ್ಮವರಲ್ಲಿ ಆದಷ್ಟು ಬೇಗ ಅಳಿಯಲಿ ಎಂದು ಆಶಿಸುವಂತಾಗುತ್ತದೆ.

ಒಂದೆಡೆ ಭಾರತದೇಶದಲ್ಲಿ ಪ್ರತಿಯೊಬ್ಬ ನಾಗರೀಕನೂ ಸಮಾನ. ದೊರೆ ಆಳು ಎನ್ನುವ ಬೇಧವಿಲ್ಲದೆ ಎಲ್ಲರಿಗೂ ಸಮಾನ ಹಕ್ಕುಗಳಿವೆ ಅನ್ನುವ ಭಾರತವು ಮತ್ತೊಂದೆಡೆ ಒಂದು ಭಾಷೆಯ ಜನರಿಗೆ ದೇಶದ ಯಾವಮೂಲೆಗೆ ಹೋದರೂ ತೊಂದರೆಯಾಗದಂತಹ ವ್ಯವಸ್ಥೆಯನ್ನು ಕಟ್ಟಿಕೊಡಲು ಪಣತೊಟ್ಟಿರುವುದು ವೈರುಧ್ಯವೆನ್ನಿಸುತ್ತದೆ. ಕನ್ನಡನಾಡಿಗೆ ವಲಸೆ ಬಂದ ಹಿಂದೀಯವನಿಗೆ ಇಲ್ಲಿನ ಮೆಟ್ರೋ ರೈಲಿನಲ್ಲಿ, ರೈಲು, ಬಸ್ಸುಗಳಲ್ಲಿ, ವಿಮಾನ ನಿಲ್ದಾಣದಲ್ಲಿ, ಪೋಸ್ಟ್‌ಆಫೀಸ್, ಪಾಸ್‌ಪೋರ್ಟ್ ಕಛೇರಿಯೇ ಮೊದಲಾದ ಕಡೆಗಳಲ್ಲಿ ಹಿಂದೀಯಲ್ಲಿಯೇ ಎಲ್ಲಾ ಸೇವೆಯ ಸೌಕರ್ಯಗಳನ್ನೂ ಕಾಯ್ದೆಕಾನೂನುಗಳ ಮೂಲಕ ಒದಗಿಸಿಕೊಡುತ್ತಿರುವ ಕೇಂದ್ರಸರ್ಕಾರವು ಅಂಥಾ ವಲಸಿಗರಿಗೆ ಬೆಂಗಳೂರಿನ ನಾಗರೀಕರ ಜೊತೆ ವ್ಯವಹರಿಸಲು ಅನುಕೂಲ ಆಗುವಂತೆ ನಮ್ಮೂರಿನ ಶಾಲೆಗಳಲ್ಲೂ ಹಿಂದೀ ಭಾಷೆಯ ಕಲಿಸುವಿಕೆಯನ್ನು ಕಡ್ಡಾಯ ಮಾಡಿದೆ. ಹೀಗೆ ಮಾಡಲು 'ಹಿಂದೀ ದೇಶದ ಒಗ್ಗಟ್ಟಿಗೆ ಪೂರಕ, ದೇಶಪ್ರೇಮದ ಪ್ರತೀಕ' ಎಂದೆಲ್ಲಾ ಭ್ರಮೆಯನ್ನು ತುಂಬಲಾಗುತ್ತಿದೆ. ಈ ಮೂಲಕ ಹಿಂದೀ ಭಾಷಿಕ ವಲಸಿಗರಿಗೆ ಸಕಲ ಸೌಕರ್ಯಗಳನ್ನೂ ಮಾಡಿಕೊಡುತ್ತಿರುವ ಭಾರತದ ಕೇಂದ್ರಸರ್ಕಾರವು ಇದೇ ಸವಲತ್ತುಗಳನ್ನು ಭಾರತದ ಪ್ರಜೆಗಳೇ ಆಗಿರುವ ಕನ್ನಡಿಗರಿಗೂ ಒದಗಿಸಿ ಕೊಡುವುದೇನು?

ಭಾರತೀಯರೆಲ್ಲಾ ಒಂದೇ ಎನ್ನುವ, ಸಮಾನತೆಯೇ ಜೀವಾಳ ಎನ್ನುವ, ವೈವಿಧ್ಯತೆಯಲ್ಲಿ ಏಕತೆ ಎನ್ನುವ ಭಾರತಸರ್ಕಾರವು ಕನ್ನಡದವರಿಗೆ ನವದೆಹಲಿಯ

ಮೆಟ್ರೋ ರೈಲಿನಲ್ಲಿ, ಕೊಲ್ಕೊತ್ತಾದ ಪೋಸ್ಟ್‌ಆಫೀಸಿನಲ್ಲಿ, ಮುಂಬೈಯ ಪಾಸ್‌ಪೋರ್ಟ್ ಕಛೇರಿಯಲ್ಲಿ ಕನ್ನಡದಲ್ಲಿ ಸೇವೆ ಒದಗಿಸುತ್ತದೇನು? ಹೋಗಲೀ, ಅಂತಹ ಬೇಡಿಕೆಯನ್ನು ಪರಿಶೀಲಿಸಲಾದರೂ ಮನಸ್ಸು ಮಾಡುವುದೇನು? ಸಂವಿಧಾನದಲ್ಲಿ ಭಾರತದ ಕೇಂದ್ರಸರ್ಕಾರದ ಆಡಳಿತ ಭಾಷೆ ಹಿಂದೀ ಎಂದು ಬರೆಯುವಾಗ 'ಇದು ಬರೀ ಕೇಂದ್ರಸರ್ಕಾರದ ಕಛೇರಿಗಳಿಗೆ ಮಾತ್ರಾ ಸೀಮಿತ' ಎಂದು ಮರುಳು ಮಾಡಿ, ಇದೀಗ ಕನ್ನಡನಾಡಿನ ಹಳ್ಳಿಹಳ್ಳಿಗಳ ಶಾಲೆಗಳ ಮಕ್ಕಳಿಗೂ ಏಕೆ ಹಿಂದೀ ಕಲಿಕೆಯನ್ನು ಕಡ್ಡಾಯ ಮಾಡಲಾಗಿದೆ? ಏಕೆ ನಮ್ಮೂರುಗಳ ಬ್ಯಾಂಕಿನಲ್ಲಿ, ರೈಲ್ವೇಯಲ್ಲಿ ಕೆಲಸ ಸಿಗಬೇಕೆಂದರೂ ಹಿಂದೀ ಗೊತ್ತಿರಬೇಕಾದ್ದು ಕಡ್ಡಾಯವೆಂದು ಮಾಡಲಾಗಿದೆ? ತ್ರಿಭಾಷಾಸೂತ್ರ ಎಂದು ಸ್ಥಳೀಯ ಭಾಷೆಯನ್ನೂ ಬಳಸಲು ಅಡ್ಡಿಯಿಲ್ಲ ಎನ್ನುವ ಉದಾರತೆಯನ್ನು ತೋರಿಸುವ ದೊಡ್ಡಸ್ತಿಕೆ ಏಕೆ? ನಮ್ಮ ನಾಡಿನಲ್ಲಿ ನಮ್ಮ ಭಾಷೆಯಲ್ಲಿ ನಾವು ಸೇವೆ ಕೇಳುವುದು, ನಮ್ಮೂರ ವ್ಯವಸ್ಥೆಗಳನ್ನು ಹೊಂದುವುದು ನಮ್ಮ ಹಕ್ಕಲ್ಲವೇ? ಹಾಗೆ ಸೇವೆ ನೀಡುವುದು, ವ್ಯವಸ್ಥೆ ರೂಪಿಸುವುದು ಸರ್ಕಾರದ ಹೊಣೆಯಲ್ಲವೇ? ಇಷ್ಟಕ್ಕೂ ತ್ರಿಭಾಷಾಸೂತ್ರದ ಜಾರಿ ಎಲ್ಲಾ ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಎಲ್ಲಾಗಿದೆ? ವಾಸ್ತವವಾಗಿ ಕರ್ನಾಟಕದಲ್ಲಿ ಎಲ್ಲೆಲ್ಲಿ ಕನ್ನಡವಿದೆಯೋ ಅಲ್ಲೆಲ್ಲಾ ಹಿಂದೀಯನ್ನೂ ಬಳಕೆಗೆ ತರಲು ತ್ರಿಭಾಷಾಸೂತ್ರ ಜಾರಿಯಾಗುತ್ತಿದೆ ಎನ್ನುವುದನ್ನು ಗಮನಿಸಿದಾಗ ವಾಸ್ತವವಾಗಿ ಈ ತ್ರಿಭಾಷಾಸೂತ್ರವನ್ನು ಜಾರಿಗೊಳಿಸಿರುವುದೂ ಕೂಡಾ ಹಿಂದೀ ಭಾಷೆಗೆ ಜಾಗ ಮಾಡಿಕೊಡಲು ಮಾತ್ರವೇ ಆಗಿದೆ ಎನ್ನುವುದು ಮನದಟ್ಟಾಗುತ್ತದೆ.

ಒಂದು ಭಾಷೆಯ ಜನರಿಗೆ ಮಾತ್ರಾ ಅನುಕೂಲ ಮಾಡಿಕೊಡುವ ಉದ್ದೇಶವನ್ನು ಭಾರತದ ಕೇಂದ್ರಸರ್ಕಾರವು ಹೊಂದಿರುವುದನ್ನು ಕಣ್ಣೆದುರು ಕಾಣುವಾಗ, ಇಂತಹ ತಾರತಮ್ಯಕ್ಕೆ ಭಾರತ ಅನುಸರಿಸುತ್ತಿರುವ ಭಾಷಾನೀತಿಯೇ ಕಾರಣವಾಗಿರುವಾಗ ಅಂತಹ ನೀತಿಗೆ ಕೊನೆಹಾಡಬೇಕಾದ, ಸಮಾನತೆ–ಸಮಾನ ಸೌಕರ್ಯದ (ಅಥವಾ ಸಮಾನ ತೊಡಕಿನ)–ಸಮಾನ ಗೌರವದ ಭಾಷಾನೀತಿಯನ್ನು ರೂಪಿಸಿ, ಜಾರಿಗೊಳಿಸುವ ಪ್ರಜಾತಾಂತ್ರಿಕ ಪ್ರಕ್ರಿಯೆಯೊಂದು ತುರ್ತಾಗಿ ಆರಂಭ ಆಗಬೇಕಾಗಿದೆಯಲ್ಲವೇ?

ಆಡಳಿತ ಭಾಷೆ ಎನ್ನುವುದು ಬರಿಯ ಭಾಷೆಗೆ ಮಾತ್ರಾ ಸೀಮಿತವಾಗಿಲ್ಲದೆ ಇಡೀ ಒಕ್ಕೂಟ ವ್ಯವಸ್ಥೆಯ ಕನ್ನಡಿಯಾಗಿದೆ. ಎಲ್ಲ ಭಾಷೆಗಳ ಜನರೂ, ಎಲ್ಲ

ಪ್ರದೇಶಗಳ ಜನರೂ ಸಮಾನ ಅವಕಾಶ ಮತ್ತು ಗೌರವ ಹೊಂದಲು ಇಂದಿನ ಭಾರತದ ಭಾಷಾನೀತಿಯು ಮಾರಕವಾಗಿದೆ. ಈ ನೀತಿಯಿಂದಾಗಿ ನೂರು ಮೀಟರ್ ಓಟದ ಸ್ಪರ್ಧೆಯಲ್ಲಿ ಹಿಂದೀ ಭಾಷಿಕರನ್ನು ಎಂಬತ್ತು ಮೀಟರ್ ಮುಂದೆ ನಿಲ್ಲಿಸಿ ಸೀಟಿ ಹೊಡೆದಂತಿದೆ. ಇಂದಿನ ಭಾಷಾನೀತಿಯು ರಾಜ್ಯಗಳಿಗೆ ಅನಿಯಂತ್ರಿತ ವಲಸೆಯನ್ನು ಹೆಚ್ಚಿಸುವ ಮೂಲಕ ಸ್ಥಳೀಯರ ಬದುಕು, ಉದ್ಯೋಗಗಳಿಗೆ ಧಕ್ಕೆ ತರುವಂತಿದ್ದು ಒಂದು ನಾಡಿನ ಮುಖಚರ್ಯೆಯನ್ನೇ ಬದಲಿಸುತ್ತಾ ಅನನ್ಯತೆಯನ್ನು ಅಳಿಸುವಂತಿದೆ.

ಹಿಂದೀ ಬರದವರನ್ನು, ಹಿಂದೀ ಬೇಡ ಎನ್ನುವವರನ್ನು ಭಾರತದ ಒಗ್ಗಟ್ಟಿಗೆ ಕಂಟಕರೆಂದೂ, ದೇಶಪ್ರೇಮವಿಲ್ಲದವರೆಂದೂ ಬಿಂಬಿಸುವ ಯತ್ನಗಳು ನಡೆಯುತ್ತಲೇ ಇವೆ. ಭಾರತದ ಒಗ್ಗಟ್ಟಿಗೆ ಸಾಧನ ಒಂದು ಭಾಷೆಯನ್ನು ಎಲ್ಲರಿಗೂ ಕಲಿಸುವುದಲ್ಲ. ಬದಲಿಗೆ ಎಲ್ಲಾ ಭಾಷೆಗಳಿಗೂ ಅವುಗಳ ನೆಲದಲ್ಲಿ ಸಾರ್ವಭೌಮತ್ವ ಹೊಂದಿರಲು ಬಿಡುವುದೇ ಆಗಿದೆ. ಇದಕ್ಕೆ ಪರಿಹಾರ ಸರಿಯಾದ ಭಾಷಾನೀತಿಯನ್ನು ರೂಪಿಸುವುದೊಂದೇ ಆಗಿದೆ.

# ಅಧ್ಯಾಯ – ೨

# ಹಿನ್ನೋಟ

ಭಾರತದ ಭಾಷಾನೀತಿಯನ್ನು ರೂಪಿಸಲು ಹೊರಟವರ ನಂಬಿಕೆಗಳು ಏನಾಗಿದ್ದವು? ಅಸಲಿಗೆ ಭಾರತದ ಸ್ವರೂಪವೆಂತಹುದ್ದು? ಯಾಕೆ ಹಿಂದೀ ಭಾಷೆಗೆ ಅಂತಹ ಮನ್ನಣೆ ಸಿಕ್ಕಿತು? ಸ್ವಾತಂತ್ರ್ಯಕ್ಕೆ ಮೊದಲಿನಿಂದಲೂ ಹೇಗೆ ಹೇರಿಕೆ ಮಾಡುವ ಪ್ರಯತ್ನಗಳಾದವು? ಹಿಂದೀ ವಿರೋಧಿ ಹೋರಾಟಗಳು ಹೇಗಾದವು? ಅವುಗಳ ಪರಿಣಾಮವೇನು?

# ಭಾರತದಲ್ಲಿ ಭಾಷೆಗಳ ಹರವು



# ಭಾಷಾ ಭಾರತ

**ನಾನಾ ಭಾಷೆಗಳ ತವರು:** ಭಾರತ ದೇಶ ನಾನಾ ಭಾಷೆಯ ಜನರ ತವರು. ಇಲ್ಲಿ ಸಾವಿರಾರು ವರ್ಷಗಳ ಪರಂಪರೆ ಹೊಂದಿರುವ ಅನೇಕಾನೇಕ ಭಾಷಿಕ ಜನಾಂಗಗಳಿವೆ. ಈ ಪ್ರತಿಯೊಂದೂ ಒಂದು ಸಮೃದ್ಧವಾದ ಪರಂಪರೆಯನ್ನು ಬಿಂಬಿಸುತ್ತಿವೆ. ಪ್ರಪಂಚದ ಎಲ್ಲಾ ಭಾಷಿಕ ಜನಾಂಗಗಳಿಗಿರುವಂತೆಯೇ ಇಲ್ಲೂ ಭಾಷೆಯೆನ್ನುವುದು ಆಯಾ ಜನಾಂಗದ ಆಚರಣೆ, ನಂಬಿಕೆ, ಬದುಕು, ದುಡಿಮೆ, ಇತಿಹಾಸ, ಸಂವಹನ, ಸಹಕಾರಗಳ ವಾಹಿನಿಯಾಗಿದೆ. ಈ ಭಾಷೆಗಳು ತಮ್ಮವೇ ಆದ ಪ್ರಾದೇಶಿಕ ಚೌಕಟ್ಟನ್ನು ಬಹುತೇಕ ಹೊಂದಿವೆ. ಇಗೋ ಈ ನಕಾಶೆಯನ್ನು ನೋಡಿ. ಇದು ಭಾಷಾ ಭಾರತ.




(ಚಿತ್ರಕೃಪೆ: http://www.worldgeodatasets.com/language/huffman/)

ಈ ಭೂಪಟದಲ್ಲಿ ಹಿಂದೀಯನ್ನು ಮಾತನ್ನಾಡುವ ಪ್ರದೇಶಗಳು ಉತ್ತರದ ಕೆಲವು ಭಾಗಗಳಿಗೆ ಸೀಮಿತವಾಗಿರುವುದನ್ನು ಕಾಣಬಹುದು. ೨೦೦೧ರ ಜನಗಣತಿಯಂತೆ ಭಾರತದಲ್ಲಿ ೧೬೩೫ ತಾಯ್ನುಡಿಗಳಿವೆ. ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಮಾತನ್ನಾಡುವ ೧೨೨ ಭಾಷೆಗಳಿವೆ. ಬ್ರಿಟೀಶರ ಕಾಲದಲ್ಲಿ ಇಂಗ್ಲೀಶ್ ಭಾರತದ ಏಕೈಕ ಆಡಳಿತ ಭಾಷೆಯಾಗಿತ್ತು.

**ಒಗ್ಗಟ್ಟು ಮತ್ತು ಒಂದು ಭಾಷೆಯ ಸಮೀಕರಣ:** ಹಾಗಾದರೆ ಸ್ವತಂತ್ರ ಭಾರತದಲ್ಲಿ ಹಿಂದೀ ಭಾಷೆಗೆ ಹೇಗೆ ಪ್ರಾಮುಖ್ಯತೆ ಬಂದಿತು ಎಂದರೆ, ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೊಡಗಿದ್ದ ಕೆಲವು ರಾಷ್ಟ್ರನಾಯಕರು ದೇಶದ ಮೂಲೆ ಮೂಲೆಯಲ್ಲಿ ತಿರುಗುತ್ತಾ ಜನರನ್ನು ಸಂಘಟಿಸುತ್ತಿದ್ದ ಸಂದರ್ಭಗಳಲ್ಲಿ ತಮ್ಮ ಭಾಷಣಗಳನ್ನು ಹಿಂದೀಯಲ್ಲಿ ಮಾಡುತ್ತಿದ್ದುದೂ, ಉತ್ತರದ ಅನೇಕ ಕಡೆಗಳಲ್ಲಿ ಅವರ ಚಟುವಟಿಕೆ ಕೇಂದ್ರಿತವಾಗಿದ್ದುದೂ ಕಾರಣವಿರಬಹುದು. ಗುಜರಾತಿ ತಾಯ್ನುಡಿಯ ಶ್ರೀ ಮೋಹನ್‌ದಾಸ್ ಕರಮಚಂದ್‌ಗಾಂಧಿಯವರು ಅಂದು ದೇಶದ ಜನರನ್ನೆಲ್ಲಾ ಒಗ್ಗೂಡಿಸಲು ಹಿಂದೀ ಬೇಕೆಂದು ಪ್ರತಿಪಾದಿಸಿದ್ದರು.

ಭಾರತೀಯರನ್ನು ಒಗ್ಗೂಡಿಸಲು ಒಂದು ಭಾರತೀಯ ಭಾಷೆಯೇ ಬೇಕೆಂದೂ, ಅದು ಹೆಚ್ಚು ಜನರಾಡುವ ನುಡಿಯಾಗಿರಬೇಕೆಂದೂ ಅವರು ಹಾಗೆ ಬಯಸಿದ್ದುದು ಮೇಲ್ನೋಟಕ್ಕೆ ಸರಿಯೆನ್ನುವಂತೆ, ಹಲವಾರು ರಾಷ್ಟ್ರನಾಯಕರಿಗೆ ಅನ್ನಿಸಿದ್ದು ಸತ್ಯ. ಆದರೆ ಅದೇ ಸಂದರ್ಭದಲ್ಲಿ ಬ್ರಿಟೀಶರ ವಿರುದ್ಧ ಹೋರಾಡಿದ ಮಹಾರಾಷ್ಟ್ರ, ಮೈಸೂರು, ಬಂಗಾಲ ಮತ್ತು ಪಂಜಾಬದ ಕೆಲವು ಹೋರಾಟಗಾರರು ಕೂಡಾ ಇದಕ್ಕೆ ಸಮ್ಮತಿಸಿದ್ದು ಅಚ್ಚರಿಯ ವಿಷಯವೇ ಆಗಿದೆ. ಬಹುಶಃ ಭಾರತದಂತಹ ಕೋಟ್ಯಾಂತರ ಜನಸಂಖ್ಯೆಯ ಬಹುಭಾಷಿಕ ಜನರು, ಹಿಡಿಯಷ್ಟಿದ್ದ ಒಂದೇ ತಾಯ್ನುಡಿ ಹೊಂದಿದ್ದ ಇಂಗ್ಲೀಶರ ಗುಲಾಮಗಿರಿಯಲ್ಲಿ ನಲುಗುತ್ತಿದುದಕ್ಕೆ ಕಾರಣವೇ ನಮ್ಮಲ್ಲಿ ಒಗ್ಗಟ್ಟಿಲ್ಲದ್ದು ಮತ್ತು ಅದಕ್ಕೆ ಭಾರತದ ಭಾಷಾ ವೈವಿಧ್ಯತೆಯೇ ಕಾರಣ ಎನ್ನುವ ನಿರ್ಣಯಕ್ಕೆ ನಮ್ಮ ಹಿರಿಯರು ಬಂದುಬಿಟ್ಟಿದ್ದರೇನೋ?! ಇಂತಹ ಅನಿಸಿಕೆಯು ನಾಡಿನ ವೈವಿಧ್ಯತೆಯನ್ನು ಮಾರಕವೆಂದು ಜನರು ಇಂದೂ ಭಾವಿಸಲು ಕಾರಣವಾಗಿದೆಯೇನೋ ಎನ್ನಿಸುತ್ತದೆ.

**ಒಗ್ಗಟ್ಟಿಲ್ಲದಿರಲು ಇರಬಹುದಾದ ಕಾರಣ:** ವಾಸ್ತವವಾಗಿ ಇತಿಹಾಸದುದ್ದಕ್ಕೂ ಹಲವು ಕಾಲಘಟ್ಟಗಳಲ್ಲಿ ಕನ್ನಡ ಮಾತನ್ನಾಡುವ ಪ್ರದೇಶಗಳು ಒಂದೇ ಸಮಯದಲ್ಲಿ ಬೇರೆ ಬೇರೆ ರಾಜರ ಆಳ್ವಿಕೆಯಲ್ಲಿದ್ದುದನ್ನು ನಾವು ಗಮನಿಸಿದರೆ ಬೇರೆ ಬೇರೆ ಭಾಷೆಯಿದ್ದುದರಿಂದ ಭಾರತದಲ್ಲಿ ರಾಜಕೀಯ ಒಗ್ಗಟ್ಟಿಲ್ಲದಾಯಿತು ಎಂಬ ಮಾತು ದಿಟವಲ್ಲವೆಂದು ತೋರುತ್ತದೆ. ಭಾರತದಲ್ಲಿದ್ದ ಐದುನೂರಾಐವತ್ತಕ್ಕೂ ಹೆಚ್ಚು ಪ್ರಾಂತ್ಯಗಳಲ್ಲಿ ನೆರೆಯವರ ಜೊತೆಗಿನ ರಾಜಕೀಯ, ಧಾರ್ಮಿಕ, ಹೆಚ್ಚುಗಾರಿಕೆಯ ಪೈಪೋಟಿಗಳು, ಶತೃತ್ವಗಳು ಭಾರತದ ಒಗ್ಗಟ್ಟಿನ ಕೊರತೆಗೆ ಕಾರಣವಾಯಿತೆನ್ನುವುದು 'ದೇಶದಲ್ಲಿ ಬೇರೆಬೇರೆ ಭಾಷೆಯ ಜನರಿದ್ದಾರೆ' ಎನ್ನುವ ಕಾರಣಕ್ಕಿಂತ ಮಿಗಿಲಾಗಿ ತೋರುತ್ತದೆ. ಸ್ವಾತಂತ್ರ ಹೋರಾಟದ ಸಂದರ್ಭದಲ್ಲಿ ಬೇರೆ ಬೇರೆ ವಲಯಗಳ ಜನರೆಲ್ಲಾ ಬ್ರಿಟೀಶರ ವಿರುದ್ಧ ಹೋರಾಟಕ್ಕೆ ಮುಂದಾಗಿದ್ದು ಹಿಂದೀಯ ಕಾರಣದಿಂದ ಎಂದುಕೊಳ್ಳುವುದು ಬಾಲಿಶವಾಗುತ್ತದೆ. ಏಕೆಂದರೆ ಅಂದು ಹಿಂದೀಯ ಗಂಧ ಗಾಳಿ ಕೂಡಾ ಇಲ್ಲದ ಬಂಗಾಳ, ತಮಿಳುನಾಡು, ಮೈಸೂರು ವಲಯಗಳಲ್ಲೂ ಈ ಹೋರಾಟ ನಡೆಯುತ್ತಿದ್ದುದನ್ನೂ, ಹಿಂದೀಯ ವಾಸನೆಯೂ ಇರದ ಸಾವಿರಾರು ಸ್ವಾತಂತ್ರ ಹೋರಾಟಗಾರರು ಈ ಹೋರಾಟದಲ್ಲಿ ಭಾಗವಹಿಸಿದ್ದರು ಎನ್ನುವುದನ್ನೂ ಗಮನಿಸಿದಾಗ ತಿಳಿಯುತ್ತದೆ. ಆದರೂ ಸ್ವಾತಂತ್ರ ಹೋರಾಟದ ಮುಂಚೂಣಿಯಲ್ಲಿದ್ದ ಮಹಾತ್ಮಾಗಾಂಧಿಯವರ ಹಿಂದೀಪರವಾದ ನಿಲುವಿನಿಂದಾಗಿ, ಹಿಂದೀ ಭಾರತವನ್ನು ಜೋಡಿಸುತ್ತದೆ ಎನ್ನುವ ನಂಬಿಕೆಯ ಫಲವಾಗಿ ೧೯೨೦ರಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾ ಮದ್ರಾಸಿನಲ್ಲಿ ಶುರುವಾಯಿತು. ಇದೇ ಹಿಂದೀ ಹೇರಿಕೆಗೆ ಬೀಜವಾಯಿತು.




ಇಗೋ ನೋಡಿ, ಆ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾದ ಲಾಂಛನ. ಇದರ ಘೋಷವಾಕ್ಯವೇ "ಏಕ್ ರಾಷ್ಟ್ರಭಾಷಾ ಹಿಂದೀ ಹೋ! ಏಕ್ ಹೃದಯ್ ಹೋ ಭಾರತ ಜನನಿ". ಅಂದರೆ ಅನೇಕತೆಯಲ್ಲಿ ಏಕತೆ ಎಲ್ಲಿ ಹೋಯಿತು? ಇಂಥಾ ಉದ್ದೇಶದ

ಸಂಸ್ಥೆ ಇಂದಿಗೂ ನಮ್ಮ ನಾಡಿನಲ್ಲಿ ಚಟುವಟಿಕೆ ನಡೆಸುತ್ತಿದೆ. ವರ್ಷಕ್ಕೊಮ್ಮೆ ರಾಜ್ಯಪಾಲರನ್ನು ಕರೆಸಿ ಘಟಿಕೋತ್ಸವ ನಡೆಸುತ್ತಿದೆ. ಒಟ್ಟಾರೆ ಈ ಸಭಾದ ಉದ್ದೇಶ ಭಾರತದ ರಾಷ್ಟ್ರಭಾಷೆಯಾಗಿ ಹಿಂದೀಯನ್ನು ಸ್ಥಾಪಿಸುವುದೇ ಆಗಿದೆ.

**ಹಿಂದೀಹೇರಿಕೆ ವಿರೋಧಿ ಚಳವಳಿ:** ೧೯೩೭ರಲ್ಲಿ ಕಾಂಗ್ರೆಸ್ ತಮಿಳುನಾಡಿನಲ್ಲಿ ಅಧಿಕಾರಕ್ಕೇರಿತು. ಕಾಂಗ್ರೆಸ್ಸಿನ ಅಧಿನಾಯಕರಾದ ಶ್ರೀ ಮಹಾತ್ಮಾಗಾಂಧಿಯವರ ಅನುಯಾಯಿಯಾದ ಶ್ರೀ ರಾಜಗೋಪಾಲಾಚಾರಿಯವರು ತಮಿಳುನಾಡಿನ ಮುಖ್ಯಮಂತ್ರಿಗಳಾದರು. ಮುಖ್ಯಮಂತ್ರಿಗಳಾದ ತಿಂಗಳೊಪ್ಪತ್ತಿನಲ್ಲೇ ತಮಿಳುನಾಡಿನ ಸೆಕೆಂಡರಿ ಶಾಲೆಗಳಲ್ಲಿ ಹಿಂದೀಯನ್ನು ಕಡ್ಡಾಯವಾಗಿ ಕಲಿಸುವ ನೀತಿಯನ್ನು ಜಾರಿಗೆ ತರಲು ಮುಂದಾದರು. ಶ್ರೀ ಪೆರಿಯಾರ್ ರಾಮಸ್ವಾಮಿಯವರ 'ಸ್ವಾಭಿಮಾನಿ ಚಳವಳಿ'ಯು ಈ ನಡೆಯನ್ನು ತೀವ್ರವಾಗಿ ಖಂಡಿಸಿ ಇಡೀ ಮದ್ರಾಸ್ ವಲಯವೇ ಹೋರಾಟಕ್ಕೆ ತೊಡಗುವಂತೆ ಮಾಡಿತು. ಇಬ್ಬರು ಹೋರಾಟಗಾರರು ಹುತಾತ್ಮರಾದರು. ತಮಿಳುನಾಡು ಕಾಂಗ್ರೆಸ್ 'ಕಡ್ಡಾಯ ಹಿಂದೀ ಕಲಿಕೆ'ಯ ವಿಷಯವಾಗಿ ಇಬ್ಭಾಗವಾಯಿತು. ಹಿಂದೀಯನ್ನು ಬೆಂಬಲಿಸಿದ ರಾಜಾಜಿ ಮತ್ತವರ ಮಿತ್ರರು ಒಂದೆಡೆಯಾದರೆ ಹಿಂದೀ ಹೇರಿಕೆಯನ್ನು ವಿರೋಧಿಸಿದ ಸತ್ಯಮೂರ್ತಿ, ಸರ್ವಪಲ್ಲಿ ರಾಧಾಕೃಷ್ಣನ್ ಮೊದಲಾದವರು ಮತ್ತೊಂದು ಕಡೆ. ತಮಿಳುನಾಡಿನ ಮುಸ್ಲಿಮರಲ್ಲಿ ತಮಿಳು ತಾಯ್ನುಡಿಯವರು ಹಿಂದೀ ವಿರುದ್ಧವಾಗಿ ನಿಂತರೆ ಉರ್ದು ಭಾಷಿಕ ಮುಸ್ಲೀಮರು ಹಿಂದೀಭಾಷೆಯ ಪರವಾಗಿ ನಿಂತರು. ಎರಡನೇ ಮಹಾಯುದ್ಧದ ಕಾರಣದಿಂದಾಗಿ ಮದ್ರಾಸಿನ ಕಾಂಗ್ರೆಸ್ ಸರ್ಕಾರವೂ ರಾಜಿನಾಮೆ ನೀಡಿದಾಗ ಮತ್ತೆ ಮದ್ರಾಸ್, ಬ್ರಿಟೀಶರ ನೇರ ಆಡಳಿತಕ್ಕೆ ಒಳಪಟ್ಟಿತು. ೧೯೪೦ರವರೆಗೆ ನಡೆದ ಕಡ್ಡಾಯ ಹಿಂದೀ ಕಲಿಕೆ ವಿರೋಧಿ ಚಳವಳಿಯು ಮದ್ರಾಸಿನ ಗವರ್ನರ್ ಆದ ಶ್ರೀ ಎರ್‌ಸ್ಕೀನ್ ಅವರು ಕಾಂಗ್ರೆಸ್ಸಿನ ಕಡ್ಡಾಯ ಹಿಂದೀ ಕಲಿಕೆ ನೀತಿಯನ್ನು ಕೈಬಿಟ್ಟಿರುವುದಾಗಿ ಘೋಷಿಸಿದಾಗ ಕೊನೆಗೊಂಡಿತು. ಬಹುಶಃ ಇದೇ ಮೊದಲ ಹಿಂದೀ ಹೇರಿಕೆ ವಿರೋಧಿ ಹೋರಾಟ.

**ಸ್ವತಂತ್ರ ಭಾರತ ಮತ್ತು ರಾಷ್ಟ್ರಭಾಷೆಯ ಕಲ್ಪನೆ:** ಮುಂದೆ ಭಾರತಕ್ಕೆ ಸ್ವಾತಂತ್ರ್ಯ ಸಿಗುವ ಸೂಚನೆಗಳು ದೊರೆಯತೊಡಗಿದಾಗ ನಾಳಿನ ಭಾರತ ಹೇಗಿರಬೇಕೆಂಬ ಚಿಂತನೆ ಶುರುವಾಯಿತು. ನಾಳಿನ ಸ್ವತಂತ್ರ ಭಾರತದ ವ್ಯವಹಾರಗಳು ಯಾವ ಭಾಷೆಯಲ್ಲಿ ನಡೆಯಬೇಕೆನ್ನುವ ನಿರ್ಧಾರ ಮಾಡಬೇಕಾದ ಸಂದರ್ಭ ಆಗ ಒದಗಿಬಂತು. ಭಾರತಕ್ಕೆ ಸ್ವಾತಂತ್ರ ಸಿಕ್ಕಾಗ ನಮ್ಮ ದೇಶಕ್ಕೆ

ಹಿಂದೀಯೇ ರಾಷ್ಟ್ರಭಾಷೆಯಾಗಬೇಕು ಎನ್ನುವ ನಿಲುವನ್ನು ಅನೇಕ ಹಿಂದೀ ಭಾಷಿಕ ಪ್ರದೇಶದ ಜನನಾಯಕರು ಹೊಂದಿದ್ದುದನ್ನು ಕೂಡಾ ಇತಿಹಾಸದ ಪುಟಗಳಲ್ಲಿ ಕಾಣಬಹುದಾಗಿದೆ. ಅನೇಕ ಕಾಂಗ್ರೆಸ್ ಅಧಿವೇಶನಗಳಲ್ಲಿ ಈ ಬಗ್ಗೆ ಚರ್ಚೆಗಳಾಗಿದ್ದವು. ೧೯೨೯ರ ಲಾಹೋರ್ ಕಾಂಗ್ರೆಸ್ ಅಧಿವೇಶನದಲ್ಲೂ ಈ ಬಗ್ಗೆ ಚರ್ಚೆಗಳಾಗಿದ್ದು ಹಲವಾರು ಹಿಂದೀಯೇತರ ಪ್ರದೇಶಗಳ ನಾಯಕರುಗಳು ಹಿಂದೀ ಭಾಷೆಗೆ ರಾಷ್ಟ್ರಭಾಷೆಯ ಸ್ಥಾನ ನೀಡುವುದನ್ನು ವಿರೋಧಿಸಿದ್ದರು.

**ಹಿಂದೀಪರರ ನಿಲುವು:** ಮೂಲತಃ ಹೆಚ್ಚುಜನರು ಆಡುವ ಭಾಷೆಯನ್ನು ಭಾರತದ ರಾಷ್ಟ್ರಭಾಷೆ ಮಾಡಬೇಕು. ಯಾಕೆಂದರೆ ಪ್ರಜಾಪ್ರಭುತ್ವವೆಂದರೆ ಹೆಚ್ಚುಜನಕ್ಕೆ ಅನುಕೂಲವಾಗುವುದನ್ನು ಮಾಡುವುದು. ಈ ಲೆಕ್ಕದಲ್ಲಿ ಇಂಗ್ಲೀಶನ್ನು ಬಳಸಬಹುದಾಗಿದ್ದರೂ ಅದು ನಮ್ಮನ್ನಾಳಿದ ಬ್ರಿಟೀಶರ ಭಾಷೆ. ಹಾಗಾಗಿ ಗುಲಾಮಗಿರಿಯ ಸಂಕೇತ. ಸ್ವಾಭಿಮಾನ ಇಲ್ಲದಿರುವಿಕೆ. ಭಾರತದ ಜನಸಂಖ್ಯೆಯ ಹೆಚ್ಚಿನ ಜನರಿಗೆ ಹಿಂದೀ ಬರುತ್ತದೆಯಾದ್ದರಿಂದ ಹಿಂದೀಯಲ್ಲೇ ದೇಶದ ಆಡಳಿತ ನಡೆಯಬೇಕು. ಭಾರತದ ಒಗ್ಗಟ್ಟು ಹೆಚ್ಚಾಗಲು ಪ್ರತಿಯೊಬ್ಬ ಭಾರತೀಯನೂ ಹಿಂದೀಯನ್ನು ಕಲಿತು ಅದರಲ್ಲೇ ವ್ಯವಹರಿಸಬೇಕು. ಭಾರತದ ಜನರೆಲ್ಲಾ ಒಂದೇ ಭಾಷೆಯನ್ನಾಡುವುದುದರಿಂದ ಒಗ್ಗಟ್ಟು ಮೂಡುತ್ತದೆ. ದೇಶದ ಜನರಲ್ಲಿ ರಾಷ್ಟ್ರಪ್ರೇಮ ಹೆಚ್ಚಾಗುತ್ತದೆ, ರಾಷ್ಟ್ರೀಯ ಭಾವೈಕ್ಯತೆಗೆ ಹಿಂದೀ ಸಾಧನವಾಗಿದೆ. ಹೇಗೆ ಪ್ರತಿಯೊಂದು ದೇಶಕ್ಕೂ ಒಂದೊಂದು ಭಾಷಿಕ ಗುರುತಿದೆಯೋ ಹಾಗೇ ಭಾರತಕ್ಕೆ ಹಿಂದೀ ಗುರುತಾಗಬೇಕು. ಹಾಗಾಗಿ ಹಿಂದೀಯನ್ನು ರಾಷ್ಟ್ರಭಾಷೆಯಾಗಿಸಬೇಕು.

**ಹಿಂದೀ ವಿರೋಧಿಗಳ ನಿಲುವು:** ಈಗಾಗಲೇ ನಮ್ಮ ರಾಜ್ಯಗಳಲ್ಲಿ ಆಡಳಿತವು ಇಂಗ್ಲೀಷಿನಲ್ಲಿ ನಡೆಯುತ್ತಿದೆ, ಸ್ವಾತಂತ್ರ ಮತ್ತು ಪ್ರಜಾಪ್ರಭುತ್ವವೆಂದರೆ ನಮ್ಮ ಭಾಷೆಯಲ್ಲಿ ನಮ್ಮ ನಾಡಿನ ವ್ಯವಸ್ಥೆಯಿರುವುದು. ಹಾಗಾಗಿ ಈಗ ಹಿಂದೀಯನ್ನು ರಾಷ್ಟ್ರಭಾಷೆಯನ್ನಾಗಿಸುವ ಮೂಲಕ ಮತ್ತೊಮ್ಮೆ ನಾವು ಪರಭಾಷೆಯಲ್ಲಿ ಆಡಳಿತ ನಡೆಸಬೇಕಾಗುತ್ತದೆ. ಹಿಂದೀ ಭಾಷೆಯಲ್ಲಿ ಆಡಳಿತವೆಂದರೆ ಹಿಂದೀ ಭಾಷಿಕರ ಅಡಿಯಲ್ಲಿ ಬಾಳುವಂತಾಗುತ್ತದೆ. ಹೇಗೂ ಇಂಗ್ಲೀಶ್ ಈಗಾಗಲೇ ಇರುವುದರಿಂದ ರಾಜ್ಯಗಳ ವಹಿವಾಟಿಗೆ, ಕೇಂದ್ರದ ವಹಿವಾಟಿಗೆ ಇಂಗ್ಲೀಶ್ ಹಾಗೇ ಇರಲಿ. ಹಿಂದೀ ಭಾಷೆಗೆ ಸಲ್ಲದ ದೊಡ್ಡಸ್ಥಾನ ನೀಡುವ ಮೂಲಕ ಉಳಿದ ಭಾಷೆಯ ಜನರನ್ನು ಮೂರನೇ ದರ್ಜೆಯ ಪ್ರಜೆಗಳನ್ನಾಗಿಸಲಾಗುತ್ತದೆ. ಇಷ್ಟಕ್ಕೂ ಮೀರಿ ಹಿಂದೀಯನ್ನು

ರಾಷ್ಟ್ರಭಾಷೆ ಮಾಡುವುದಾದರೆ ನಮ್ಮ ಬದುಕುವ ಹಕ್ಕಿಗೆ, ಸ್ವಾತಂತ್ರಕ್ಕೆ ಅದು ಮಾರಕವಾಗುತ್ತದೆ. ಹಾಗಾಗಿ ಹಿಂದೀ ಸಾಮ್ರಾಜ್ಯಶಾಹಿಗೆ ಕಾರಣವಾಗುವ ಈ ಹಿಂದೀ ರಾಷ್ಟ್ರಭಾಷೆಯನ್ನಾಗಿಸುವ ಕ್ರಮವನ್ನು ಒಪ್ಪಲಾಗದು.

**ಸಂವಿಧಾನ ರಚನಾ ಸಮಿತಿಯಲ್ಲಿ:** ಡಿಸೆಂಬರ್ ೯, ೧೯೪೬ರಲ್ಲಿ ಭಾರತೀಯ ಸಂವಿಧಾನ ರಚಿಸಲೆಂದು ರೂಪಿಸಲಾದ ಸಭೆಯಲ್ಲಿ ಈ ಬಗ್ಗೆ ಚರ್ಚೆ ಶುರುವಾಗಿದ್ದು ಭಾರತದ ಸಂವಿಧಾನವನ್ನು ಯಾವಭಾಷೆಯಲ್ಲಿ ಬರೆಯಬೇಕು? ಭಾರತದ ಆಡಳಿತ ಯಾವ ಭಾಷೆಯಲ್ಲಿ ನಡೆಯಬೇಕು? ಎಂಬ ಪ್ರಶ್ನೆಗಳು ಎದುರಾದಾಗ. ಈ ಬಗ್ಗೆ ಸಾಕಷ್ಟು ಚರ್ಚೆಗಳು ನಡೆದವು. ಭಾರತದ ರಾಷ್ಟ್ರಭಾಷೆ ಹಿಂದೀಯಾಗಬೇಕು ಎನ್ನುವ ಕೂಗಿನಂತೆಯೇ ಹಿಂದೀ ರಾಷ್ಟ್ರಭಾಷೆಯಾಗುವುದು ಬೇಡ ಎನ್ನುವ ಕೂಗೂ ಎದ್ದಿತು. ಹಿಂದೀಯನ್ನು ವಿರೋಧಿಸಿದವರನ್ನು ದೇಶದ್ರೋಹಿಗಳು ಎನ್ನುವಂತೆ ಕಾಣುವ ಮನಸ್ಥಿತಿಯೂ ಆಗಿನ ಅನೇಕ ಹಿಂದೀವಾದಿಗಳಿಗೆ ಇತ್ತೆಂಬುದು ಅಚ್ಚರಿಯ ಮಾತೇನಲ್ಲ.

ಹಿಂದೀಯನ್ನು ರಾಷ್ಟ್ರಭಾಷೆಯಾಗಿಸುವ ಪರವಾಗಿದ್ದವರಲ್ಲಿ ಶ್ರೆಯುತರುಗಳಾದ ಅಲ್ಗುರಾಯ್‌ಶಾಸ್ತ್ರಿ, ಆರ್.ವಿ. ಧುಲೇಕರ್, ಬಾಲಕೃಷ್ಣಶರ್ಮ, ಪುರುಶೋತ್ತಮ ದಾಸ್ ಟಂಡನ್, ಬಾಬುನಾಥ್ ಗುಪ್ತಾ, ಹರಿ ವಿನಾಯಕ್ ಪಾಠಸ್ಕರ್, ಸೇಠ್ ಗೋವಿಂದ ದಾಸ್, ಸಂಪೂರ್ಣಾನಂದ್, ರವಿಶಂಕರ್ ಶುಕ್ಲಾ, ಕೆ ಎಂ ಮುನ್ಶಿ, ಜವಾಹರ್‌ಲಾಲ್ ನೆಹರು, ಅಬ್ದುಲ್ ಕಲಾಮ್ ಆಜ಼ಾದ್ ಮೊದಲಾದವರಿದ್ದರು. ಇವರಲ್ಲಿ ಹೆಚ್ಚಿನವರು ಹಿಂದೀಭಾಷಿಕ ಪ್ರದೇಶಗಳಾದ ಉತ್ತರಪ್ರದೇಶ ಮತ್ತು ಬಿಹಾರಕ್ಕೆ ಸೇರಿದವರಾಗಿದ್ದರು ಅನ್ನುವುದು ಗಮನಿಸಬೇಕಾದ ಅಂಶ. ಹಿಂದೀ ಪರವಾಗಿದ್ದ ಖ್ಯಾತರಲ್ಲಿ ಕೆಲವರು ಶ್ರೀಯುತರುಗಳಾದ ಮಹಾತ್ಮಾಗಾಂಧಿ, ಸುಭಾಶ್‌ಚಂದ್ರ ಭೋಸ್, ಲೋಕಮಾನ್ಯ ಬಾಲಗಂಗಾಧರತಿಲಕ್, ಶ್ಯಾಮ್‌ಪ್ರಸಾದ್ ಮುಖರ್ಜಿ, ರಾಜಗೋಪಾಲಚಾರಿ (ರಾಜಾಜಿಯವರು ೧೯೫೦ರ ದಶಕದಲ್ಲಿ ತಮ್ಮ ಹಿಂದೀ ಪರವಾದ ನಿಲುವನ್ನು ಬದಲಿಸಿದರು) ಮೊದಲಾದವರಿದ್ದರು.

ಶ್ರೀ ಆರ್.ವಿ. ಧುಲೇಕರ್ ಅವರು ೧೦ನೇ ಡಿಸೆಂಬರ್ ೧೯೪೬ರಂದು ಇತಿಹಾಸ ಪ್ರಸಿದ್ಧವಾದ 'ಹಿಂದೀಯನ್ನು ತಿಳಿಯದ ಯಾವೊಬ್ಬನಿಗೂ ಭಾರತದಲ್ಲಿ ಬದುಕುವ ಹಕ್ಕಿಲ್ಲ. ಭಾರತದ ಸಂಸತ್ತಿನಲ್ಲಿ ಭಾಗವಹಿಸುವ ಹಕ್ಕಿಲ್ಲ. ಅಂಥವರು ಭಾರತ

ಬಿಟ್ಟು ತೊಲಗಲಿ' ಎನ್ನುವ ಹೇಳಿಕೆಯನ್ನು ನೀಡಿದರು. ಇದೊಂದು ಹೇಳಿಕೆ ಹಿಂದೀ ಪರವಾದವರ ಮನಸ್ಥಿತಿಯನ್ನು, ಹಿಂದೀಯೇತರರ ಬಗೆಗಿನ ಅಸಹನೆಯನ್ನೂ ತೋರುತ್ತದೆ.

ಸದನದಲ್ಲಿ ಹಿಂದೀಯನ್ನು ಭಾರತದ ರಾಷ್ಟ್ರಭಾಷೆಯಾಗುವುದನ್ನು ವಿರೋಧಿಸಿದ್ದವರಲ್ಲಿ ಪ್ರಮುಖರೆಂದರೆ ತಮಿಳುನಾಡಿನವರಾದ ಟಿ.ಟಿ.ಕೃಷ್ಣಮಾಚಾರಿ, ಜಿ ದುರ್ಗಾಬಾಯಿ, ಟಿ ಎ ರಾಮಲಿಂಗಮ್ ಚೆಟ್ಟಿಯಾರ್, ಎನ್ ಜಿ ರಂಗಾ, ಗೋಪಾಲಸ್ವಾಮಿ ಅಯ್ಯಂಗಾರ್ ಮತ್ತು ಮೈಸೂರಿನ ಎಸ್. ವಿ. ಕೃಷ್ಣಮೂರ್ತಿರಾವ್ ಮೊದಲಾದವರು. ಇವರೆಲ್ಲರೂ ಹಿಂದೀಯನ್ನು ರಾಷ್ಟ್ರಭಾಷೆಯಾಗಿಸುವುದರ ವಿರುದ್ಧವಾಗಿದ್ದರು ಮತ್ತು ಇಂಗ್ಲೀಶನ್ನು ಉಳಿಸಿಕೊಳ್ಳುವ ಪರವಾಗಿದ್ದರು. ಸಂಸತ್ತಿನಲ್ಲಿ ಶ್ರೀ ಟಿ. ಟಿ ಕೃಷ್ಣಮಾಚಾರಿಯವರು "ಹಿಂದೀಯನ್ನು ನಾನು ಕಲಿಯಲಾರೆ. ಏಕೆಂದರೆ ಹಾಗೆ ಕಲಿಯಿರಿ ಎನ್ನುವ ಮೂಲಕ ನನ್ನ ಮೇಲೆ ನಾನಾ ಕಟ್ಟುಪಾಡುಗಳನ್ನು ಹೇರಲಾಗುತ್ತದೆ. ದೇಶ ಒಡೆಯಬೇಕೆನ್ನುವ ಕೂಗಿಗೆ ನಾವೂ ದನಿಗೂಡಿಸುವಂತೆ ನಿಮ್ಮ ಒತ್ತಾಯದ ನಡವಳಿಕೆ ಇರದಿರಲಿ. ನನ್ನ ಪ್ರೀತಿಯ ಉತ್ತರಪ್ರದೇಶದ ಮಿತ್ರರೇ, ನಿಮಗೆ ಒಗ್ಗೂಡಿದ ಭಾರತ ಬೇಕೋ? ಅಥವಾ ಹಿಂದೀ ಭಾರತ ಬೇಕೋ ತೀರ್ಮಾನಿಸಿ" ಎಂಬ ಹೇಳಿಕೆ ನೀಡಿದರು.

ಕೊನೆಗೆ ಎರಡೂ ಪಂಗಡಗಳ ನಡುವೆ ಒಂದು ೧೯೪೯ರಲ್ಲಿ ರಾಜೀಸೂತ್ರ ಏರ್ಪಟ್ಟಿತು. ಇದಕ್ಕೆ **ಮುನ್ಶಿ-ಅಯ್ಯಂಗಾರ್ ರಾಜಿ ಒಪ್ಪಂದ** ಎನ್ನಲಾಯಿತು.

**ಮುನ್ಶಿ-ಅಯ್ಯಂಗಾರ್ ರಾಜಿ ಒಪ್ಪಂದ:** ಈ ಒಪ್ಪಂದದ ಅನ್ವಯ ಹಿಂದೀಯನ್ನು ಭಾರತದ ರಾಷ್ಟ್ರಭಾಷೆ ಎಂದು ಘೋಷಿಸುವುದನ್ನು ಕೈಬಿಟ್ಟು ಭಾರತದ ಕೇಂದ್ರಸರ್ಕಾರದ ಆಡಳಿತ ಭಾಷೆ (OFFICIAL LANGUAGE OF INDIAN UNION) ಎಂದು ಕರೆಯಲಾಯಿತು.

ಇದರಂತೆಯೇ ಭಾರತದ ಸಂವಿಧಾನದ XVIIನೇ ಭಾಗವನ್ನು ರಚಿಸಲಾಯಿತು. ಇದರಡಿಯಲ್ಲಿ ೩೪೩ರಿಂದ ೩೫೧ರವರೆಗಿನ ವಿಧಿಗಳನ್ನು ಬರೆಯಲಾಯಿತು. ಹದಿನೈದು ವರ್ಷಗಳವರೆಗೆ ಹಿಂದೀಯ ಜೊತೆ ಇಂಗ್ಲೀಶನ್ನು ಮುಂದುವರೆಸಲು ತೀರ್ಮಾನಿಸಲಾಯಿತು. ಒಟ್ಟಾರೆ ಈ ಒಪ್ಪಂದವನ್ನು ಗಮನಿಸಿದಾಗ

ಹಿಂದೀಹೇರಿಕೆಯನ್ನು ವಿರೋಧಿಸುತ್ತಿದ್ದ ಪಂಗಡದವರು "ಬೀಸುವ ದೊಣ್ಣೆ ತಪ್ಪಿತೆಂದು" ಇದಕ್ಕೆ ಒಪ್ಪಿದರೆ, ಹಿಂದೀಪರರು "ರಾಜಾರೋಷವಾಗಿ ಅಲ್ಲದಿದ್ದರೇನಂತೆ, ಹಿಂಬಾಗಿಲಿನಿಂದ ಪ್ರವೇಶ ಸಿಕ್ಕಿತು" ಎಂದು ಈ ಒಪ್ಪಂದಕ್ಕೆ ಬಂದರೆನ್ನುವಂತೆ ತೋರುತ್ತದೆ. ನಂತರದ ದಿನಗಳಲ್ಲಿ ಹಿಂದೀಯನ್ನು ಬೇಡ ಎನ್ನುವವರಲ್ಲಿ ಜನರಲ್ ಕಾರಿಯಪ್ಪ ಕೂಡಾ ಇದ್ದರು. ಒಂದು ಕಾಲದಲ್ಲಿ ಹಿಂದೀಯನ್ನು ತಮಿಳುನಾಡಿನಲ್ಲಿ ಕಡ್ಡಾಯ ಮಾಡಲು ಕಾರಣರಾಗಿದ್ದ ರಾಜಾಜಿಯವರೂ ಕೂಡಾ ನಂತರದ ದಿನಗಳಲ್ಲಿ ಹಿಂದೀ ಹೇರಿಕೆಯನ್ನು ವಿರೋಧಿಸಿದ್ದರು ಎನ್ನುವುದು ವಿಶೇಷ ಸಂಗತಿ.

# ಹಿಂದೀ ಹೇರಿಕೆ ವಿರುದ್ಧದ ಹೋರಾಟಗಳು

ಈ ಮೊದಲೇ ಹೇಳಿದಂತೆ ಹಿಂದೀಹೇರಿಕೆಯ ಮೊದಲ ಪ್ರಯತ್ನ ತಮಿಳುನಾಡಿನಲ್ಲಿ ರಾಜಾಜಿಯವರಿಂದ ಆರಂಭವಾಯಿತು ಮತ್ತು ಈ ಪ್ರಯತ್ನವು ಇಂದಿನ ದ್ರಾವಿಡ ಮುನ್ನೇತ್ರ ಕಳಗಂನ ಮೂಲ ಪಕ್ಷವಾದ ಜಸ್ಟೀಸ್ ಪಾರ್ಟಿಯು ಪೆರಿಯಾರ್ ರಾಮಸ್ವಾಮಿಯವರ ನಾಯಕತ್ವದಲ್ಲಿ ನಡೆಸಿದ ಚಳವಳಿಯ ಫಲವಾಗಿಯೂ, ರಾಜಾಜಿಯವರು ಅಧಿಕಾರ ಕಳೆದುಕೊಂಡು ಆಂಗ್ಲ ಅಧಿಕಾರಿಯು ಅಧಿಕಾರ ಸ್ವೀಕರಿಸಿ ಹಿಂದೀ ಹೇರಿಕೆಯನ್ನು ಕೈ ಬಿಟ್ಟದ್ದರಿಂದಾಗಿಯೂ ಕೊನೆಗೊಂಡಿತು. ಆ ಹೋರಾಟದಲ್ಲಿ ಇಬ್ಬರು ಹುತಾತ್ಮರಾದರು. ಹಿಂದೀ ವಿರೋಧಿ ಚಳವಳಿ ತಣ್ಣಗಾಯಿತು.

ಮುಂದೆ ೧೯೪೬ರಿಂದ ೧೯೫೦ರವರೆಗೆ ಅಲ್ಲಲ್ಲಿ ಹಿಂದೀ ಹೇರಿಕೆ ವಿರೋಧಿ ಹೋರಾಟಗಳು ನಡೆದವು. ಯಾವಾಗೆಲ್ಲಾ ತಮಿಳುನಾಡಿನಲ್ಲಿ ಹಿಂದೀ ಕಲಿಕೆಯನ್ನು ಕಡ್ಡಾಯ ಮಾಡುವ ಪ್ರಯತ್ನಗಳನ್ನು ಮಾಡಲಾಯಿತೋ ಆಗೆಲ್ಲಾ ಹಿಂದೀ ಹೇರಿಕೆ ವಿರೋಧಿ ಚಳವಳಿಗಳು ನಡೆದು ಅಂಥಾ ಪ್ರಯತ್ನಗಳು ವಿಫಲವಾದವು. ೧೯೪೭ರಲ್ಲಿ ಭಾರತ ಸ್ವಾತಂತ್ರ ಗಳಿಸಿಕೊಂಡ ಕೂಡಲೇ ಕಾಂಗ್ರೆಸ್ ಸರ್ಕಾರವು ಎಲ್ಲಾ ರಾಜ್ಯಗಳಲ್ಲೂ ಹಿಂದೀ ಕಲಿಕೆಯನ್ನು ಕಡ್ಡಾಯ ಮಾಡುವಂತೆ ಒತ್ತಾಯಿಸಿತು. ಈ ಆದೇಶದಂತೆ ೧೯೪೮-೧೯೪೯ರಲ್ಲಿ ತಮಿಳುನಾಡಿನ ಓಮಂದೂರು ರಾಮಸ್ವಾಮಿ ರೆಡ್ಡಿಯಾರ್ ಅವರ ಕಾಂಗ್ರೆಸ್ ಸರ್ಕಾರ ಹಿಂದೀ ಕಲಿಕೆಯನ್ನು ಕಡ್ಡಾಯ ಮಾಡಿತು. ಪೆರಿಯಾರ್ ಅವರು ಮತ್ತೊಮ್ಮೆ ಹಿಂದೀ ವಿರೋಧಿ ಹೋರಾಟಕ್ಕೆ ಕರೆ ಕೊಟ್ಟರು. ಹಿಂದೆ ಹಿಂದೀಯನ್ನು ಬೆಂಬಲಿಸಿದ್ದ ಕಾಂಗ್ರೆಸ್ ಪಕ್ಷದ ನಾಯಕರಾದ ಶಿವಗ್ನಾನಂ ಮತ್ತು ವಿ.ಕ ಅವರುಗಳು ಈ ಬಾರಿ ವಿರೋಧಿಸಿ ಹೋರಾಟದಲ್ಲಿ ತೊಡಗಿಕೊಂಡರು. ಹೋರಾಟವು ಯಶಸ್ವಿಯಾಯ್ತು ಮತ್ತು ಪರಿಣಾಮವಾಗಿ ಕಡ್ಡಾಯ ಹಿಂದೀ ಕಲಿಕೆಯು ತಮಿಳುನಾಡಿನಲ್ಲಿ ಕೊನೆಗೊಂಡಿತು. ಹಿಂದೀ ಕಲಿಕೆಯನ್ನು ವಿದ್ಯಾರ್ಥಿಗಳ ಆಯ್ಕೆಗೆ ಬಿಡಲಾಯಿತು.

ಸಂವಿಧಾನದಲ್ಲಿ ಇಂಗ್ಲೀಶ್ ಬಳಕೆಗೆ ವಿಧಿಸಿದ್ದ ಹದಿನೈದು ವರ್ಷಗಳ ಗಡುವು ೧೯೬೫ಕ್ಕೆ ಕೊನೆಗೊಳ್ಳಲಿದ್ದು, ೧೯೬೫ ಹತ್ತಿರವಾದಂತೆ ಹಿಂದೀಯೇತರ ಪ್ರದೇಶಗಳ ಆತಂಕವೂ ಹೆಚ್ಚುತ್ತಾ ಹೋಯಿತು. ಈ ಆತಂಕಕ್ಕೆ ಪೂರಕವಾಗಿ ಕೇಂದ್ರಸರ್ಕಾರವೂ ಹಿಂದೀ ಜಾರಿಗೆ ಸಜ್ಜಾಗತೊಡಗಿತು. ೧೯೬೦ರಲ್ಲಿ ಹಿಂದೀ ಬೆರಳಚ್ಚು ಮತ್ತು ಸ್ಟೆನೋಗ್ರಫಿಯ ಕಡ್ಡಾಯ ತರಬೇತಿಯನ್ನು ಆರಂಭಿಸಿತು. ಅದೇ

ವರ್ಷ ಅಂದಿನ ರಾಷ್ಟ್ರಪತಿಗಳಾಗಿದ್ದ ಡಾ. ಬಾಬುರಾಜೇಂದ್ರಪ್ರಸಾದ್ ಅವರು ಪಂತ್ ಸಮಿತಿಯ ಶಿಫಾರಸ್ಸಿನ ಅನ್ವಯವಾಗಿ ಹಿಂದೀಯಲ್ಲಿ ಪಾರಿಭಾಷಿಕ ಪದಕೋಶಗಳನ್ನು ತಯಾರಿಸಲು, ಆಡಳಿತಾತ್ಮಕ ಕಾರ್ಯವಿಧಾನಗಳನ್ನು ರಚಿಸಲು, ಕಾನೂನು ನಿಯಮಾವಳಿಗಳನ್ನು ತಯಾರಿಸಲು, ಸರ್ಕಾರಿ ನೌಕರರಿಗೆ ಹಿಂದೀ ಕಲಿಸಲು ಮತ್ತು ಹಿಂದೀ ಪ್ರಚಾರಕ್ಕೆ ಬೇಕಾದ ಉಳಿದ ಪ್ರಯತ್ನಗಳನ್ನು ಸಿದ್ಧಪಡಿಸಲು ಆದೇಶಗಳನ್ನು ನೀಡಿದರು.

ಈ ಹಿಂದೆ ೧೯೫೯ರಲ್ಲಿ ಜವಾಹರ್‌ಲಾಲ್ ನೆಹರೂ ಅವರು ಭರವಸೆ ನೀಡಿದ್ದಂತೆ ೧೯೬೩ರ ಕಾಯ್ದೆಯಲ್ಲಿ ಇಂಗ್ಲೀಶ್ ಭಾಷೆಯ ಮೇಲಿದ್ದ ಕಾಲಮಿತಿಯ ನಿರ್ಬಂಧವನ್ನು ತೆಗೆದುಹಾಕಲಾಯಿತು. ಆದರೂ ಈ ನಿಯಮಗಳಲ್ಲಿ ಬಳಸಿದ್ದ ಪದಗಳೂ ಕೂಡಾ ವಿವಾದಕ್ಕೆ, ಬಿಸಿಚರ್ಚೆಗೆ ಕಾರಣವಾದವು. ವಿವಾದಕ್ಕೆ ಕಾರಣವಾದ ವಾಕ್ಯಗಳು ಇಂತಿವೆ:

> **"the English language may...continue to be used in addition to Hindi".**

ಇಲ್ಲಿ may ಅನ್ನೋ ಪದದ ಬದಲಿಗೆ shall ಎಂಬ ಪದವು ಇರಬೇಕು ಎಂಬ ಹಿಂದೀ ಹೇರಿಕೆ ವಿರೋಧಿಗಳ ವಾದಕ್ಕೆ ಪ್ರಧಾನಮಂತ್ರಿಗಳಾಗಿದ್ದ ಜವಾಹರ್ ಲಾಲ್ ನೆಹರೂ ಅವರು ‘ಇಲ್ಲಿ may ಅಂದರೆ shall ಅಂದಂತೆಯೇ’ ಎಂದರಂತೆ. ಹಾಗಿದ್ದರೆ shall ಎಂದೇ ಬರೆಯಿರಿ ಎಂದು ಇವರು ವಾದಿಸಿದರಂತೆ. ಯಾಕೆಂದರೆ may ಎನ್ನುವುದರ ಅರ್ಥ may not ಎಂದೂ ಆಗುತ್ತದೆ, ಹಾಗಾಗಿ ಮುಂದೆ ಬರುವ ಆಡಳಿತಗಾರರು ಇಂಗ್ಲೀಶ್ ಬಳಕೆಯನ್ನು ತೆಗೆದು ಹಾಕಬಹುದು ಎನ್ನುವ ಭಯವನ್ನು ಅವರು ವ್ಯಕ್ತಪಡಿಸಿದರಂತೆ. ರಾಜ್ಯಸಭೆಯಲ್ಲಿ ಅಣ್ಣಾದುರೈ ಅವರು ಇಂಗ್ಲೀಶನ್ನು ಶಾಶ್ವತವಾಗಿ ಉಳಿಸಿಕೊಳ್ಳುವಂತೆಯೂ, ಹಿಂದೀಯೊಂದನ್ನೇ ಉಳಿಸಿಕೊಳ್ಳುವುದು ಹಿಂದೀಯವರಿಗೆ ಸಲ್ಲದ ಲಾಭಕಾರಿಯೆಂತಲೂ, ಎಲ್ಲಾ ಭಾರತೀಯರಿಗೆ ಸಮಾನ ಹತ್ತಿರದ/ ದೂರದ ಇಂಗ್ಲೀಶನ್ನೇ ಉಳಿಸಿಕೊಳ್ಳುವಂತೆ ವಾದಿಸಿದರು. ಕೊನೆಗೆ ಈ ಬದಲಾವಣೆಗೆ ಹಿಂದೀವಾದಿಗಳ ವಿರೋಧ ತೀವ್ರವಾಗಿ ಯಾವುದೇ ಬದಲಾವಣೆ ಇಲ್ಲದೆ ಈ ನಿಯಮವು ಜಾರಿಯಾಯಿತು.

ಕೂಡಲೇ ಅಣ್ಣಾದುರೈ ನಾಯಕತ್ವದಲ್ಲಿ ತಮಿಳುನಾಡಿನಲ್ಲಿ ಹಿಂದೀ ವಿರೋಧಿ ಚಳವಳಿ ಭುಗಿಲೆದ್ದಿತು. ಸಂವಿಧಾನದ **XVII**ನೇ ಭಾಗವನ್ನು ಸುಟ್ಟು ಹಾಕಿದ

ಆರೋಪದ ಮೇಲೆ ಅಣ್ಣಾದುರೈ ಅವರನ್ನು ಬಂಧಿಸಲಾಯಿತು. ನೆಹರೂ ಅವರು ೧೯೬೪ರಲ್ಲಿ ನಿಧನರಾದರು. ನಂತರ ಬಂದವರು ಲಾಲ್‌ಬಹಾದ್ದೂರ್ ಶಾಸ್ತ್ರಿಯವರು. ನಂತರವೂ ಹಿಂದೀವಿರೋಧಿ ಚಳವಳಿ ಮುಂದುವರೆಯಿತು. ಹಿಂದೀಯೇತರ ರಾಜ್ಯಗಳ ಪ್ರತಿನಿಧಿಗಳನ್ನು ಕೂಡಿಸಿ ಸಮಾವೇಶವನ್ನು ತಮಿಳುನಾಡಿನಲ್ಲಿ ನಡೆಸಲಾಯಿತು. ೧೯೬೫ರ ಜನವರಿ ೨೬ರ ಗಣರಾಜ್ಯೋತ್ಸವ ದಿನವನ್ನು ಕಪ್ಪುದಿನವಾಗಿ ಆಚರಿಸುವ ಕರೆ ತಮಿಳುನಾಡಿನಿಂದ ಹೊರಟಿತು. ತಮಿಳುನಾಡಿನಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆಸ್‌ನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಭಕ್ತವತ್ಸಲಂರವರು, ಚಳವಳಿಕಾರರ ವಿರುದ್ಧ ಕಠಿಣಕ್ರಮದ ಬೆದರಿಕೆ ಹಾಕಿದರು. ಇದಕ್ಕೆ ಉತ್ತರವೆಂಬಂತೆ ಜನವರಿ ೨೬ರಂದು ಮದ್ರಾಸಿನಲ್ಲಿ ೫೦,೦೦೦ ಜನರ, ಅತಿಹೆಚ್ಚು ವಿದ್ಯಾರ್ಥಿಗಳೇ ಪಾಲ್ಗೊಂಡ ದೊಡ್ಡದಾದ ಮೆರವಣಿಗೆ ನಡೆಯಿತು. ಹಿಂದಿನ ದಿನ ಮಧುರೈನಲ್ಲಿ ಕಾಂಗ್ರೆಸ್ ಬೆಂಬಲಿಗರಿಗೂ, ಹಿಂದೀ ವಿರೋಧಿಗಳಿಗೂ ಹೊಡೆದಾಟವೇ ನಡೆದು ಇಡೀ ರಾಜ್ಯಕ್ಕೆ ಹಿಂಸಾಚಾರ ಹಬ್ಬಿತು. ಸುಮಾರು ಎಪ್ಪತ್ತಕ್ಕೂ ಹೆಚ್ಚು ಜನರು ಈ ಹೋರಾಟಕ್ಕೆ ಬಲಿಯಾದರು. ಕೊನೆಗೆ ತಮಿಳುನಾಡಿನ ಸಂಸದರಾಗಿದ್ದ ಇಬ್ಬರು ಕೇಂದ್ರ ಮಂತ್ರಿಗಳು ರಾಜಿನಾಮೆಯನ್ನೂ ನೀಡಿದರು. ಭಾರತದ ಅಂದಿನ ಪ್ರಧಾನಿ ಲಾಲ್ ಬಹಾದ್ದೂರ್‌ಶಾಸ್ತ್ರಿಯವರು ಇವರ ರಾಜಿನಾಮೆಯನ್ನು ಅಂಗೀಕರಿಸಲು ರಾಷ್ಟ್ರಪತಿಗಳಿಗೆ ಶಿಫಾರಸ್ಸನ್ನೂ ಮಾಡಿದರು. ಆದರೆ ರಾಷ್ಟ್ರಪತಿಗಳಾಗಿದ್ದ ಶ್ರೀ ಸರ್ವಪಲ್ಲಿ ರಾಧಾಕೃಷ್ಣನ್ ಅವರು ಈ ಶಿಫಾರಸ್ಸನ್ನು ತಿರಸ್ಕರಿಸಿದ ನಂತರ ಶಾಸ್ತ್ರಿಯವರು ತಮ್ಮ ಹಟಮಾರಿ ಧೋರಣೆ ಕೈಬಿಟ್ಟು ಆಕಾಶವಾಣಿಯ ಮೂಲಕ ನೆಹರೂ ಅವರು ನೀಡಿದ್ದ ಭರವಸೆಯನ್ನು ಈಡೇರಿಸುವುದಾಗಿ ಘೋಷಿಸಿದರು. ಇಂತಹ ಹೋರಾಟಕ್ಕೆ ಕಾರಣವಾದ ೧೯೬೩ರ ಆಡಳಿತ ಭಾಷಾ ನಿಯಮವು ಮುಂದೆ ೧೯೬೭ರಲ್ಲಿ ತಿದ್ದುಪಡಿಗೊಂಡು ಜಾರಿಗೆ ಬರಲು ಅಣಿಯಾಯಿತು.

**ಭಾರತದ ಆಡಳಿತ ಭಾಷಾ ನಿಯಮ, ೧೯೬೩:** (೧೯೬೭ರ ತಿದ್ದುಪಡಿಯ ರೀತ್ಯಾ) (ಕಾಯ್ದೆ ಸಂ: ೧೯೬೩ರ ೧೯): ಇದು ಭಾರತೀಯ ಒಕ್ಕೂಟದಲ್ಲಿ ಕೇಂದ್ರಸರ್ಕಾರದ ಕಛೇರಿಗಳಲ್ಲಿಯೂ, ಕೇಂದ್ರ–ರಾಜ್ಯಗಳ ನಡುವೆಯೂ, ನ್ಯಾಯಾಲಯಗಳಲ್ಲಿಯೂ ಬಳಸಬೇಕಾದ ಆಡಳಿತ ಭಾಷೆಗಳ ಬಗ್ಗೆ ಭಾರತದ ಸಂವಿಧಾನವು ಜಾರಿಗೊಂಡ ಹದಿನಾಲ್ಕನೇ ವರ್ಷದಲ್ಲಿ ರೂಪಿಸಲಾದ ನಿಯಮವಾಗಿದೆ.

೧೯೬೫ರ ಜನವರಿ ೨೬ರಿಂದ ಸದರಿ ನಿಯಮವು ಜಾರಿಗೆ ಬರಲಿದೆ ಎಂದು ಮೂಲದಲ್ಲಿ ಬರೆಯಲಾಗಿದ್ದ ಈ ಕಾಯ್ದೆಯಲ್ಲಿ ಇಂಗ್ಲೀಶನ್ನು ಶಾಶ್ವತವಾಗಿ ಮುಂದುವರೆಸಿಕೊಂಡು ಹೋಗುವುದನ್ನು ತಮಿಳುನಾಡಿನ ತೀವ್ರ ಹೋರಾಟದ ನಂತರ ಒಪ್ಪಲಾಯಿತು. ಇದು ಹಿಂದೀಯೇತರ ರಾಜ್ಯಗಳಿಗೆ ಸಿಕ್ಕ ಗೆಲುವು. ತಮಿಳುನಾಡು ದೇಶಕ್ಕೆ ನೀಡಿದ ಉಡುಗೊರೆಯೆಂದರೆ ತಪ್ಪಾಗಲಾರದು.

ತಮಿಳುನಾಡಿನಲ್ಲಿ ಹತ್ತಾರು ಹಿಂದೀ ಹೇರಿಕೆ ಹೋರಾಟಗಾರರು ಪೊಲೀಸ್ ಗೋಲೀಬಾರಿಗೆ ಬಲಿಯಾದ ನಂತರ ನಡೆದ ೧೯೬೭ರ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷವು ಅಧಿಕಾರ ಕಳೆದುಕೊಂಡು ತಮಿಳುನಾಡಿನ ರಾಜಕೀಯ ಭೂಪಟದಿಂದ ಮರೆಯಾಗಿಹೋಯಿತು. ಇಂದಿನವರೆಗೂ ಕಾಂಗ್ರೆಸ್‌ಗೆ ತಮಿಳುನಾಡಿನಲ್ಲಿ ಅಧಿಕಾರ ಹಿಡಿಯಲು ಆಗಿಲ್ಲ ಎನ್ನುವುದು ಹಿಂದೀ ವಿರೋಧಿ ಹೋರಾಟದ ತೀವ್ರತೆಗೆ ಹಾಗೂ ಪರಿಣಾಮಕ್ಕೆ ಸಾಕ್ಷಿಯಾಗಿದೆ.

**೧೯೮೬ರ ಮತ್ತೊಂದು ಹಿಂದೀ ಹೇರಿಕೆ ವಿರೋಧಿ ಹೋರಾಟ:** ಮುಂದೊಮ್ಮೆ ಶ್ರೀ ರಾಜೀವ್‌ಗಾಂಧಿಯವರು ಭಾರತದ ಪ್ರಧಾನಿಯಾಗಿದ್ದಾಗ ರಾಷ್ಟ್ರೀಯ ಶಿಕ್ಷಣ ಯೋಜನೆಯನ್ನು ಜಾರಿಗೆ ತಂದರು. ಇದು ದೇಶದ ಎಲ್ಲೆಡೆ ನವೋದಯ ವಿದ್ಯಾಸಂಸ್ಥೆಗಳನ್ನು ಆರಂಭಿಸಲು ಕಾರಣವಾಯಿತು. ಈ ಶಾಲೆಗಳಲ್ಲೂ ಹಿಂದೀ ಕಲಿಕೆಯನ್ನು ಕಡ್ಡಾಯ ಮಾಡಿದ್ದ ಕಾರಣದಿಂದಾಗಿ ತಮಿಳುನಾಡಿನಲ್ಲಿ ಹಿಂದೀ ಹೇರಿಕೆ ವಿರೋಧಿ ಹೋರಾಟ ಶುರುವಾಯಿತು. ಈ ಹೋರಾಟದ ಅನ್ವಯವಾಗಿ ತಮಿಳುನಾಡಿನಲ್ಲಿ ಆಡಳಿತದಲ್ಲಿದ್ದ ಕರುಣಾನಿಧಿಯವರ ನೇತೃತ್ವದ ಸರ್ಕಾರ ತಮಿಳುನಾಡು ವಿಧಾನಸಭೆಯಲ್ಲಿ ಒಂದು ನಿರ್ಣಯ ಮಂಡಿಸಿದರು. ಭಾರತದಲ್ಲಿ ಎರಡೆರಡು ಆಡಳಿತ ಭಾಷೆಗಳು ಬೇಡ, ಕೇವಲ ಇಂಗ್ಲೀಶ್ ಒಂದೇ ಇಡೀ ಭಾರತದ ಆಡಳಿತ ಭಾಷೆಯಾಗಲೀ ಎಂಬುದೇ ಆ ನಿರ್ಣಯ. ಈ ಪ್ರತಿಭಟನೆಯಲ್ಲಿ ಸುಮಾರು ೨೦,೦೦೦ ಜನರು ಪಾಲ್ಗೊಂಡಿದ್ದರು. ಕೊನೆಗೆ ಮಣಿದ ರಾಜೀವ್‌ಗಾಂಧಿಯವರು ನವೋದಯ ಶಾಲೆಗಳನ್ನು ತಮಿಳುನಾಡಿನಲ್ಲಿ ಆರಂಭಿಸುವ ನಿರ್ಣಯವನ್ನು ಕೈಬಿಟ್ಟರು.

**ಆಡಳಿತ ಭಾಷಾ ಕಾಯ್ದೆ, ೧೯೭೬ (೧೯೮೭ರ ತಿದ್ದುಪಡಿಯೊಂದಿಗೆ):** ಆಡಳಿತ ಭಾಷಾ ಕಾಯ್ದೆಯನ್ನು ಬೇರೆ ಬೇರೆ ರಾಜ್ಯಗಳಲ್ಲೂ, ಕೇಂದ್ರದಲ್ಲೂ ಹಿಂದೀ ಭಾಷೆಯನ್ನು ಹರಡುವುದರ ಬಗ್ಗೆ ಕಾಯ್ದೆಯನ್ನು ರೂಪಿಸಲಾಯಿತು. ಈ

ಕಾಯ್ದೆಯ ತುಂಬಾ ಇರುವುದೆಲ್ಲಾ ಹಿಂದೀಪ್ರಚಾರದ ಯೋಜನೆಗಳ ನೀಲನಕ್ಷೆಯೇ ಎಂದರೆ ತಪ್ಪಾಗಲಾರದು. ಇಡೀ ದೇಶವನ್ನು 'ಎ', 'ಬಿ' ಮತ್ತು 'ಸಿ' ವಲಯಗಳನ್ನಾಗಿ ವಿಂಗಡಿಸಿ ನಿಧಾನವಾಗಿ ಎಲ್ಲೆಡೆ ಹಿಂದೀಯನ್ನು ಸಂವಿಧಾನದ ಆಶಯವೆನ್ನುತ್ತಾ ಲೆಕ್ಕ ಹಾಕಿಕೊಂಡು ಹೇರಲು ಅಸ್ತ್ರವಾಗಿದ್ದು ಈ ಕಾಯ್ದೆಯೇ. **ಭಾರತದ ಯಾವ ಮೂಲೆಯ ಕೇಂದ್ರಸರ್ಕಾರಿ ಕಛೇರಿಯಲ್ಲಾದರೂ ಹಿಂದೀಯಲ್ಲಿ ಬಂದ ಪತ್ರಕ್ಕೆ ಹಿಂದೀಯಲ್ಲಿ ಉತ್ತರಿಸುವುದು ಕಡ್ಡಾಯ** ಎನ್ನುವ ನಿಯಮಕ್ಕೂ ಈ ಕಾಯ್ದೆಯೇ ಕಾರಣ. ಈ ಕಾಯ್ದೆಯ ವಿಶೇಷತೆಯೆಂದರೆ ಕಾಯ್ದೆಯ ವ್ಯಾಪ್ತಿಯ ಬಗ್ಗೆ ಇರುವ ಈ ಕೆಳಗಿನ ಹೇಳಿಕೆ.

**1. Short title, extent and commencement -**

(i) These rules may be called the Official Languages (Use for Official Purposes of the Union) Rules, 1976.

**(ii) They shall extend to the whole of India, except the State of Tamilnadu.**

(iii) They shall come into force on the date of their publication in the Official Gazette.

ದಶಕಗಳ ಕಾಲ ಹಿಂದೀ ಹೇರಿಕೆಯ ವಿರುದ್ಧವಾಗಿ ಸೆಣೆಸಿದ ತಮಿಳುನಾಡಿಗೆ ಸಿಕ್ಕ ಬಹುಮಾನವೇ ಇದು ಅನ್ನುವಂತೆ, ತಮಿಳುನಾಡನ್ನು ಈ ಕಾಯ್ದೆಯ ವ್ಯಾಪ್ತಿಯಿಂದ ಹೊರಗಿಡಲಾಯಿತು. ಇದರರ್ಥವೇನು? ಭಾರತದ ಭಾಷಾನೀತಿಯು ಹುಳುಕಿನದ್ದಾಗಿದ್ದು ಇದನ್ನು ಪ್ರತಿಭಟಿಸಿದವರಿಗೆ ಇದರಿಂದ ಮುಕ್ತಿ ಉಂಟು... ಎಂದೇ? ತಮಿಳುನಾಡೂ ಸೇರಿದಂತೆ ಎಲ್ಲಾ ರಾಜ್ಯಗಳಿಗೆ ಒಪ್ಪಿಗೆಯಾಗುವಂತಹ ಭಾಷಾನೀತಿಯೊಂದನ್ನು ರೂಪಿಸಬೇಕೆಂಬ ಮನಸ್ಥಿತಿ ಕೇಂದ್ರಕ್ಕಿಲ್ಲದಿರುವುದು ದುರಂತವೇ ಆಗಿದೆ. ಈ ಹುಳುಕನ್ನು ಅರಿತು ನೆಲಕಚ್ಚಿ ಹೋರಾಡಿದ ತಮಿಳುನಾಡಿಗೆ ಇದರಿಂದ ಮುಕ್ತಿ! ತೆಪ್ಪಗೆ ಮಂಕುಬೂದಿ ಎರಚಿಸಿಕೊಂಡಂತಿರುವ, ರಾಷ್ಟ್ರಭಾಷೆ, ಒಗ್ಗಟ್ಟಿನ ಭಾಷೆ, ದೇಶಪ್ರೇಮದ ಸಂಕೇತ ಎಂದು ಒಪ್ಪಿರುವ ಕರ್ನಾಟಕದಂತಹ ರಾಜ್ಯದ ಮೇಲೆ ನಿರಂತರ ಪ್ರಚಾರದ

ಪ್ರಯೋಗ! ಇಷ್ಟಕ್ಕೂ ಇಷ್ಟೊಂದು ವಿರೋಧಕ್ಕೆ ಕಾರಣವಾದ ಭಾರತದ ಭಾಷಾನೀತಿ ಎಂತಹದ್ದು ನೋಡೋಣ.

# ಅಧ್ಯಾಯ – ೩

# ಭಾರತದ ಇಂದಿನ ಭಾಷಾನೀತಿ

ಭಾರತದ ಇಂದಿನ ಭಾಷಾನೀತಿ ಏನು? ಭಾರತೀಯ ಸಂವಿಧಾನದಲ್ಲಿ ಹಿಂದೀ ಭಾಷೆಯ ಬಳಕೆಯ ಬಗ್ಗೆ ಏನು ಹೇಳಲಾಗಿದೆ? ಹಿಂದೀ ಜಾರಿಗೆ ಬಳಸುತ್ತಿರುವ ಮೂರು ಸಾಧನಗಳಾವುವು? ಭಾರತದಲ್ಲಿ 'ಆಡಳಿತ ಭಾಷಾ ಸಂಸತ್ ಸಮಿತಿ'ಯನ್ನೇಕೆ ರಚಿಸಲಾಯಿತು? ಯಾವ ಶಿಫಾರಸ್ಸುಗಳನ್ನು ಈ ಸಂಸತ್ ಸಮಿತಿ ಮಾಡಿದೆ?

# ಭಾರತ ಸಂವಿಧಾನದಲ್ಲಿ ಭಾಷಾನೀತಿ

ಭಾರತ ಸಂವಿಧಾನದ **XVII**ನೇ ಭಾಗದ ೧ನೇ ಅಧ್ಯಾಯದಲ್ಲಿ ೩೪೩ನೇ ವಿಧಿಯಿಂದ ೩೫೧ನೇ ವಿಧಿಯವರೆಗೆ ಭಾರತದ ಆಡಳಿತ ಭಾಷೆಯ ಬಗ್ಗೆ ಬರೆಯಲಾಗಿದೆ. ದೇವನಾಗರಿ ಲಿಪಿಯಲ್ಲಿ ಬರೆಯಲಾಗುವ ಹಿಂದೀ ಭಾಷೆಯು ಭಾರತ ಒಕ್ಕೂಟದ ಆಡಳಿತ ಭಾಷೆಯಾಗಿರತಕ್ಕದ್ದು. ಆಡಳಿತದ ಉದ್ದೇಶಕ್ಕಾಗಿ ಬಳಸುವ ಅಂಕೆಗಳು ಅಂತರ್‌ರಾಷ್ಟ್ರೀಯ ರೂಪದ ಭಾರತೀಯ ಅಂಕೆಗಳಾಗಿರತಕ್ಕದ್ದು. ಜೊತೆಯಲ್ಲಿ ಇಂಗ್ಲೀಶ್ ಕೂಡಾ ಹದಿನೈದು ವರ್ಷಗಳ ಅವಧಿಗೆ ಇರುತ್ತದೆ. (ಹೀಗೆಂದು ೧೯೫೦ರಲ್ಲಿ ಹೇಳಲಾಯಿತು.)

ಒಕ್ಕೂಟದಲ್ಲಿ ಆಡಳಿತ ಭಾಷೆಯ ಬಳಕೆ ಮತ್ತು ಹರಡುವಿಕೆಯ ಬಗ್ಗೆ ಅಧ್ಯಯನ ಮಾಡಿ ಸಲಹೆ ನೀಡಲು ಒಂದು ಸಂಸತ್ ಸಮಿತಿಯನ್ನು ರಚಿಸಬೇಕು ಮತ್ತು ಆ ಸಮಿತಿಗೆ "ಹಿಂದೀ ಭಾಷೆಯ ಬಳಕೆಯ ನಿರಂತರವಾಗಿ ಹೆಚ್ಚಿಸಿಕೊಂಡು ಹೋಗುವ ಬಗ್ಗೆ, ಇಂಗ್ಲೀಶ್ ಬಳಕೆಗೆ ಹಾಕಬೇಕಾದ ಕಡಿವಾಣಗಳ ಬಗ್ಗೆ ರಾಷ್ಟ್ರಪತಿಗಳಿಗೆ ಶಿಫಾರಸ್ಸನ್ನು ನೀಡುವುದು" ಕರ್ತವ್ಯವಾಗಿರುತ್ತದೆ.

ಯಾವುದೇ ರಾಜ್ಯದ ವಿಧಾನಸಭೆಯು ಕಾನೂನಿನ ಮೂಲಕ, ರಾಜ್ಯದಲ್ಲಿ ಬಳಕೆಯಲ್ಲಿರುವ ಯಾವುದೇ ಒಂದು ಅಥವಾ ಹೆಚ್ಚು ಭಾಷೆಗಳನ್ನೂ ಅಥವಾ ಹಿಂದೀಯನ್ನು ರಾಜ್ಯದ ಆಡಳಿತ ಭಾಷೆಯಾಗಿ ಘೋಷಿಸಬಹುದು ಅಥವಾ ಹಿಂದೀಯನ್ನೂ ಸಹ ಒಂದು ಆಡಳಿತ ಭಾಷೆಯನ್ನಾಗಿ ಅಳವಡಿಸಿಕೊಳ್ಳಬಹುದು. ಹೀಗೆ ಮಾಡಲು ಮತ್ತು ರಾಜ್ಯಗಳ ನಡುವೆ ಹಿಂದೀಯನ್ನು ಸಂಪರ್ಕ ಭಾಷೆಯನ್ನಾಗಿ ಮಾಡಿಕೊಳ್ಳಲು ರಾಜ್ಯಗಳ ಮನವೊಲಿಸುವುದು. ಭಾರತದ ಸಮ್ಮಿಶ್ರ ಸಂಸ್ಕೃತಿಯ ಎಲ್ಲಾ ಆಯಾಮಗಳನ್ನು ವ್ಯಕ್ತಪಡಿಸುವ ಒಂದು ಮಾಧ್ಯಮವಾಗಲು ಅನುಕೂಲವಾಗುವಂತೆ ಹಿಂದೀ ಭಾಷೆಯು ಬೆಳವಣಿಗೆ ಹೊಂದಲು ಮತ್ತು ತನ್ನ ಶ್ರೀಮಂತಿಕೆಯನ್ನು ಕಾಯ್ದುಕೊಳ್ಳಲು ಅನುವಾಗುವಂತೆ ಹಿಂದೀ ಭಾಷೆಯನ್ನು ದೇಶದ ಎಲ್ಲೆಡೆ ಹರಡುವುದು ಭಾರತ ಸರ್ಕಾರದ ಕರ್ತವ್ಯವಾಗಿದೆ.

# ಭಾರತದ ಆಡಳಿತ ಭಾಷಾ ಕಾರ್ಯನೀತಿ

ಭಾರತದ ಸಂವಿಧಾನವು ಹಿಂದೀಭಾಷೆಗೆ ಇತರ ಭಾಷೆಗಳಿಗಿಲ್ಲದ ಇಂತಹ ಅನೇಕಾನೇಕ ಏರ್ಪಾಟುಗಳನ್ನು, ಅನುಕೂಲಗಳನ್ನೂ ಮಾಡಿಕೊಟ್ಟ ನಂತರ ಮತ್ತು ಈ ಏರ್ಪಾಟನ್ನು ಹಿಂದೀಯನ್ನು ವಿರೋಧಿಸುತ್ತಿದ್ದವರೂ ಒಪ್ಪಿದ ನಂತರ, ಭಾರತ ಸರ್ಕಾರವು ಸಂವಿಧಾನದ ಆಶಯ ಎನ್ನುತ್ತಲೇ ದೇಶದ ಮೂಲೆಮೂಲೆಯಲ್ಲಿ ಹಿಂದೀಯ ಪ್ರಸಾರಕ್ಕಾಗಿ ಇಡೀ ಆಡಳಿತ ವ್ಯವಸ್ಥೆಯನ್ನೇ ಟೊಂಕಕಟ್ಟಿ ನಿಲ್ಲಿಸಿತು. ಇದಕ್ಕಾಗಿ ಒಂದು ಕಾರ್ಯನೀತಿಯನ್ನೂ ಘೋಷಿಸಲಾಯಿತು.

ಭಾರತದ ಸಂವಿಧಾನದ ೩೪೩(೧)ನೇ ವಿಧಿಯ ಅನ್ವಯ ದೇವನಾಗರಿ ಲಿಪಿಯ ಅಕ್ಷರಗಳನ್ನೂ, ಅಂತರರಾಷ್ಟ್ರೀಯವಾಗಿ ಬಳಕೆಯಲಿರುವ ಭಾರತೀಯ ಅಂಕೆಗಳನ್ನು ಹೊಂದಿರುವ ಹಿಂದೀ ಭಾಷೆಯು ಭಾರತ ಒಕ್ಕೂಟದ ಆಡಳಿತ ಭಾಷೆಯಾಗಿರುತ್ತದೆ. ಹಿಂದೀ ಭಾಷೆಯ ಜೊತೆಗೆ ಇಂಗ್ಲೀಶನ್ನೂ ಆಡಳಿತದ ಉದ್ದೇಶಗಳಿಗಾಗಿ ಬಳಸಬಹುದಾಗಿದೆ.

ಸಂಸತ್ತಿನ ವಹಿವಾಟುಗಳನ್ನು ಈ ಎರಡೂ ಭಾಷೆಗಳಿಗೆ ತರ್ಜುಮೆ ಮಾಡಬಹುದಾಗಿರುತ್ತದೆ. ಆದರೂ ಕೂಡಾ ಕೆಲವು ವಿಶೇಷ ಸಂದರ್ಭಗಳಲ್ಲಿ ರಾಜ್ಯಸಭೆಯ ಸಭಾಧ್ಯಕ್ಷರು ಹಾಗೂ ಲೋಕಸಭೆಯ ಸ್ಪೀಕರ್ ಅವರು ಸದಸ್ಯರ ತಾಯ್ನುಡಿಯಲ್ಲಿ ಮಾತನ್ನಾಡಲು ಅವಕಾಶ ನೀಡಬಹುದಾಗಿದೆ.

ಯಾವ ಸಂದರ್ಭದಲ್ಲಿ ಕೇವಲ ಹಿಂದೀಯನ್ನು ಬಳಸಬೇಕು, ಯಾವ ಸಂದರ್ಭದಲ್ಲಿ ಹಿಂದೀ ಇಂಗ್ಲೀಶ್ ಭಾಷೆಗಳನ್ನು ಬಳಸಬೇಕು ಹಾಗೂ ಯಾವ ಸಂದರ್ಭದಲ್ಲಿ ಕೇವಲ ಇಂಗ್ಲೀಶ್ ಭಾಷೆಯನ್ನು ಬಳಸಬಹುದು ಎಂಬುದರ ಬಗ್ಗೆ ಆಡಳಿತ ಕಾಯ್ದೆ, ೧೯೬೩ ಮತ್ತು ಆಡಳಿತ ಭಾಷಾ ನಿಯಮ, ೧೯೭೬ರಲ್ಲಿ ತಿಳಿಸಿಕೊಡಲಾಗಿದೆ.

**ಒಕ್ಕೂಟದ ಆಡಳಿತ ಭಾಷೆಯಾದ ಹಿಂದೀಯ ಬಳಕೆಯನ್ನು ಒತ್ತಾಯ, ಆಮಿಶ ಮತ್ತು ವಿಶ್ವಾಸಗಳ ಮೂಲಕವಾಗಿ ಭಾರತದಾದ್ಯಂತ ನಿರಂತರವಾಗಿ ಹೆಚ್ಚಿಸುವುದು ಭಾರತ ಸರ್ಕಾರದ ನೀತಿಯಾಗಿರುತ್ತದೆ.**

ಇಂತಹ ನೀತಿಯನ್ನು ರೂಪಿಸಿಕೊಂಡ ಭಾರತವು ಅದರ ಮೂಲಕ ಹಿಂದೀಯನ್ನು ಪ್ರಚುರಪಡಿಸಲು ಮುಂದಾಯಿತು. ಕೇಂದ್ರಸರ್ಕಾರದ/ ಒಕ್ಕೂಟದ ಆಡಳಿತ ಭಾಷೆಯೆನ್ನುವ ಸ್ಥಾನವನ್ನು ಹಿಂದೀಗೆ ನೀಡಿರುವುದು ಸರಳವಾಗಿರುವಂತೆ ಕಂಡರೂ, ಇಂಥಾ ಸ್ಥಾನಮಾನ ನೀಡುವ ಮೂಲಕ, ಭಾರತ ಸರ್ಕಾರವು ಸಂವಿಧಾನದ ಮುಖಾಂತರವೇ ಹಿಂದೀಯೇತರರ ನುಡಿಗಳ ಮೇಲೆ, ಕಲಿಕೆ, ದುಡಿಮೆ, ಬದುಕು, ಉದ್ಯಮ, ಮನರಂಜನೆಗಳ ಮೇಲೆ ನಿಧಾನವಾಗಿ ಹಿಂದೀಯ ನೆರಳು ಬೀಳಲು ಕಾರಣವಾಯಿತು. ನಾನಾ ನಿಯಮಗಳ ಮೂಲಕ ಹಿಂದೀಯನ್ನು ಒಪ್ಪಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿಸಲು ಮುಂದಾಯಿತು. ಹೀಗೆ ಮಾಡಲು ಗುರಿಗಳನ್ನು ಹಾಕಿಕೊಂಡು, ಯೋಜನೆಗಳನ್ನು ರೂಪಿಸಿಕೊಂಡು, ಇಲಾಖೆಗಳನ್ನು ಕಟ್ಟಿಕೊಂಡು ಕೇಂದ್ರಸರ್ಕಾರ ಕಾರ್ಯೋನ್ಮುಖವಾಯಿತು. ಸಂವಿಧಾನದ ೩೪೪ನೇ ವಿಧಿಯನ್ವಯ ೧೯೫೭ರಲ್ಲಿ ಸಂಸತ್ ಸಮಿತಿಯೊಂದನ್ನು ರಚಿಸಿತು.

ಭಾರತ ಕೇಂದ್ರಸರ್ಕಾರದ ಗೃಹಸಚಿವರೇ ಅಧ್ಯಕ್ಷರಾಗಿರುವ ಈ ಸಮಿತಿಯು ೨೦ ಲೋಕಸಭಾ ಸದಸ್ಯರನ್ನೂ, ೧೦ ರಾಜ್ಯಸಭಾ ಸದಸ್ಯರನ್ನೂ ಹೊಂದಿದ್ದು, ಪ್ರತಿ ಹತ್ತು ವರ್ಷಕ್ಕೊಮ್ಮೆ ಪುನರ್‌ರಚನೆಯಾಗುತ್ತಾ ಬಂದಿದೆ. ಈ ಸಮಿತಿಯು ಇಡೀ ದೇಶದ ಎಲ್ಲೆಡೆ ಇನ್ನೆರಡು ಉಪಸಮಿತಿಗಳ ಜೊತೆಗೂಡಿ ಹಿಂದೀ ಜಾರಿಯ ಬಗ್ಗೆ ಅಧ್ಯಯನ ನಡೆಸಿ ಎಂಟು ಭಾಗಗಳಲ್ಲಿ ರಾಷ್ಟ್ರಪತಿಗಳಿಗೆ ವರದಿ ನೀಡಿದೆ. ಎಂಟನೇ ಭಾಗದ ವರದಿಯನ್ನು ೨೦೦೫ರಲ್ಲಿ ಹದಿನೇಳು ಭಾಗಗಳಲ್ಲಿ ಪೂರ್ಣಗೊಳಿಸಿ ಸುಮಾರು ಎಪ್ಪತ್ತೈದು ಶಿಫಾರಸ್ಸುಗಳನ್ನು ರಾಷ್ಟ್ರಪತಿಗಳಿಗೆ ಸಲ್ಲಿಸಲಾಗಿದೆ. ಈ ಅಧ್ಯಾಯಗಳೆಲ್ಲಾ ಇಂಗ್ಲೀಶಿನಲ್ಲಿದ್ದು **www.rajbhasha.nic** ಅಂತರ್ಜಾಲ ತಾಣದಲ್ಲಿ ಸಿಗುತ್ತವೆ. ಈ ಕೆಳಗೆ ೧೭ರ ತಲೆಬರಹವನ್ನೂ, ಸಮಿತಿಯ ಶಿಫಾರಸ್ಸನ್ನು ಒಳಗೊಂಡಿರುವ ೧೭ನೇ ಅಧ್ಯಾಯದ ಸಾರಾಂಶವನ್ನು ಕೊಡಲಾಗಿದೆ. ಎಲ್ಲಾ ಅಧ್ಯಾಯಗಳ ಪ್ರಮುಖ ಭಾಗಗಳ ಕನ್ನಡದ ಅನುವಾದವನ್ನು ಹೊತ್ತಗೆಯ ಕೊನೆಯಲ್ಲಿರುವ ಅನುಬಂಧ-೨ರಲ್ಲಿ ನೀಡಲಾಗಿದೆ.

**ಸಂಸತ್ ಸಮಿತಿಯ ಎಂಟನೇ ವರದಿ:**

- ೧. ಸಂಸತ್ ಸಮಿತಿಯ ವರದಿಯ ಮುನ್ನುಡಿ
- ೨. ಸಮಿತಿಯು ಸಲ್ಲಿಸಿರುವ ಹಿಂದಿನ ಏಳುಭಾಗಗಳ ಮೇಲೆ ತೆಗೆದುಕೊಂಡಿರುವ ಕ್ರಮಗಳು

- ೩. ವರದಿಯ ಎಂಟನೇ ಭಾಗ
- ೪. ಕೃತಜ್ಞತೆಗಳು/ ನೆನಕೆಗಳು
- ೫. ಅಂಕಿಅಂಶಗಳು
- ೬. ವಲಯವಾರು ವಿಶ್ಲೇಷಣೆ
- ೭. ಆಡಳಿತ ಭಾಷಾ ಕಾಯ್ದೆ, ೧೯೬೩ ರ ವಿಭಾಗ ೩(೩)ರ ಪಾಲನೆ
- ೮. ಹಿಂದೀ ಆಡಳಿತ ಭಾಷಾ ಪ್ರಚಾರದ ಸಂಸ್ಥೆಗಳು
- ೯. ವಿಶ್ಲೇಷಣೆ
- ೧೦. ಕೇಂದ್ರ ಸರ್ಕಾರಿ ಕಚೇರಿಗಳಲ್ಲಿ ಪುಸ್ತಕ ಖರೀದಿಯ ಕುರಿತು
- ೧೧. ಗಣಕೀಕರಣ
- ೧೨. ನೇಮಕಾತಿ ನಿಯಮಗಳಲ್ಲಿ ಹಿಂದೀ ಕಡ್ಡಾಯ
- ೧೩. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಿತಿಗತಿ
- ೧೪. ಶಿಕ್ಷಣ ಕ್ಷೇತ್ರ ಮತ್ತು ಹಿಂದೀ
- ೧೫. ಸಾರ್ವಜನಿಕ ಉದ್ದಿಮೆಗಳು
- ೧೬. ಜಾಹೀರಾತು ನೀಡುವ ಬಗ್ಗೆ
- ೧೭. ಸಂಸತ್ ಸಮಿತಿಯ ವರದಿಯ **ಸಾರಾಂಶ ಮತ್ತು ಕಡೆನುಡಿ**

## ೧೭. ಸಂಸತ್ ಸಮಿತಿಯ ವರದಿಯ ಸಾರಾಂಶ ಮತ್ತು ಕಡೆನುಡಿ

ಬೇರೆ ಬೇರೆ ಕೇಂದ್ರಸರ್ಕಾರಿ ಇಲಾಖೆಗಳ ವ್ಯವಹಾರಗಳಲ್ಲಿ ಆಡಳಿತ ಭಾಷೆಯಾಗಿ ಹಿಂದೀ ಬಳಕೆಯ ಪ್ರಮಾಣವನ್ನು ಪರಿಶೀಲಿಸಲು ಸಂಸತ್ ಸದಸ್ಯರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಲಾಗಿದೆ. ಈ ಸಮಿತಿ ದೇಶದೆಲ್ಲೆಡೆ ಹಿಂದೀ ಬಳಕೆಯನ್ನು ಹೆಚ್ಚಿಸುವ ಬಗ್ಗೆ ಹಲವು ಶಿಫಾರಸ್ಸುಗಳನ್ನುಳ್ಳ ವರದಿಯನ್ನು ರಾಷ್ಟ್ರಪತಿಗಳಿಗೆ ಸಲ್ಲಿಸುತ್ತದೆ. ಆ ವರದಿಯನ್ನು ಮುಂದೆ ಸಂಸತ್ತಿನಲ್ಲಿ ಮಂಡಿಸಲಾಗುತ್ತದೆ ಮತ್ತು ಅದು ಎಲ್ಲಾ ರಾಜ್ಯಸರ್ಕಾರಗಳಿಗೂ ರವಾನೆಯಾಗುತ್ತದೆ. ಆಡಳಿತ ಭಾಷಾ ಕಾಯ್ದೆಯ ಏಳು ಬೇರೆ ಬೇರೆ ಮಗ್ಗಲುಗಳ ಬಗ್ಗೆ ಅನೇಕ ಭಾಗಗಳಲ್ಲಿ ಈ ಸಮಿತಿ ನೀಡಿದ ವರದಿಯ ಅಂಶಗಳು ಇಂತಿವೆ:

೧. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಈಗ ಇಂಗ್ಲಿಶಿನಲ್ಲಿರುವ ಹಲವು ಕಾಯ್ದೆಗಳ ಮಾಹಿತಿ, ಅರ್ಜಿ, ತರಬೇತಿ ವಿವರ... ಇತ್ಯಾದಿಯನ್ನು ಹಿಂದೀಗೆ ಭಾಷಾಂತರಿಸುವ ಬಗ್ಗೆ ಹಲವು ಶಿಫಾರಸ್ಸುಗಳನ್ನು ಮೊದಲ ಭಾಗದಲ್ಲಿ ಮಾಡಲಾಗಿದೆ.

೨. ಎರಡನೇ ಭಾಗದಲ್ಲಿ ಭಾಷಾಂತರಕ್ಕೆ ಬೇಕಾದ ಗಣಕಯಂತ್ರವೇ ಮೊದಲಾದ ಸಲಕರಣೆಗಳನ್ನು ಪಡೆದುಕೊಳ್ಳುವ ಬಗ್ಗೆ, ಅವುಗಳಲ್ಲಿ ದೇವನಾಗರಿ ಲಿಪಿಯು ಲಭ್ಯವಾಗುವಂತೆ ಮಾಡುವುದರ ಬಗ್ಗೆ ಮತ್ತು ಈ ನಿಟ್ಟಿನಲ್ಲಿ ಅಗತ್ಯ ತರಬೇತಿ ಕೊಡುವ ಬಗೆಗಿನ ಶಿಫಾರಸ್ಸುಗಳನ್ನು ಮಾಡಲಾಗಿದೆ.

೩. ಮೂರನೇ ಭಾಗದಲ್ಲಿ ಭಾರತದ ಒಳಗೂ, ಹೊರಗೂ ಇರುವ ಶಾಲೆ ಮತ್ತು ವಿಶ್ವವಿದ್ಯಾಲಯಗಳಲ್ಲಿ ಹಿಂದೀಯನ್ನು ಕಲಿಸಲು ಮತ್ತು ತ್ರಿಭಾಷಾ ಸೂತ್ರದನ್ವಯ ಹಿಂದೀಮಾಧ್ಯಮದಲ್ಲಿ ಇತರ ವಿಷಯಗಳನ್ನು ಕಲಿಯಲು ಇರುವ ವ್ಯವಸ್ಥೆ ಹಾಗೂ ಕೇಂದ್ರಸರ್ಕಾರಿ ಸಾಮ್ಯದ ಇತರ ಹಲವು ಸಂಸ್ಥೆಗಳಲ್ಲಿ ಹಿಂದೀ ಬಳಕೆ ಹೆಚ್ಚಿಸಲು ಕೈಗೊಂಡಿರುವ ಕ್ರಮಗಳನ್ನು ಪರಿಶೀಲಿಸಲಾಗಿದೆ. ಭಾರತದ ಬೇರೆ ಬೇರೆ ಭಾಗಗಳಲ್ಲಿ ಹಲವು ಸಚಿವಾಲಯಗಳ ಸಮೀಕ್ಷೆ ನಡೆಸಿದ ಸಮಿತಿ, ಕೇಂದ್ರಸರ್ಕಾರದ ಹುದ್ದೆಗಳ ನೇರ ನೇಮಕಾತಿ ಮತ್ತು ಇತರೆ ಇಲಾಖಾ ಪರೀಕ್ಷೆಗಳಲ್ಲಿ ಹಿಂದೀ ಅಥವಾ ಇಂಗ್ಲಿಶನ್ನು ಕಡ್ಡಾಯಗೊಳಿಸಲು ಮಾಡಿರುವ ವ್ಯವಸ್ಥೆಯನ್ನು ಪರಿಶೀಲಿಸಿದೆ. ಬೇರೆ ಬೇರೆ ಹುದ್ದೆಗಳ ಆಯ್ಕೆ ನಿಯಮಗಳು ಮತ್ತು

ತರಬೇತಿಯ ಭಾಷೆಯಾಗಿ ಹಿಂದೀಯನ್ನು ಬಳಸುವ ಪ್ರಮಾಣದ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೪. ಈ ಸಮಿತಿಯು ದೇಶದ ವಿವಿಧ ಭಾಗಗಳಲ್ಲಿರುವ ಕೇಂದ್ರಸರ್ಕಾರಿ ಕಛೇರಿಗಳಲ್ಲಿ, ಸಚಿವಾಲಯಗಳಲ್ಲಿ, ಇಲಾಖೆಗಳಲ್ಲಿ, ಸರ್ಕಾರಿ ಅಧೀನ ಸಂಸ್ಥೆಗಳಲ್ಲಿ, ಸ್ವಾಯತ್ತ ಸಂಸ್ಥೆಗಳಲ್ಲಿ ಆಡಳಿತ ಭಾಷಾ ಕಾಯ್ದೆಯಲ್ಲಿ ನಿಗದಿ ಪಡಿಸಿದ ಪ್ರಮಾಣದಲ್ಲಿ ನಿಯಮಿತವಾಗಿ ಹಿಂದೀ ಬಳಕೆ ಹೆಚ್ಚಿಸಲಾಗುತ್ತಿದೆಯೇ ಎಂಬ ಬಗ್ಗೆ ಪರಿಶೀಲನೆ ನಡೆಸಿದೆ.

೫. ನ್ಯಾಯಾಲಯಗಳು, ನ್ಯಾಯಾಧಿಕರಣಗಳು ಮತ್ತು ಶಾಸನಗಳಲ್ಲಿ ಹಿಂದೀ ಬಳಕೆಯ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೬. ರಾಜ್ಯ ಮತ್ತು ಕೇಂದ್ರಸರ್ಕಾರಗಳ ನಡುವಿನ ಎಲ್ಲಾ ವಹಿವಾಟಿನಲ್ಲಿ ಎಷ್ಟರ ಮಟ್ಟಿಗೆ ಹಿಂದೀ ಬಳಕೆಯಾಗುತ್ತಿದೆ ಎಂಬ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೭. ಏಳನೇ ಭಾಗದಲ್ಲಿ, ಜಾಗತೀಕರಣದ ಈ ದಿನಗಳಲ್ಲಿ ಹಿಂದೀಯ ಸ್ಥಿತಿ, ಗಣಕಯಂತ್ರಗಳಲ್ಲಿ ಹಿಂದೀ ಬಳಕೆಗಿರುವ ಸವಾಲು, ಹಿಂದೀಯ ಪ್ರಚಾರ, ಪ್ರಸಾರದ ಬೇರೆ ಬೇರೆ ವಿಧಾನಗಳ ಬಗ್ಗೆ ಸಮಿತಿ ಪರಿಶೀಲನೆ ನಡೆಸಿ ಶಿಫಾರಸ್ಸುಗಳನ್ನು ನೀಡಿದೆ.

ಪರಿಶೀಲನೆಯ ಸಂದರ್ಭದಲ್ಲಿ ಈ ಕೆಳಗಿನ ವಿಷಯಗಳನ್ನು ಸಮಿತಿ ಗಣನೆಗೆ ತೆಗೆದುಕೊಂಡಿದೆ.

- ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಖರೀದಿಸಲಾಗುವ ಪುಸ್ತಕಗಳು.
- ಗಣಕೀಕರಣ ಮತ್ತು ಹಿಂದೀ
- ಉದ್ಯೋಗ ನೇಮಕಾತಿ ನಿಯಮಗಳಲ್ಲಿ ಹಿಂದೀ ಭಾಷೆಯ ಅರಿವನ್ನು ಕಡ್ಡಾಯಗೊಳಿಸುವ ವ್ಯವಸ್ಥೆ

- ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಿತಿಗತಿ
- ಶೈಕ್ಷಣಿಕ ಮತ್ತು ತರಬೇತಿ ಸಂಸ್ಥೆಗಳಲ್ಲಿ ಹಿಂದೀ ಮಾಧ್ಯಮದ ಲಭ್ಯತೆ
- ಸಾರ್ವಜನಿಕ ಸಾಮ್ಯದ ಸಂಸ್ಥೆಗಳಲ್ಲಿ ವ್ಯವಹಾರಿಕ ಸಂದರ್ಭಗಳಲ್ಲಿ ಹಿಂದೀ ಬಳಕೆ

**ಮಾಡಲಾದ ಶಿಫಾರಸ್ಸುಗಳು:**

೧. ಕೇಂದ್ರಸರ್ಕಾರಿ ಇಲಾಖೆಗಳಾದ ಗೃಹಖಾತೆ, ರಕ್ಷಣಾ ಇಲಾಖೆ, ಕಲ್ಲಿದ್ದಲು ಮತ್ತು ಗಣಿ, ರಾಸಾಯನಿಕ ಮತ್ತು ಗೊಬ್ಬರ, ಗ್ರಾಮೀಣ ಅಭಿವೃದ್ಧಿ, ವಿದ್ಯುತ್ ಮತ್ತು ಉಕ್ಕು ಸಚಿವಾಲಯಗಳ ಇಲಾಖೆಗಳಲ್ಲಿ ನೂರಕ್ಕೆ ಇಪ್ಪತ್ತೈದಕ್ಕೂ ಹೆಚ್ಚು ಜನಕ್ಕೆ ಹಿಂದೀ ಬರುತ್ತಿಲ್ಲ ಎನ್ನುವುದು ಗಂಭೀರವಾದ ಆತಂಕದ ವಿಷಯ. ಒಂದು ವರ್ಷದೊಳಗೆ ಇವರಿಗೆಲ್ಲಾ ಗನಕಯಂತ್ರ ಅಥವಾ ದೂರಶಿಕ್ಷಣದ ವ್ಯವಸ್ಥೆಯ ಮೂಲಕವಾದರೂ ಸರಿಯೇ ಹಿಂದೀ ತರಬೇತಿ ನೀಡಬೇಕು. ಹಿಂದೀ ಪತ್ರಕ್ಕೆ ಹಿಂದೀಯಲ್ಲೇ ಉತ್ತರಿಸಬೇಕೆನ್ನುವ ನಿಯಮ ಪಾಲಿಸಿರದ ಬಗ್ಗೆ ಕಾರ್ಯದರ್ಶಿಗಳ ಹಂತದಲ್ಲಿ ಸೂಕ್ತಕ್ರಮ ಕೈಗೊಳ್ಳಬೇಕು.

೨. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ರಕ್ಷಣಾ ಇಲಾಖೆ, ಹಡಗು ಇಲಾಖೆ, ಕೃಷಿ ಇಲಾಖೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಡತಗಳು ಇಂಗ್ಲಿಷಿನಲ್ಲಿದ್ದು, ಒಂದು ವಿಶೇಷ ಸಮಿತಿಯನ್ನು ರಚಿಸಿ ಒಂದು ವರ್ಷದ ಅವಧಿಯೊಳಗೆ ಈ ಎಲ್ಲಾ ಮಾಹಿತಿಯನ್ನು ಹಿಂದೀಯಲ್ಲಿ ಸಿಗುವಂತೆ ಮಾಡಬೇಕು. ಅಣುಶಕ್ತಿ, ರಾಸಾಯನಿಕ ಮತ್ತು ಗೊಬ್ಬರ, ವಿದ್ಯುತ್, ವಾಣಿಜ್ಯ ಮತ್ತು ಉದ್ಯಮ ಇಲಾಖೆ, ಗೃಹಖಾತೆ, ಯೋಜನಾ ಖಾತೆ ಮತ್ತು ಮಾನವ ಸಂಪನ್ಮೂಲ ಇಲಾಖೆ, ನಾಗರೀಕ ವಿಮಾನ ಯಾನ ಮತ್ತು ಪೆಟ್ರೋಲಿಯಂ ಖಾತೆಯ ಕಡತ ಮತ್ತು ಕೈಪಿಡಿಗಳನ್ನು ೬ರಿಂದ ೯ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು. ನಗರಾಭಿವೃದ್ದಿ, ಕಲ್ಲಿದ್ದಲು ಮತ್ತು ಗಣಿ, ಜಲ ಸಂಪನ್ಮೂಲ,

ಯುವಜನ ಸೇವೆ ಮತ್ತು ಕ್ರೀಡೆ, ರೈಲ್ವೆ ಇಲಾಖೆ, ಸಮಾಜ ಕಲ್ಯಾಣ, ವಿಜ್ಞಾನ ಮತ್ತು ತಂತ್ರಜ್ಞಾನ, ಕಾರ್ಮಿಕ ಮತ್ತು ಹಣಕಾಸು ಖಾತೆಯ ಎಲ್ಲಾ ಕಡತ ಮತ್ತು ಕೈಪಿಡಿಗಳನ್ನು ೬ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು. ವಿದೇಶಾಂಗ ವ್ಯವಹಾರ, ಕಾನೂನು, ಪರಿಸರ, ಐಟಿ, ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರೀಕ ಸರಬರಾಜು, ಗ್ರಾಮೀಣ ಅಭಿವೃದ್ದಿ ಇಲಾಖೆಗಳ ಕಡತ ಮತ್ತು ಕೈಪಿಡಿಗಳನ್ನು ೩ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು.

೩. ಮಾನವ ಸಂಪನ್ಮೂಲ ಇಲಾಖೆ, ಸಂಸ್ಕೃತಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಮತ್ತು ಗ್ರಾಹಕ ವಹಿವಾಟು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಗಳು ಇತರೇ ಭಾಷೆಗಳಲ್ಲಿ ಹೊರತಂದಿರುವ ಪ್ರಕಾಶನಗಳ ಸಂಖ್ಯೆಯು ಹಿಂದೀ ಭಾಷೆಯ ಪುಸ್ತಕಗಳ ಸಂಖ್ಯೆಗಿಂತಾ ಹೆಚ್ಚಿದೆ. ೧೯೭೨ರ ಸರ್ಕಾರಿ ಆದೇಶದ ಪ್ರಕಾರ ಹಿಂದೀ ಭಾಷೆಯ ಪ್ರಕಾಶನಗಳಿಗಿಂತ ಇನ್ನುಳಿದ ಯಾವ ಭಾಷೆಯ ಪ್ರಕಾಶನವೂ ಹೆಚ್ಚಿರಬಾರದು.

೪. 'ಸಿ' ವಲಯದಲ್ಲಿನ (ಕರ್ನಾಟಕ ಇದರಲ್ಲಿ ಬರುತ್ತೆ) ಕೇಂದ್ರಕಛೇರಿಗಳಲ್ಲಿ ಕಡಿಮೆಯೆಂದರೆ ಇಂತಿಷ್ಟು ಪ್ರತಿಶತ ದಾಖಲೆಗಳನ್ನು ಹಿಂದೀಯಲ್ಲೇ ಮಾಡಬೇಕೆನ್ನುವ ನಿಯಮವನ್ನು ರೂಪಿಸಬೇಕು ಮತ್ತು ಈ ಭಾಗದ ಕಛೇರಿಗಳಲ್ಲಿ "ಸಾಧ್ಯವಾದಷ್ಟು (as far as possible)" ಹಿಂದೀಯಲ್ಲಿ ದಾಖಲೆಗಳನ್ನು ಮಾಡಬೇಕು ಅನ್ನುವ ನಿಯಮವನ್ನು ತೆಗೆದುಹಾಕಬೇಕು.

೫. ಯಾವ ಯಾವ ರಾಜ್ಯದಲ್ಲಿ ಹಿಂದೀ ಆಡಳಿತ ಭಾಷೆಯಾಗಿಲ್ಲವೋ, ಅಂತಹ ರಾಜ್ಯಸರ್ಕಾರವನ್ನು ಗೃಹ ಇಲಾಖೆಯು ಮಾತನ್ನಾಡಿಸಿ ಆಯಾ ರಾಜ್ಯದ ಆಡಳಿತ ಭಾಷೆಯ ಜೊತೆಗೆ ಹಿಂದೀಗೂ ಆಡಳಿತ ಭಾಷೆಯ ಮನ್ನಣೆ ಕೊಡಿಸಲು ಮುಂದಾಗಬೇಕು.

೭. ವಲಯ 'ಸಿ' ಯಲ್ಲಿ ಬರುವ ಎಲ್ಲಾ ಕಛೇರಿಗಳಲ್ಲಿ ಆಯಾರಾಜ್ಯದ ಭಾಷೆಗಳನ್ನು ಬಳಸಿ ಹಿಂದೀಯನ್ನು ಕಲಿಸುವ ಗಣಕಯಂತ್ರ ಆಧಾರಿತ ಕಲಿಕಾ ವ್ಯವಸ್ಥೆಗೆ ವ್ಯಾಪಕ ಪ್ರಚಾರ ಕೊಡಬೇಕು.

೭. ಹಿಂದೀ ಬಳಕೆಯನ್ನು ಹೆಚ್ಚಿಸಲು ಇರುವ ನಗರ ಆಡಳಿತ ಭಾಷಾ ಅನುಷ್ಠಾನ ಸಮಿತಿ(ಟೋಲಿಕ್)ಗಳ ಸಭೆ ನಡೆಸಲು ಆಗುವ ವೆಚ್ಚದ ಪ್ರಮಾಣ ಹೆಚ್ಚಿರುವುದರಿಂದ, ಪ್ರತಿಸಭೆಗೆ ನಿಗದಿಪಡಿಸಿದ ಮೊತ್ತವನ್ನು ೩,೦೦೦ ರೂಪಾಯಿಗಳಿಂದ ೧೦,೦೦೦ರೂಪಾಯಿಗೆ ಏರಿಸಬೇಕು.

೮. ತಮಿಳುನಾಡು, ಕೇರಳ, ಕರ್ನಾಟಕದಂತಹ ಹಿಂದೀಯೇತರ ರಾಜ್ಯಗಳಲ್ಲಿ ಹಿಂದೀ ಪತ್ರಿಕೆ, ಹಿಂದೀ ಸಾಪ್ತಾಹಿಕಗಳನ್ನು ಹೊರತರಲು ಮತ್ತು ಅವುಗಳಲ್ಲಿ ಕೆಲಸ ಮಾಡುವ ಪತ್ರಕರ್ತರನ್ನು ಉತ್ತೇಜಿಸಲು ಕೆಲವು ವಿಶೇಷ ಯೋಜನೆಗಳನ್ನು ಕೈಗೆತ್ತಿಕೊಳ್ಳಬೇಕು.

೯. 'ಸಿ' ವಲಯದಲ್ಲಿ (ಕರ್ನಾಟಕ ಇದರಲ್ಲಿ ಬರುತ್ತೆ) ಬರುವ ಎಲ್ಲಾ ಕಛೇರಿಗಳಲ್ಲಿ ಕೊನೆಪಕ್ಷ ಒಬ್ಬರಾದರೂ ಹಿಂದೀ ಬಲ್ಲ ಉದ್ಯೋಗಿಯನ್ನು ನೇಮಿಸಿಕೊಳ್ಳಬೇಕು.

೧೦. 'ಎ', 'ಬಿ' ಮತ್ತು 'ಸಿ' ವಲಯಗಳಲ್ಲಿ ಬರುವ ಎಲ್ಲಾ ಇಲಾಖೆಯ ಕಛೇರಿಗಳು ಮತ್ತು ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳಲ್ಲಿ ಕ್ರಮವಾಗಿ ೫೦%, ೩೦% ಮತ್ತು ೨೦% ಕೆಲಸವನ್ನು ಹಿಂದೀಯಲ್ಲಿ ಕಡ್ಡಾಯವಾಗಿ ಮಾಡುವಂತೆ ಶಿಫಾರಸ್ಸು ಮಾಡಲಾಗಿದೆ.

೧೧. ಸ್ವಾತಂತ್ರ್ಯ ಹೋರಾಟಗಾರರ, ದೇಶಭಕ್ತರ ಆತ್ಮಕತೆ, ಜೀವನ ಚರಿತ್ರೆಯುಳ್ಳ ಸರಳ ಹಿಂದೀ ಪುಸ್ತಕಗಳನ್ನು ಖರೀದಿಸಿ ಕೇಂದ್ರಸರ್ಕಾರಿ ಉದ್ಯೋಗಿಗಳಿಗೆ ಓದಲು ಉತ್ತೇಜಿಸಬೇಕು.

೧೨. ಹಿಂದೀ ಬಳಕೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ನಡೆಸಲು ಕೇಂದ್ರೀಯ ಆಡಳಿತ ಭಾಷಾ ಅನುಷ್ಠಾನ ಸಮಿತಿ(ಕೋಲಿಕ್)ಯ ಸಭೆಯ

ಅಧ್ಯಕ್ಷತೆಯನ್ನು ಕ್ಯಾಬಿನೇಟ್ ಸೆಕ್ರಟರಿ ಮತ್ತು ಎಲ್ಲಾ ಇಲಾಖೆಗಳ ಕಾರ್ಯದರ್ಶಿಗಳ ನೇತೃತ್ವದಲ್ಲಿ ನಡೆಸಬೇಕು.

೧೩. ಹಿಂದೀಯಲ್ಲಿ ವೈಜ್ಞಾನಿಕ, ತಾಂತ್ರಿಕ ಮತ್ತು ಸಂಶೋಧನಾ ಸಾಹಿತ್ಯವೆಲ್ಲಗಳೆಲ್ಲವನ್ನು ಒಂದೆಡೆ ದೊರಕುವಂತೆ ಮಾಡಲು ಪುಸ್ತಕ ಬ್ಯಾಂಕ್‌ಗಳ ಸ್ಥಾಪನೆಯನ್ನು ತಕ್ಷಣವೇ ಸರ್ಕಾರ ಮಾಡಬೇಕು ಮತ್ತು ಅಂತಹ ಸಾಹಿತ್ಯಕ್ಕೆ ವ್ಯಾಪಕ ಪ್ರಚಾರ ಕೊಟ್ಟು ಸಾಮಾನ್ಯ ಜನರು ಬಳಸುವಂತೆ ಮಾಡಬೇಕು.

೧೪. ಅನುವಾದ ಕೇಂದ್ರ (ಟ್ರಾನ್ಸಲೇಶನ್ ಬ್ಯುರೋ)ವೊಂದನ್ನು ಸ್ಥಾಪಿಸಿ ವೈಜ್ಞಾನಿಕ ಮತ್ತು ತಾಂತ್ರಿಕ ಪದಗಳನ್ನು ಇಂಗ್ಲೀಶಿನಿಂದ ಹಿಂದೀಗೆ ಭಾಷಾಂತರಿಸಲು ಹಿಂದೀ ಬಲ್ಲ ಯೋಗ್ಯರನ್ನು ನೇಮಿಸಿಕೊಳ್ಳಬೇಕು.

೧೫. ವಲಯ 'ಎ' ಮತ್ತು 'ಬಿ' (ಮಹಾರಾಷ್ಟ್ರ, ಗುಜರಾತ್‌ನಂತಹ ರಾಜ್ಯಗಳು ಇಲ್ಲಿ ಬರುತ್ತೆ)ಯಲ್ಲಿರುವ ವಿಶ್ವವಿದ್ಯಾಲಯಗಳಲ್ಲಿ ಇಂಜಿನಿಯರಿಂಗ್, ಕಂಪ್ಯೂಟರ್ಸ್, ತಂತ್ರಜ್ಞಾನ, ಸಂಶೋಧನೆಯಂತಹ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಸಬಹುದು.

೧೬. ರಿಸರ್ವ್‌ಬ್ಯಾಂಕ್ ಮತ್ತು ಹಣಕಾಸು ಇಲಾಖೆ ಎಲ್ಲಾ ಸಾರ್ವಜನಿಕ ಬ್ಯಾಂಕುಗಳಲ್ಲಿ ಬಳಸಲು ಹಿಂದೀ/ ಇಂಗ್ಲೀಶ್‌ಗಳನ್ನು ಬೆಂಬಲಿಸುವ ತಂತ್ರಾಂಶ ಅಭಿವೃದ್ಧಿಗೆ ಮುಂದಾಗಬೇಕು.

೧೭. ಬ್ಯಾಂಕುಗಳು ಕೊಡಮಾಡುವ ಎಟಿಎಮ್ ಮತ್ತು ಕ್ರೆಡಿಟ್ ಕಾರ್ಡ್ ಮುಂತಾದ ಸೇವೆಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಕೊಡಬೇಕು.

೧೮. ಸರ್ಕಾರಿ ಸ್ವಾಮ್ಯದ ವಿಮಾಸಂಸ್ಥೆಗಳು ಕೊಡುವ ಎಲ್ಲಾ ಪಾಲಿಸಿಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಕೊಡುವಂತೆ ಹಣಕಾಸು ಇಲಾಖೆ ಕ್ರಮ ಕೈಗೊಳ್ಳಬೇಕು.

೧೯. ರೈಲ್ವೇ ಮತ್ತು ವಿಮಾನಯಾನ ಇಲಾಖೆಗಳು ತನ್ನೆಲ್ಲ ನಿಲ್ದಾಣಗಳಲ್ಲಿ ಡಿಜಿಟಲ್ ಮಾಹಿತಿ ಬೋರ್ಡ್‌ಗಳಲ್ಲಿ ಮಾಹಿತಿಯನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಲಭ್ಯವಾಗಿಸಬೇಕು.

೨೦. ಎಲ್ಲಾ ಕೇಂದ್ರಸರ್ಕಾರಿ ಇಲಾಖೆಗಳು ತಮ್ಮ ಅಂತರ್ಜಾಲ ತಾಣಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಸಿಗುವಂತೆ ಮಾಡಬೇಕು.

೨೧. ಕೇಂದ್ರಸರ್ಕಾರಿ ಕೆಲಸಗಳಿಗಾಗಿ ನಡೆಯುವ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮೆಟ್ರಿಕ್ ಮಟ್ಟದ ಹಿಂದೀ ಪರೀಕ್ಷೆಯೊಂದನ್ನು ಕಡ್ಡಾಯ ಮಾಡಬೇಕು. ಈ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಬೇಕು.

೨೨. 'ಎ' ವಲಯದಿಂದ 'ಸಿ' ವಲಯಕ್ಕೆ ವರ್ಗವಾಗಿ ಬಂದು ಕೆಲಸ ಮಾಡುವ ಹಿಂದೀ ಉದ್ಯೋಗಿಗಳಿಗೆ ವಿಶೇಷ ಭತ್ಯ ನೀಡಬೇಕು. 'ಎ' ವಲಯದಿಂದ ಬಂದು ಕೆಲಸ ಮಾಡುವ ಉದ್ಯೋಗಿಗಳು ಯಾವುದೇ ಹಿಂಜರಿಕೆ ಇಲ್ಲದೇ 'ಸಿ' ವಲಯಕ್ಕೆ ಬರುವಂತಾಗುವ ಸಲುವಾಗಿ ಇಂತಹ ವರ್ಗಾವಣೆಯನ್ನು ಅಲ್ಪಾವಧಿಗೆ ಸೀಮಿತಗೊಳಿಸಬೇಕು.

೨೩. ಎಲ್ಲಾ ಕೇಂದ್ರೀಯ ವಿದ್ಯಾಲಯ, ನವೋದಯ ವಿದ್ಯಾಲಯ ಮತ್ತು 'ಎ' ಮತ್ತು 'ಬಿ' ವಲಯಗಳಲ್ಲಿರುವ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ತಕ್ಷಣದಿಂದಲೇ ಹತ್ತನೇ ತರಗತಿಯವರೆಗಿನ ಎಲ್ಲಾ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಸಲು ಮುಂದಾಗಬೇಕು. ಸ್ಥಳೀಯ ಭಾಷೆ ಮತ್ತು ಇಂಗ್ಲೀಶ್‌ಗಳನ್ನು ಒಂದು ವಿಷಯವಾಗಿ ಕಲಿಸಬಹುದು. ಕೆಲಕಾಲದ ನಂತರ ಇದನ್ನು 'ಸಿ' ವಲಯದಲ್ಲಿರುವ ಶಾಲೆಗಳಿಗೂ ವಿಸ್ತರಿಸಬೇಕು.

೨೪. ಎಲ್ಲಾ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಹಿಂದೀ ಕಲಿಕೆಯ ಪೀಠವನ್ನು ಕಡ್ಡಾಯವಾಗಿ ಆರಂಭಿಸಬೇಕು.

೨೫. ರಾಷ್ಟ್ರೀಯ ಶಿಕ್ಷಣ ಯೋಜನೆಗಳಾದ "ಸರ್ವ ಶಿಕ್ಷಾ ಅಭಿಯಾನ"ದಲ್ಲಿ ಕಲಿಕೆಯನ್ನು ಕಡ್ಡಾಯವಾಗಿ ಹಿಂದೀ ಮಾಧ್ಯಮದಲ್ಲಿ ಮಾತ್ರ ಮಾಡಬೇಕು.

೨೬. ವಿಶ್ವವಿದ್ಯಾಲಯ, ತಾಂತ್ರಿಕ, ವೃತ್ತಿಪರ ಮತ್ತು ಸಂಶೋಧನಾ ಸಂಸ್ಥೆಗಳ ಪ್ರವೇಶ ಪರೀಕ್ಷೆಯಲ್ಲಿ ಹಿಂದೀ ಮಾಧ್ಯಮದ ಆಯ್ಕೆಯನ್ನು ಕಡ್ಡಾಯವಾಗಿ ಕೊಡಮಾಡಬೇಕು.

೨೭. ಅತಿ ಹೆಚ್ಚು ಪ್ರಸಾರ ವ್ಯಾಪ್ತಿ ಇರುವ ಟಿವಿ, ರೇಡಿಯೋ ಮುಂತಾದ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಮಾಡಲಾಗುವ ಶೈಕ್ಷಣಿಕ ಪ್ರಸಾರಗಳು ಕೇವಲ ಹಿಂದೀ ಭಾಷೆಯಲ್ಲಿರಬೇಕು.

೨೮. ಹಿಂದೀ ಪತ್ರಿಕೆಗಳಲ್ಲಿ ಇಂಗ್ಲೀಶಿನಲ್ಲಿ ಮತ್ತು ಇಂಗ್ಲಿಶ್ ಪತ್ರಿಕೆಗಳಲ್ಲಿ ಹಿಂದೀಯಲ್ಲಿ ಜಾಹೀರಾತು ನೀಡಬಹುದು. ಆದರೆ ಕೊನೇಪಕ್ಷ ೫೦% ಜಾಹೀರಾತು ಕೇವಲ ಹಿಂದೀಯಲ್ಲಿರಬೇಕು, ಇನ್ನುಳಿದ ೫೦% ಇಂಗ್ಲೀಶ್ ಮತ್ತಿತರ ಪ್ರಾದೇಶಿಕ ಭಾಷೆಯಲ್ಲಿರಬಹುದು.

೨೯. ಹಿಂದೀ ಹುದ್ದೆಗಳನ್ನು ಸೃಷ್ಟಿಸಲು ಇರುವ ಕಟ್ಟುಪಾಡುಗಳನ್ನು ಸರಳಗೊಳಿಸಬೇಕು, ವಿಶೇಷವಾಗಿ 'ಸಿ' ವಲಯದಲ್ಲಿ ಬರುವ ಕಛೇರಿಗಳಲ್ಲಿ ಇದನ್ನು ಆದಷ್ಟು ಸರಳಗೊಳಿಸಬೇಕು.

೩೦. ಎ, ಬಿ, ಸಿ ಮತ್ತು ಡಿ ದರ್ಜೆಯ ಹುದ್ದೆಗಳಿಗೆ ನಡೆಯುವ ನೇರ ನೇಮಕಾತಿಯಲ್ಲಿ ಇಂತಿಷ್ಟು ಪ್ರಮಾಣದ ಹಿಂದೀ ಜ್ಞಾನ ಕಡ್ಡಾಯವೆಂದು ನಿಗದಿಪಡಿಸಬೇಕು. ಇದರಿಂದ ತರಬೇತಿ ಕೊಡಲು ಉಂಟಾಗುವ ತೊಂದರೆಗಳನ್ನು ನಿವಾರಿಸಬಹುದು. ಎ, ಬಿ, ಸಿ ದರ್ಜೆಯ ಹುದ್ದೆಗಳಿಗೆ ಕೊನೇಪಕ್ಷ ಮೆಟ್ರಿಕ್ ಹಂತದ ಹಿಂದೀ ಜ್ಞಾನವನ್ನೂ, 'ಡಿ' ದರ್ಜೆಯ ಹುದ್ದೆಗಳಿಗೆ ಕೊನೇಪಕ್ಷ ಎಂಟನೇ ತರಗತಿಯ ಮಟ್ಟದ ಹಿಂದೀ ಜ್ಞಾನವನ್ನು ನಿಗದಿಪಡಿಸಬಹುದು.

ಈ ಶಿಫಾರಸ್ಸುಗಳಲ್ಲಿ ಬಹುತೇಕವುಗಳನ್ನು ಅಂಗೀಕರಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ರಾಷ್ಟ್ರಪತಿಗಳ ಕಛೇರಿಯಿಂದ ಹಲವಾರು ಆದೇಶಗಳನ್ನೂ ಹೊರಡಿಸಲಾಗಿದೆ. ಕೆಲವನ್ನು ಬದಲಾವಣೆಗಳೊಂದಿಗೆ ಒಪ್ಪಲಾಗಿದೆ. ಕೆಲವನ್ನು ಸದ್ಯಕ್ಕೆ ತಿರಸ್ಕರಿಸಲಾಗಿದೆ. ಗಮನಿಸಿ... ಸದ್ಯಕ್ಕೆ ತಿರಸ್ಕರಿಸಲಾಗಿದೆ. ಇವಾದರೂ ಯಾಕೆ ತಿರಸ್ಕರಿಲ್ಪಟ್ಟಿವೆ ಎಂದರೆ ಬಹುಶಃ ಇವನ್ನು ಒಪ್ಪಿಬಿಟ್ಟರೆ ದೇಶದಲ್ಲಿ ವಿಪ್ಲವವಾದೀತು ಎಂದಷ್ಟೆ. ಇನ್ನಷ್ಟು ಕಾಲಪಕ್ವವಾದ ಮೇಲೆ, ಅಂದರೆ ಇಂದಲ್ಲದಿದ್ದರೆ ನಾಳೆ ಈ ಶಿಫಾರಸ್ಸುಗಳೂ ಜಾರಿಯಾಗುವುದು ಖಂಡಿತಾ. ಎಲ್ಲಕ್ಕೂ ಸಂವಿಧಾನದ ಆಶಯ, ಇಂತಹ ಕಾಯ್ದೆಯ, ಇಂತಹ ನಿಯಮದ, ಇಂತಹ ನೀತಿಯ ಅನ್ವಯ ಎನ್ನುವ ಸಮರ್ಥನೆಯೊಂದಿಗೆ ಇವು ಜಾರಿಗೊಂಡರೂ ಅಚ್ಚರಿಯಿಲ್ಲ.

# ಹಿಂದೀ ಹರವು



Khowar
Shina
Pashai
Kashmiri
Kohistani
Dogri
Pahari
Punjabi
Lahnda
Nepali
Asamiya
Rajasthani
Hindi
Bihari
Sindhi
Bengali
Gujarati
Bhili
Oriya
Khandeshi
Marathi
Konkani
Mahal
Sinhala
Dhivehi

# ಅಧ್ಯಾಯ – ೪

# ಹಿಂದೀ ಒಪ್ಪಿಸಲು ಬಳಸುವ ಪೊಳ್ಳುಗಳು

ಭಾರತದ ಭಾಷಾನೀತಿಯನ್ನು ರೂಪಿಸಿ ಆ ಮೂಲಕ ಹಿಂದೀಯನ್ನು ದೇಶದ ಮೂಲೆಮೂಲೆಯಲ್ಲಿ ಹರಡುವ ಕೇಂದ್ರಸರ್ಕಾರದ ಪ್ರಯತ್ನಗಳಿಗೆ ಜನರಿಂದ ವಿರೋಧ ಬಾರದಂತೆ ತಡೆಯಲು ಏನೆಲ್ಲಾ ಪ್ರಚಾರ ಮಾಡಲಾಗುತ್ತಿದೆ? ಯಾವೆಲ್ಲಾ ಕಾರಣಗಳನ್ನು ನೀಡಿ ಹಿಂದೀ ಕಲಿಕೆ ಹಾಗೂ ಬಳಕೆ ಅಗತ್ಯ ಎನ್ನಲಾಗುತ್ತಿದೆ? ಈ ನಂಬಿಕೆಗಳು ಎಷ್ಟು ನಿಜಾ?

## ಹಿಂದೀ ಒಪ್ಪಿಸಲು ಬಳಸುವ ಪೊಳ್ಳುಗಳು

ಹಿಂದೀ ಬೇಕೆಂದು ಒಪ್ಪಿಸಲು ಬಳಸುವ ಹಲವು ಕಾರಣಗಳತ್ತ ಕಣ್ಣು ಹಾಯಿಸೋಣ. ಸಂವಿಧಾನದಲ್ಲಿ ಹಿಂದೀಯನ್ನು ಭಾರತದ ಏಕೈಕ ಆಡಳಿತ ಭಾಷೆಯನ್ನಾಗಿಸುವ ಆಶಯ ಬರೆದಿರುವುದು ತಿಳಿದೇ ಇದೆ. ಇದು ಸ್ಪಷ್ಟವಾಗಿದ್ದು, ಇಂಗ್ಲೀಶ್ ಬಳಸುವ ಬಗ್ಗೆಯಾಗಲೀ, ಪ್ರಾದೇಶಿಕ ಭಾಷೆಗಳ ಬಗ್ಗೆಯಾಗಲೀ ಅದರಲ್ಲಿ ಉಲ್ಲೇಖವಿರುವುದು ಮೂಲತಃ ಹಿಂದೀಯನ್ನು ಒಪ್ಪದವರನ್ನು ಸಮಾಧಾನ ಮಾಡುವುದಕ್ಕೆಂದೇ ಆಗಿರುವಂತಿದೆ.

ಹಿಂದೀ ಹೇರಿಕೆ ವಿರೋಧಿಗಳು "ಇಷ್ಟು ದಿವಸ ಇಂಗ್ಲೀಶ್‌ನಲ್ಲಿ ಆಡಳಿತ ನಡೆಯುತ್ತಿತ್ತು, ಈಗ ಹಿಂದೀಗೆ ಬದಲಾಗುವುದು ಎಂದರೆ ಇನ್ನು ಹಿಂದೀ ಆಳ್ವಿಕೆ ಶುರುವಾದಂತೆ" ಎಂದರು. ಅದಕ್ಕೆ ಇಂಗ್ಲೀಶಿನ ಬಳಕೆಯನ್ನು ಮುಂದುವರೆಸಬಹುದು ಎನ್ನಲಾಯಿತು. ಅದನ್ನೂ ಕೂಡಾ 'ಹದಿನೈದು ವರ್ಷ ನೀವು ಇಂಗ್ಲೀಶ್ ಬಳಸಿ, ಆಮೇಲೆ ಹಿಂದೀಗೆ ಬದಲಾಗಿ' ಎನ್ನಲಾಯಿತು. ಹದಿನೈದು ವರ್ಶದ ನಂತರ ಇಂಗ್ಲೀಶನ್ನು ತೆಗೆದುಹಾಕಲು ಪ್ರಯತ್ನಪಟ್ಟಾಗ ಎದುರಾದ ಪ್ರತಿರೋಧದಿಂದ 'ನೀವು ಬೇಡ ಅನ್ನೋವರೆಗೂ ಇಂಗ್ಲೀಶ್ ಇರುತ್ತದೆ' ಎನ್ನಲಾಯಿತು. 'ನಮ್ಮ ರಾಜ್ಯಭಾಷೆಗಳು ನಶಿಸುತ್ತವೆ' ಎಂದಾಗ 'ಎಂಟನೇ ಪರಿಚ್ಛೇದ ಮಾಡಿ, ರಾಜ್ಯಗಳ ಆಡಳಿತ ಭಾಷೆಯಾಗಿ ನಿಮಗಿಷ್ಟದ ಭಾಷೆ ಬಳಸಬಹುದು ಎನ್ನಲಾಯಿತು. 'ಆದರೆ ಯಾವುದೇ ರಾಜ್ಯವಾದರೂ ಕೂಡಾ ತನ್ನ ಭಾಷೆಯ ಜೊತೆಯಲ್ಲಿ ಹಿಂದೀಯನ್ನೂ ಆ ರಾಜ್ಯದ ಆಡಳಿತ ಭಾಷೆಯನ್ನಾಗಿ ಘೋಷಣೆ ಮಾಡಬಹುದು' ಎನ್ನಲಾಯಿತು. ಮೊದಲ ಹೆಜ್ಜೆಯಾಗಿ 'ಎ' ವಲಯದ ರಾಜ್ಯಗಳಲ್ಲಿ ಇದನ್ನು ಪ್ರಯೋಗಿಸಿ, ರಾಜಾಸ್ಥಾನದಂತಹ ರಾಜ್ಯಗಳ ಆಡಳಿತ ಭಾಷೆಯಾಗಿ ಹಿಂದೀಯನ್ನು ತರಲಾಯಿತು. ಅಂದರೆ ಹಿಂದೀಯನ್ನು ಒಪ್ಪಿಸಲು ನಿರಂತರವಾಗಿ ಒತ್ತಡ, ಬಳಸಿದರೆ ಬಹುಮಾನ, ಬಳಸಲು ವಿಶ್ವಾಸದ ನಡೆಗಳ ನಿಲುವನ್ನು ತೋರುತ್ತಾ ಬರಲಾಯಿತು. ರಾಜ್ಯಭಾಷೆಗೂ ಮನ್ನಣೆ ಕೊಡುತ್ತೇವೆ ಎಂದು ತ್ರಿಭಾಷಾಸೂತ್ರವನ್ನು ಜಾರಿ ಮಾಡಿದರೂ ಕೂಡಾ ವಾಸ್ತವವಾಗಿ ಹಿಂದೀಯೇತರ ನಾಡಿನಲ್ಲಿ ಹಿಂದೀಯನ್ನು ಕಲಿಕೆಯಲ್ಲೇ ಸೇರಿಸಲು ಒತ್ತಡ ಹೇರಲಾಯಿತು. ಇದುವರೆಗೂ ರಾಜ್ಯಪಟ್ಟಿಯಲ್ಲಿದ್ದ ಕಲಿಕೆ ಇದೀಗ ಜಂಟಿಪಟ್ಟಿಗೆ ಹೋಗಿರುವುದು ಈ ಕಾರಣಕ್ಕೇ ಆತಂಕಕಾರಿ. ಜಂಟಿಪಟ್ಟಿಯ ವಿಷಯಗಳ ಬಗ್ಗೆ ಭಾರತದ ವ್ಯವಸ್ಥೆಯು 'ರಾಜ್ಯಗಳು

ಏನೇ ಕಾನೂನು ಮಾಡಿದರೂ ಕೇಂದ್ರಸರ್ಕಾರ ಮಾಡುವ ಕಾಯಿದೆಯೇ ಅಂತಿಮವಾಗಿ ನಿಲ್ಲುವುದು' ಎನ್ನುತ್ತದೆ. ಹಾಗಾಗಿ ಕಲಿಕೆಯನ್ನೇ ಹಿಡಿತಕ್ಕೆ ತೆಗೆದುಕೊಳ್ಳುವುದೆಂದರೆ ಮಕ್ಕಳನ್ನೇ ಹಿಂದೀಯನ್ನು ಒಪ್ಪಲು ಸಿದ್ಧಮಾಡುವುದು ಎಂದಾಗಿದೆ.

ಇಷ್ಟಕ್ಕೂ ಹಿಂದೀಯನ್ನು ಒಪ್ಪಿಸಲು ಬಳಸುವ ವಾದಗಳಾವುವು ಮತ್ತು ಅವೆಷ್ಟು ಸರಿ ಎಂದು ನೋಡೋಣ. ಬನ್ನಿ.

**ದೇಶಕ್ಕೊಂದು ಭಾಷೆ ಇರಬೇಕು, ಹಾಗೇ ಭಾರತಕ್ಕೊಂದು ಭಾಷೆ.**

ಮೂಲತಃ ದೇಶಗಳು ಹೇಗೆ ರೂಪುಗೊಂಡಿವೆ ಎನ್ನುವುದನ್ನು ನೋಡಿದರೆ, ಹೆಚ್ಚಿನೆಡೆಗಳಲ್ಲಿ ಅದು ಒಂದು ಭಾಷಿಕ ಜನಾಂಗ ವಾಸಿಸುವ ಪ್ರದೇಶವಾಗಿ ರೂಪುಗೊಂಡಿದೆ. ಅಂದರೆ ಇಂಗ್ಲೀಶ್ ಮಾತಾನ್ನಾಡುವವರ ದೇಶ ಇಂಗ್ಲೇಂಡ್, ಐರೀಶ್ ಮಾತಾಡುವವರ ದೇಶ ಐರ್ಲ್ಯಾಂಡ್, ಫಿನ್ನಿಶ್ ಭಾಷೆಯ ನಾಡು ಫಿನ್ಲ್ಯಾಂಡ್, ಜಪಾನೀ ಭಾಷಿಕರ ನಾಡು ಜಪಾನ್, ಜರ್ಮನ್ ನುಡಿಯುವರ ನಾಡು ಜರ್ಮನಿ... ಹೀಗೆ. ಆದರೆ ಭಾರತ ಅಂತಹ ಒಂದು ಭಾಷೆಯ ನಾಡಲ್ಲ. ಹಾಗೆಂದು ಇದನ್ನು ಶಾಪವೆಂದೇನಾದರೂ ಭಾವಿಸಿದರೆ... ಅದು ಪಾಪ! ವೈವಿಧ್ಯತೆ ಎನ್ನುವುದರ ನಿಜ ಅರ್ಥ ಭಾರತದಲ್ಲಿದೆ. ಇಲ್ಲಿ ಭಾಷೆಗಳು ಮಾತ್ರಾ ಬೇರೆ ಬೇರೆಯಲ್ಲ. ಮತಗಳು, ಆಚರಣೆಗಳು, ನಂಬಿಕೆಗಳು, ದೇಹ ಲಕ್ಷಣಗಳಲ್ಲೂ ಕೂಡಾ ಭಿನ್ನತೆಯನ್ನು ಕಾಣಬಹುದು. ಈ ಸತ್ಯವನ್ನು ಒಪ್ಪಿಕೊಳ್ಳುವುದು ಮೊದಲ ಹಂತ. ಇಂತಹ ಒಂದು ನಾಡಿನಲ್ಲಿ ಎಲ್ಲಾ ಭಿನ್ನತೆಗೂ ಸಮಾನ ಗೌರವ ಇರಬೇಕು, ಸಮಾನ ಗೌರವದ ಜೊತೆ ಸಮಾನ ಸ್ಥಾನಮಾನ ಇರಬೇಕು. ನನ್ನ ನುಡಿ ನಿನ್ನದಕ್ಕಿಂತ ಹೆಚ್ಚಿನದು ಎನ್ನುವ ಮಾತೇ ಬರಬಾರದು. ಹಾಗಿದ್ದರೆ ಮಾತ್ರಾ ಏಕತೆ ಹುಟ್ಟುತ್ತದೆ. ಇದು ನಂತರದ ಹಂತ. ಇದನ್ನು ಬಿಟ್ಟು ಬಾಯಲ್ಲಿ ನಾವೆಲ್ಲಾ ಸಮಾನರು ಎನ್ನುತ್ತಾ, ವಾಸ್ತವದಲ್ಲಿ ನನ್ನ ಭಾಷೆ ನೀನು ಕಲಿಯದಿದ್ದರೆ ನಿನಗೆ ಕೆಲಸವಿಲ್ಲ, ಓದಿಲ್ಲ, ಬಡ್ತಿ ಇಲ್ಲಾ, ನಿನ್ನ ನಾಡಲ್ಲೂ ನನ್ನ ಭಾಷೆ ಬಳಸಬೇಕು ಎನ್ನುವ ಕಟ್ಟಳೆ ಮಾಡುವುದು ಅಸಮಾನತೆ ಅಷ್ಟೇ ಅಲ್ಲ, ದಬ್ಬಾಳಿಕೆ. ಅಮಾನವೀಯ ಕೂಡಾ. ಹಾಗಾದರೆ ಪ್ರಪಂಚಕ್ಕೆ ಭಾರತದ ಭಾಷೆಯೆಂದು ಏನನ್ನು ಹೇಳುವುದೆಂದರೆ, 'ನಮ್ಮ ವೈವಿಧ್ಯತೆಯನ್ನು ಹೇಳುವುದು' ಎನ್ನುವುದು ಉತ್ತರ. 'ಭಾರತವು ನಾನಾ ಭಾಷೆ, ನಾನಾ ಜನಾಂಗಗಳ ತವರು ಎನ್ನುವುದೇ ನಮ್ಮ ಅನನ್ಯತೆ. ಅನೇಕತೆಯಲ್ಲಿ ಏಕತೆಯೇ ನಮ್ಮ ಹಿರಿಮೆ' ಅನ್ನಬಹುದಲ್ಲ? ಹಾಗಾಗಿ

ಭಾರತದ ರಾಷ್ಟ್ರಭಾಷೆ ಯಾವುದೆಂದರೆ ಇಂದು ಯಾವುದೂ ಇಲ್ಲ ಎನ್ನುವ ಬದಲು ಎಂಟನೇ ಶೆಡ್ಯೂಲಿನ ೨೨ ಭಾಷೆಗಳೆಲ್ಲಾ ಅನ್ನಬಹುದಲ್ಲ? ಒಂದು ರಾಷ್ಟ್ರಕ್ಕೆ ಒಂದೇ ಭಾಷೆಯಿರಬೇಕೆನ್ನುವ ಕಟ್ಟಳೆಯಾದರೂ ಎಲ್ಲಿದೆ? ಹಾಗಿರುವುದಾದರೆ ಭಾರತದಲ್ಲಿ ಭಾಷಾವಾರು ರಾಜ್ಯಗಳಿರದೆ ಬಹುಶಃ ಭಾಷಾವಾರು ದೇಶಗಳಿರುತ್ತಿದ್ದವು, ಅಷ್ಟೇ.

## ಹಿಂದೀ ಭಾರತದಲ್ಲಿ ಹೆಚ್ಚು ಜನರು ಮಾತಾಡುವ ಭಾಷೆ

ಹಿಂದೀ ಭಾಷಿಕರ ಜನಸಂಖ್ಯೆ ೨೦೦೧ರ ಜನಗಣತಿಯಂತೆ ೪೨.೨ ಕೋಟಿಯಷ್ಟು ಎನ್ನುತ್ತದೆ ಸರ್ಕಾರಿ ಅಂಕಿಅಂಶ. ಭಾರತದಲ್ಲಿ ಹಿಂದೀ ಭಾಷಿಕರ ಸಂಖ್ಯೆ ನೂರಕ್ಕೆ ೪೧ರ ಆಸುಪಾಸಿನಲ್ಲಿದೆ ಎಂದು ಇದನ್ನು ನೋಡಿದವರಿಗೆ ಅನ್ನಿಸುವುದು ಸಹಜ. ಆದರೆ ವಾಸ್ತವ ಬೇರೆಯೇ ಇದೆ. ಹಿಂದೀಪರರು "ಹೆಚ್ಚು ಜನರು ಮಾತನ್ನಾಡುವ ಭಾಷೆಗೆ ರಾಷ್ಟ್ರಭಾಷೆಯ ಸ್ಥಾನವಿರಬೇಕು. ಅದನ್ನೇ ಎಲ್ಲಾ ಜನರು ಕಲಿಯಬೇಕು, ಬಳಸಬೇಕು" ಎನ್ನುವುದು ವಾಡಿಕೆ. ಮೊದಲಿಗೆ ಇಗೋ, ಭಾರತದ ಭಾಷಾ ಜನಸಂಖ್ಯೆಯ ಮಾಹಿತಿ ಪಟ್ಟಿಯನ್ನು ನೋಡಿ. ನಂತರ ಹಿಂದೀ ಎನ್ನುವ ಭಾಷೆಯಲ್ಲಿ ಕೇಂದ್ರಸರ್ಕಾರ ಸೇರಿಸಿಕೊಂಡಿರುವ, ಅಂದರೆ ಹಿಂದೀ ನುಂಗಿ ನೀರು ಕುಡಿದಿರುವ ಭಾಷಾ ಜನಾಂಗಗಳ ಪಟ್ಟಿಯನ್ನೂ ನೋಡೋಣ. ಆಗ ಭಾರತದಲ್ಲಿ ಹಿಂದೀ ಭಾಷಿಕರ ಪ್ರಮಾಣ ೪೨%ರಷ್ಟೋ, ೨೫%ರಷ್ಟೋ ಎಂಬ ದಿಟದ ಅರಿವಾಗುತ್ತದೆ. ಎರಡೂ ಅಂಕಿಅಂಶಗಳ ಪಟ್ಟಿಗಳ ಮಾಹಿತಿ ಮೂಲ ವಿಕೀಪೀಡಿಯಾದ ಈ ಕೊಂಡಿ:

http://en.wikipedia.org/wiki/Demographics_of_India#Linguistic_demographics

| | | |
|---|---|---|
| ಹಿಂದಿ ಒಳನುಡಿಗಳು | ೪೨೨೦೪೮೬೪೨ | ೪೧.೦೩ |
| ಬೆಂಗಾಲಿ | ೮೩೩೬೯೭೬೯ | ೮.೧೦ |
| ತೆಲುಗು | ೭೪೦೦೨೮೫೬ | ೭.೧೯ |
| ಮರಾಠಿ | ೭೧೯೩೬೮೯೪ | ೬.೯೯ |
| ತಮಿಳು | ೬೦೭೯೩೮೧೪ | ೫.೯೧ |
| ಉರ್ದು | ೫೧೫೩೬೧೧೧ | ೫.೦೧ |
| ಗುಜರಾತಿ | ೪೬೦೯೧೬೧೭ | ೪.೪೮ |

| | | |
|---|---|---|
| ಕನ್ನಡ | ೩೭೯೨೪೦೧೧ | ೩.೬೯ |
| ಮಲಯಾಳಂ | ೩೩೦೬೬೩೯೨ | ೩.೨೧ |
| ಒರಿಯಾ | ೩೩೦೧೭೪೪೬ | ೩.೨೧ |
| ಪಂಜಾಬಿ | ೨೯೧೦೨೪೭೭ | ೨.೮೩ |
| ಅಸ್ಸಾಮಿ | ೧೩೧೬೮೪೮೪ | ೧.೨೮ |
| ಮೈಥಿಲಿ | ೧೨೧೭೯೧೨೨ | ೧.೧೮ |
| ಭಿಲೋಡಿ | ೯೫೮೨೯೫೭ | ೦.೯೩ |
| ಸಂತಾಲಿ | ೬೪೬೯೬೦೦ | ೦.೬೩ |
| ಕಾಶ್ಮೀರಿ | ೫೫೨೭೬೯೮ | ೦.೫೪ |
| ನೇಪಾಲಿ | ೨೮೭೧೭೪೯ | ೦.೨೮ |
| ಗೊಂಡಿ | ೨೭೧೩೭೯೦ | ೦.೨೬ |
| ಸಿಂಧಿ | ೨೫೩೫೪೮೫ | ೦.೨೫ |
| ಕೊಂಕಣಿ | ೨೪೮೯೦೧೫ | ೦.೨೪ |
| ದೋಗ್ರಿ | ೨೨೮೨೫೮೯ | ೦.೨೨ |
| ಖಂಡೇಶಿ | ೨೦೭೫೨೫೮ | ೦.೨೦ |
| ಕುರುಕ್ | ೧೭೫೧೪೮೯ | ೦.೧೭ |
| ತುಳು | ೧೭೨೨೭೬೮ | ೦.೧೭ |
| ಮಣಿಪುರಿ | ೧೪೬೬೭೦೫ | ೦.೧೪ |
| ಬೋಡೋ | ೧೩೫೦೪೭೮ | ೦.೧೩ |
| ಖಾಸಿ | ೧೧೨೮೫೭೫ | ೦.೧೧ |
| ಮುಂಡಾರಿ | ೧೦೬೧೩೫೨ | ೦.೧೦ |
| ಹೋ | ೧೦೪೨೭೨೪ | ೦.೧೦ |
| ಇತರೆ | ೧೪೩೨೯೪೦೫ | ೧.೩೯ |

**ಹಿಂದೀ ಎಂದರೆ ಬರೀ ಹಿಂದೀ ಅಲ್ಲಾ!**

ಈ ಮಾಹಿತಿಯನ್ನು ನೋಡುವಾಗ ಮೊದಲಲ್ಲಿರುವ ಹಿಂದೀ ಒಳನುಡಿಗಳು ಎನ್ನುವುದು ಗಮನ ಸೆಳೆಯುತ್ತದೆ. ಹಾಗೆಂದರೇನು ನೋಡಿ. ಹಿಂದೀ ಮತ್ತದರ

ಸೋದರ ಸಂಬಂಧಿ ಭಾಷೆಗಳನ್ನೆಲ್ಲಾ ಸೇರಿಸಿಕೊಂಡು ಹಿಂದೀ ಎನ್ನುತ್ತಿದೆಯಂತೆ ಭಾರತಸರ್ಕಾರ. ಆದರೆ ಹಿಂದೀ ಭಾಷಿಕರ ಜನಸಂಖ್ಯೆಯನ್ನು ಹೇಗಾದರೂ ಮಾಡಿ ಹೆಚ್ಚಿಸಿಕೊಳ್ಳುವ ಪ್ರಯತ್ನವೆನ್ನುವಂತೆ ತನ್ನ ಅಕ್ಕಪಕ್ಕದ, ಹತ್ತಿರದ, ದೂರದ ಎಲ್ಲಾ ನುಡಿಗಳನ್ನು ಸೇರಿಸಿಕೊಂಡು ಹಿಂದೀ ಅನ್ನುವ ಒಂದು ಭಾಷೆಯೆನ್ನುತ್ತಿದೆ ಭಾರತ ಸರ್ಕಾರ ಎನ್ನುವುದು ವಾಸ್ತವ. ಅಚ್ಚರಿಯೇನು? ಇಗೋ ನೋಡಿ... ಹಿಂದೀ ಎಂದರೆ ಏನು ಎಂಬುದನ್ನು! ಹಿಂದೀ ಎಂದರೆ ಬರೀ ಹಿಂದೀಯಲ್ಲ. ಅದು ನಲವತ್ತೊಂಬತ್ತು ಭಾಷೆಗಳ ಒಕ್ಕೂಟ! ಹಾಗೆಂದು ಈ ನಲವತ್ತೊಂಬತ್ತಕ್ಕೆ ತಮ್ಮ ಸ್ವಂತ ಅಸ್ತಿತ್ವವೇ ಇಲ್ಲ ಎಂದುಕೊಳ್ಳಬೇಡಿ. ಅಥವಾ ಇವೆಲ್ಲಾ ತಾವಾಗೇ ಸೇರಿಕೊಂಡು ಬಿಟ್ಟಿವೆ ಎಂದುಕೊಳ್ಳುವಂತೆಯೂ ಇಲ್ಲ. ಈ ನಲವತ್ತೊಂಬತ್ತರ ಪಟ್ಟಿಗೆ ಅಂದು ಪಂಜಾಬಿಗಳು ವಿರೋಧ ತೋರಿಸದೇ ಇದ್ದಿದ್ದರೆ ಅದನ್ನೂ ಸೇರಿಸಿಕೊಂಡು ಬಿಡುತ್ತಿದ್ದರು!

| | | |
|---|---|---|
| ೧ | ಅವಧಿ | ೨೫೨೯೩೦೮ |
| ೨ | ಬಘೇಲಿ | ೨೮೬೫೦೧೧ |
| ೩ | ಬಗ್ರೀ ರಾಜಾಸ್ಥಾನಿ | ೧೪೩೪೧೨೩ |
| ೪ | ಬಂಜರಿ | ೧೨೫೯೮೨೧ |
| ೫ | ಭದ್ರವಾಹಿ | ೬೬೯೧೮ |
| ೬ | ಗದ್ದಿ | ೬೬೨೪೬ |
| ೭ | ಭೋಜ್ ಪುರಿ | ೩೩೦೯೯೪೯೭ |
| ೮ | ಬೃಜ್ ಭಾಷಾ | ೫೭೪೨೪೫ |
| ೯ | ಬುಂದೇಲಿ | ೩೦೭೨೧೪೭ |
| ೧೦ | ಚಂಬೇಲಿ | ೧೨೬೫೮೯ |
| ೧೧ | ಛತ್ತಿಸ್ ಘರೀ | ೧೩೨೬೦೧೮೬ |
| ೧೨ | ಚುರಾಹಿ | ೬೧೧೯೯ |
| ೧೩ | ಧುಂಡರಿ | ೧೮೭೧೧೩೦ |
| ೧೪ | ಘರ್ವಾಲಿ | ೨೨೬೭೩೧೪ |
| ೧೫ | ಗೋಜ್ರಿ | ೭೬೨೩೩೨ |
| ೧೬ | ಹರೌತಿ | ೨೪೬೨೮೬೭ |

| | | |
|---|---|---|
| ೧೭ | ಹರ್ಯಾನ್ವಿ | ೭೯೯೭೧೯೨ |
| ೧೮ | ಹಿಂದಿ | ೨೫೭೯೧೯೬೩೫ |
| ೧೯ | ಜೌನ್ಸರಿ | ೧೧೪೭೩೩ |
| ೨೦ | ಕಂಗ್ರಿ | ೧೧೨೨೮೪೩ |
| ೨೧ | ಖೈರಾರಿ | ೧೧೯೩೭ |
| ೨೨ | ಖರೀ ಬೋಲಿ | ೪೭೭೩೦ |
| ೨೩ | ಖೊರ್ಥಾ | ೪೭೨೫೯೨೭ |
| ೨೪ | ಕುಲ್ವಿ | ೧೭೦೭೭೦ |
| ೨೫ | ಕುರ್ಮೌನಿ | ೨೦೦೩೭೮೩ |
| ೨೬ | ಕುರ್ಮಲಿ ಥಾರ್ | ೪೨೫೯೨೦ |
| ೨೭ | ಲಬನಿ | ೨೨೧೬೨ |
| ೨೮ | ಲಮಾಣಿ | ೨೭೦೭೫೬೨ |
| ೨೯ | ಲಾರಿಯಾ | ೬೭೬೯೭ |
| ೩೦ | ಲೋಧಿ | ೧೩೯೩೨೧ |
| ೩೧ | ಮಗಧಿ | ೧೩೯೭೮೫೬೫ |
| ೩೨ | ಮಾಲ್ವಿ | ೫೫೬೫೧೬೭ |
| ೩೩ | ಮಂಡೇಲಿ | ೬೧೧೯೩೦ |
| ೩೪ | ಮಾರವಾಡಿ | ೭೯೩೬೧೮೩ |
| ೩೫ | ಮೇವಾರಿ | ೫೦೯೧೬೯೭ |
| ೩೬ | ಮೇವಾತಿ | ೬೪೫೨೯೧ |
| ೩೭ | ನಾಗ್ ಪುರಿಯಾ | ೧೨೪೨೫೮೬ |
| ೩೮ | ನಿಮಾಡಿ | ೨೧೪೮೧೪೬ |
| ೩೯ | ಪಹಾಡಿ | ೨೮೩೨೮೨೫ |
| ೪೦ | ಪಂಚ್ ಪರ್ಗನಿಯಾ | ೧೯೩೭೬೯ |
| ೪೧ | ಪಂಗವಾಲಿ | ೧೬೨೮೫ |
| ೪೨ | ಪೋವಾರಿ | ೪೨೫೭೪೫ |
| ೪೩ | ರಾಜಾಸ್ಥಾನಿ | ೧೮೩೫೫೬೧೩ |

| | | |
|---|---|---|
| ೪೪ | ಸದ್ರಿ | ೨೦೪೪೭೭೬ |
| ೪೫ | ಸಿರ್ಮೌರಿ | ೩೧೧೪೪ |
| ೪೬ | ಸೊಂಡ್ವಾರಿ | ೫೯೨೨೧ |
| ೪೭ | ಸುಗಲಿ | ೧೬೦೭೩೬ |
| ೪೮ | ಸುರ್ಗುಜಿಯಾ | ೧೪೫೮೫೩೩ |
| ೪೯ | ಸುರ್ಜಾಪುರಿ | ೧೨೧೭೦೧೯ |
| ೫೦ | ಇತರೆ | ೧೪೭೭೭೨೬೬ |
| | | ೪೨೨೦೪೮೬೪೨ |

**ಹಿಂದೀ ಅಂದರೆ ಹಿಂದೀನೂ ಅಲ್ಲಾ!!**

ಆದರೆ ಕೇಂದ್ರಸರ್ಕಾರ ಪ್ರಸಾರ ಮಾಡಲು ಮುಂದಾಗಿರುವುದು ಇವುಗಳಲ್ಲಿ ಯಾವೊಂದು ಹಿಂದಿಯನ್ನೂ ಅಲ್ಲ. ಯಾಕೆಂದರೆ ಭಾರತದ ಸಂಸ್ಕೃತಿಯನ್ನೆಲ್ಲಾ ತನ್ನಲ್ಲಿ ಅಡಗಿಸಿಕೊಂಡಿರುವ ಭಾಷೆ ಸಂಸ್ಕೃತ ಎಂದೂ, ಹಾಗಾಗಿ ಸಂಸ್ಕೃತ ಭಾರತದ ರಾಷ್ಟ್ರಭಾಷೆಯಾಗಬೇಕೆಂದೂ, ಆದರೆ ಅದೀಗ ಜನ ಬಳಸದ ಭಾಷೆಯಾಗಿರುವುದರಿಂದ ಅದಕ್ಕೆ ಅತಿ ಸಮೀಪದ ಹಿಂದೀಯನ್ನು ಭಾರತದ ಆಡಳಿತ ಭಾಷೆಯಾಗಿಸಿರುವುದಾಗಿ ತಾನೇ ಹೇಳುತ್ತಿರುವ ಭಾರತ ಸರ್ಕಾರ ಭಾರತದ ತುಂಬೆಲ್ಲಾ ಹರಡಲು ಯತ್ನಿಸುತ್ತಿರುವುದು ಇದೇ ಸಂಸ್ಕೃತಭರಿತ ಹಿಂದೀಯನ್ನು. ಹಾಗಾಗಿ ಅದು ಹಿಂದೀಯವರಿಂದಲೂ ಒಂದು ಲೆಕ್ಕದಲ್ಲಿ ದೂರವೇ! ಇಗೋ ಇಲ್ಲಿದೆ ನೋಡಿ.. ಅಂತಹ ಸ್ಟಾಂಡರ್ಡ್ ಹಿಂದೀಯ ಒಂದು ಉದಾಹರಣೆ.

FORM - 12

MARKING OF HAZARDOUS WASTE CONTAINER

ಅಪಾಯಕಾರಿ ತ್ಯಾಜ್ಯ HAZARDOUS WASTE परिसंकटमय अपशिष्ट

ಎಚ್ಚರಿಕೆಯಿಂದ ಬಳಸಿ HANDLE WITH CARE सावधानि बरतिये

ಇದು ಕರ್ನಾಟಕದ ಪರಿಸರ ಮಾಲಿನ್ಯ ನಿಯಂತ್ರಣ ಮಂಡಲಿಯೋರು ಅಪಾಯಕಾರಿಯಾದ ಕಸವನ್ನು ಸರಿಯಾದ ರೀತೀಲಿ ನಿರ್ವಹಿಸಲೆಂದು ರೂಪಿಸಿರುವ ಒಂದು ನಿಯಮದ ಅಂಗವಾಗಿರೋ ಸಣ್ಣ ಅಂಟುಚೀಟಿ.

ಈ ಅಂಟುಚೀಟಿಯನ್ನು ಸಂಬಂಧಪಟ್ಟ ಉತ್ಪಾದಕರು/ ಬಳಕೆದಾರರು (ಕಾರ್ಖಾನೆಯವರು) ಬಹಳ ಮುತುವರ್ಜಿಯಿಂದ, ಬಿಸಾಡಲೆಂದು ಕೂಡಿಟ್ಟ ಅಪಾಯಕಾರಿ ಕಸದ ಡಬ್ಬಿಯ ಮೇಲೆ ಅಂಟಿಸಬೇಕು. ಇದರ ಮೇಲೆ ತ್ರಿಭಾಷಾಸೂತ್ರದ ಅನ್ವಯ ಮೂರು ಭಾಷೆಯಲ್ಲಿ ಮುದ್ರಿಸಿದ್ದಾರೆ. ಕನ್ನಡದಲ್ಲಿ ಅಪಾಯಕಾರಿ ತ್ಯಾಜ್ಯವೆಂದೂ, ಇಂಗ್ಲೀಷಿನಲ್ಲಿ “hazardous waste” ಎಂದೂ ಬರೆದಿದ್ದಾರೆ. ಆದರೆ ದೇವನಾಗರೀ ಲಿಪಿಯಲ್ಲಿ ಬರೆದಿರೋ ಸಾಲುಗಳೇನು? ಅದು ಯಾವ ಭಾಷೆಯದ್ದು?

ಪರಿಸಂಕಟಮಯ ಅಪಶಿಷ್ಟ ಅನ್ನುವುದು ಯಾವ ಭಾಷೆ? ಇದನ್ನು ವಿನ್ಯಾಸ ಮಾಡಿದವರು ಹಿಂದೀ ಎಂದುಕೊಂಡೇ ಈ ಪದವನ್ನು ಬಳಸಿರುವುದು. ಯಾಕೆಂದರೆ ಈ ಹೆಸರನ್ನು ಬಳಸಿಕೊಂಡಿರುವುದೇ ಕೇಂದ್ರಸರ್ಕಾರಿ ಇಲಾಖೆಯ ಅಂತರ್ಜಾಲ ತಾಣದಿಂದ. ಯಾವ ಹಿಂದೀ ಭಾಷಿಕರು ಇದನ್ನು ಬಳುಸುತ್ತಾರೆ? ಬಳಸುವುದಿರಲಿ, ಯಾವ ಹಿಂದೀಯವರಿಗೆ ಇದು ಅರ್ಥವಾಗುತ್ತದೆ? ಹಿಂದೀನೂ ಬಿಡಿ, ಹಿಂದೀ ಭಾಷೆ ಎಂದು ಕರೆಸಿಕೊಳ್ಳುತ್ತಿರುವ ಭೋಜ್ಪುರಿ, ರಾಜಸ್ಥಾನಿ, ಪಹಾಡಿ, ಬ್ರಿಜ್ ಭಾಷಾ, ಅವಧಿ... ಮುಂತಾದ ೪೯ ಭಾಷೆಗಳಲ್ಲಿ ಯಾವ ಭಾಷೆಯಲ್ಲಿ ಈ ಪದವನ್ನು ಬಳುಸುತ್ತಾರೆ ಎಂದು ಹುಡುಕಿದರೆ ಯಾವ ಭಾರತೀಯ ಭಾಷೆಯ ಜನರೂ ಈ ಪದಗಳನ್ನು ತಮ್ಮ ನಿತ್ಯ ಜೀವನದಲ್ಲಿ ಬಳಸುವುದಿಲ್ಲ ಎನ್ನುವುದು ಕಾಣುತ್ತದೆ. ಮತ್ತೇಕೆ ಇವರು ಹೀಗೆ ಈ ಪದಗಳನ್ನು ಬಳಸಿದ್ದಾರೆ? ಇದ್ಯಾವ ಭಾಷೆಯದು?

೪೯ ಬೇರೆ ಬೇರೆ ನುಡಿಗಳನ್ನು ನುಂಗಿ ಆ ನುಡಿಗಳೆಲ್ಲವೂ ಹಿಂದೀನೇ ಅನ್ನುವಾಗ ಜನರು ಯಾವ ಪದವನ್ನು ಬಳಸಬೇಕು ಅನ್ನುವ ಗೊಂದಲ ಹುಟ್ಟಿಕೊಳ್ಳುವುದು ಸಹಜ. ಕೆಲವರು ‘ಅಪಾಯ’ ಅಂದರೆ, ಇನ್ನು ಕೆಲವರು ‘ಖತ್ರಾ’ ಅಂದರು. ಅದಕ್ಕೆಂದೇ ಹಿಂದೀಯವರೆಲ್ಲಾ ಬೇರೆ ಬೇರೆ ರೀತಿಯಲ್ಲಿ ಒಂದೇ ಪದವನ್ನು ಬಳಸುವುದು ಸರಿಯಲ್ಲವೆಂದು ಕೇಂದ್ರಸರ್ಕಾರದವರು ಹಿಂದೀ ಎಂದರೆ

ಇಂಥದ್ದು, ಇದು ಸ್ಟಾಂಡರ್ಡ್ ಹಿಂದೀ, ಇದನ್ನೇ ಇನ್ನು ಮೇಲೆ ಎಲ್ಲಾರೂ ಬಳಸಬೇಕು ಎಂದು ಹೇಳಲಿಕ್ಕಾಗೇ "Centre for Hindi Directorate" ಎಂಬ ಒಂದು ಇಲಾಖೆಯನ್ನು ತೆರೆದರು. ಈ ಸಂಸ್ಥೆಯವರೇ ಆಡಳಿತದ ಹಿಂದೀ ಭಾಷೆಯಲ್ಲಿ ಯಾವ ಪದ ಬಳಸಬೇಕು ಎಂದು ತೀರ್ಮಾನ ಮಾಡುತ್ತಾರೆ. ಹೊಸಪದಗಳನ್ನು ಹುಟ್ಟು ಹಾಕುತ್ತಾರೆ. ಒಟ್ಟಾರೆ ಜನರು ಬಳಸುವ ಔರ್, ಮಗರ್, ಸಿರ್ಫ್, ಮುತಾಬಿಕ್, ಜೈಸೇ ಮುಂತಾದ ಪದಗಳನ್ನು ಕೈಬಿಟ್ಟು ತಥಾ, ಪರಂತು, ಕೇವಲ್, ಅನುಸಾರ್ ಮುಂತಾದ ಪದಗಳನ್ನು ಬಳಸಬೇಕೆನ್ನುತ್ತಾರೆ. ಹೀಗಾಗಿ ಕೇಂದ್ರಸರ್ಕಾರದ ಹಿಂದೀ ಭಾಷೆಯೆನ್ನುವುದು ಹಿಂದೀಯವರಿಂದಲೂ ದೂರವೇ!

ದೇಶಕ್ಕೊಂದು ಭಾಷೆ, ಭಾಷೆ ಎಂದರೆ ಎಲ್ಲಾರೂ ಒಂದೇ ತೆರನಾಗಿ ಬಳಸಬೇಕು ಎನ್ನುವುದೆಲ್ಲಾ ಒಗ್ಗಟ್ಟಿಗೆ ಸಾಧನವೆಂದು ಭಾರತ ಸರ್ಕಾರ ಭಾವಿಸಿರುವಂತಿದೆ. ಅದಕ್ಕೆ ಈ ರೀತಿ ಸರ್ಕಸ್. ಇನ್ನಷ್ಟು ಸರಳವಾಗಿ ಇದನ್ನು ಅರ್ಥ ಮಾಡಿಕೊಳ್ಳೋಕೆ ಇಗೋ ಈ ಒಂದು ಸಣ್ಣ ಉದಾಹರಣೆ : ಇಡೀ ಕರ್ನಾಟಕ 'ಇದೆ' ಅನ್ನುವ ಪದವನ್ನು ಇನ್ಮುಂದೆ 'ಇದೆ' ಎಂದೇ ಉಚ್ಚರಿಸಬೇಕು. 'ಅದಾವ, ಐತಿ, ಐತೆ, ಉಂಟು' ಅನ್ನುವುದನ್ನೆಲ್ಲಾ ಬಳಸಬಾರದು ಎಂದರೆ ಹೇಗೋ ಹಾಗೆಯೇ ಇದೆ ಕೇಂದ್ರದ ಈ ಪ್ರಯತ್ನ. ದೇಶದಲ್ಲಿ ಒಗ್ಗಟ್ಟು ಮೂಡಿಸಲು ಆಗುವುದು ನಮ್ಮ ನಡುವೆ ಈಗಾಗಲೇ ಇರೋ ಸಮಾನವಾದದ್ದನ್ನು ಎತ್ತಿ ಹಿಡಿಯುವ ಮೂಲಕವೇ ಹೊರತು ಇಲ್ಲದ ಸಮಾನತೇನಾ ಹೇರುವುದರ ಮೂಲಕ ಅಲ್ಲಾ! ವೈವಿಧ್ಯತೆಯನ್ನು ಶಾಪವೆಂದು ಬಗೆದು, ಅಳಿಸುವುದರ ಮೂಲಕವಲ್ಲ.

## ಲಿಪಿಯೆನ್ನುವ ಸರಳಾಸ್ತ್ರ!

ಭಾರತದಲ್ಲಿ ಅನೇಕ ನುಡಿಗಳಿಗೆ ಲಿಪಿ ಇಲ್ಲ. ಅವುಗಳಿಗೆ ಹಿಂದೀ ಲಿಪಿಯನ್ನು ಕಟ್ಟುವ ಹೊಸತರದ ಕೆಲಸ ಕಳೆದ ಶತಮಾನದಲ್ಲಿ ನಡೆಯಿತು. ಅದೆಂದರೆ ಎಲ್ಲವಕ್ಕೂ ದೇವನಾಗರಿ ಲಿಪಿಯನ್ನು ಅಳವಡಿಸಿಕೊಳ್ಳುವಂತೆ ಮಾಡುವುದು. ಹಿಂದೆ ಗೋವೆಯಲ್ಲಿ ಲೆಕ್ಕಪತ್ರಗಳ ಸಹಿತ ಎಲ್ಲಾ ದಾಖಲೆಗಳು ಕೊಂಕಣಿ ನುಡಿಯಲ್ಲಿದ್ದರೂ ಕನ್ನಡ ಲಿಪಿಯಲ್ಲಿರುತ್ತಿದ್ದವಂತೆ. ನಂತರ ರೋಮನ್ ಲಿಪಿಯೂ ನಂತರ ದೇವನಾಗರಿಯೂ ಪ್ರವೇಶ ಪಡೆದವಂತೆ. ಇದು ನಿಧಾನವಾಗಿ ಹಿಂದೀಯನ್ನು ಒಪ್ಪಿಸುವ ಪ್ರಯತ್ನದ ಒಂದು ಭಾಗವೇ ಆಗಿದೆ. ಯಾವುದೇ

ಒಂದು ಲಿಪಿಯಿಲ್ಲದ ನುಡಿಗೆ ದೇವನಾಗರಿಯ ಲಿಪಿ ಬಳಸುವಂತೆ ಮಾಡುವುದು ಈ ದಿಕ್ಕಲ್ಲಿ ಮೊದಲ ಹೆಜ್ಜೆ. ಇಷ್ಟಾದರೆ ಮುಂದಿನ ದಾರಿ ಸುಲಭ!

೦೫.೦೮.೨೦೧೧ರಂದು ಕರ್ನಾಟಕದ ರಾಜ್ಯಸಭಾ ಸದಸ್ಯರಾದ ಶ್ರೀ ರಾಮಾಜೋಯಿಸ್ ಅವರು ಸಂಸತ್ತಿನಲ್ಲಿ ಒಂದು ಖಾಸಗಿ ವಿಧೇಯಕವನ್ನು ಮಂಡಿಸಿದ್ದಾರೆ. ಇದರಲ್ಲಿ ಇಡೀ ದೇಶವೆಲ್ಲ ಒಂದನೇ ತರಗತಿಯಿಂದಲೇ ಮಕ್ಕಳಿಗೆ ಹಿಂದೀ ಲಿಪಿಯನ್ನು ಕಲಿಸಬೇಕೆನ್ನುತ್ತಾರೆ. ಹೀಗೆ ಮಾಡಿದರೆ ಎಲ್ಲೇ ಹೋದರೂ ಬೋರ್ಡುಗಳು, ಮೈಲಿಗಲ್ಲುಗಳು ಒಂದೇ ಭಾಷೆಯಲ್ಲಿದ್ದು ಯಾರಿಗೂ ತೊಂದರೆಯಾಗುವುದಿಲ್ಲವಂತೆ. ದೇಶದ ಒಗ್ಗಟ್ಟು ಹೆಚ್ಚುತ್ತದೆಯಂತೆ. ಇದಕ್ಕಿಂತಲೂ ವೈವಿಧ್ಯತೆಯ ನಾಶಕ್ಕೆ, ಹಿಂದೀ ಹೇರಿಕೆಗೆ ಬೇರೊಂದು ಅಸ್ತ್ರವುಂಟೇ?

ಇರಲಿ, ಇಷ್ಟಕ್ಕೂ ಹಿಂದೀ ಭಾಷಿಕ ಗುಂಪು ಉಳಿದೆಲ್ಲಾ ಭಾಷಿಕ ಗುಂಪುಗಳಿಂತಲೂ ದೊಡ್ಡದು ಎಂದೇ ಒಪ್ಪೋಣ. ಹಾಗೆ ಹೆಚ್ಚು ಜನರು ಇದ್ದಾರೆನ್ನುವ ಕಾರಣಕ್ಕೇ ಹಿಂದೀಯನ್ನು ರಾಷ್ಟ್ರಭಾಷೆ ಮಾಡುತ್ತೇವೆನ್ನುವುದು ಸರಿಯೇ? ಹಾಗಾದರೆ ಹಿಂದೀಯ ಗಾಳಿಗಂಧದ ಸೋಂಕಿಲ್ಲದ ಕೋಟ್ಯಂತರ ಹಿಂದೀಯೇತರರು ಏನು ಮಾಡಬೇಕು? ತಮ್ಮ ನುಡಿಯನ್ನೇ ಕಲಿಯಲಿಕ್ಕಾಗದ ಕೋಟ್ಯಾಂತರ ಜನರು ಏನು ಮಾಡಬೇಕು? ಹೀಗೇನಾದರೂ ಕೇಳಿದರೆ ನಿಮಗೆ ಸಿಗುವ ಉತ್ತರ "ಹಿಂದೂಸ್ತಾನ್ ಮೆ ರೆಹೆತೇ ಹೋ ಔರ್ ಹಿಂದೀ ನಹೀ ಮಾಲೂಮ್?" ಎಂಬ ಮೂದಲಿಕೆ. ಹೆಚ್ಚು ಜನರಿದ್ದಾರೆ ಎನ್ನುವ ಕಾರಣಕ್ಕೆ ಹಿಂದೀಯನ್ನು ರಾಷ್ಟ್ರಭಾಷೆ/ ಆಡಳಿತ ಭಾಷೆ ಎಂದುಬಿಟ್ಟರೆ ಉಳಿದವನ್ನು ಸಾಯಿರಿ ಎಂದ ಹಾಗೆಯೇ. ಪ್ರಜಾಪ್ರಭುತ್ವ ಎಂದರೆ ಬಹುಮತ "MIGHT IS RIGHT" ಅಲ್ಲಾ. ಅದು ತನ್ನಲ್ಲಿನ ಅತಿ ಸಣ್ಣ ಗುಂಪಿನ ಸ್ವಾತಂತ್ರ್ಯಕ್ಕೂ ಧಕ್ಕೆ ತರದಂತಹ ವ್ಯವಸ್ಥೆ. ಹಿಂದೀಯನ್ನು ದೊಡ್ಡ ಗುಂಪಿನ ಜನರ ನುಡಿಯೆಂದು ಒಪ್ಪಿಸುವುದು ಪ್ರಜಾಪ್ರಭುತ್ವಕ್ಕೆ ಹಾನಿಕರ. ಹಾಗೆ ಒಪ್ಪುವುದು ನಮಗೆ ಆತ್ಮಹತ್ಯಾತ್ಮಕ!

## ಹಿಂದೀ ರಾಷ್ಟ್ರಪ್ರೇಮದ ಸಂಕೇತ

ಭಾರತದ ಇತಿಹಾಸದಲ್ಲಿ ಪರಕೀಯರ ದಬ್ಬಾಳಿಕೆಯ ಹೋರಾಟ ನೂರಾರು ವರ್ಷಗಳದ್ದು. ಈ ಹೋರಾಟದಲ್ಲಿ ಪಾಲ್ಗೊಂಡ ದೇಶಭಕ್ತರು ಸಾವಿರಾರು ಜನ. ನಮ್ಮ ಕರ್ನಾಟಕದ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಬ್ರಿಟೀಶರ ವಿರುದ್ಧ

ಹೋರಾಡಿದ ರಾಣಿ ಕಿತ್ತೂರ ಚೆನ್ನಮ್ಮ, ಅವಳ ನಂಬುಗೆಯ ಬಂಟ ಸಂಗೊಳ್ಳಿರಾಯಣ್ಣ, ವಿದುರಾಶ್ವತ್ಥದ ಗೋಲೀಬಾರಿನಲ್ಲಿ ಜೀವ ಕಳೆದು ಕೊಂಡವರು, ಈಸೂರಿನಲ್ಲಿ ದಂಗೆಯೆದ್ದು ಗಲ್ಲಿಗೆ ತಲೆಕೊಟ್ಟವರು, ಹಲಗಲಿಯ ಬೇಡರು... ಮಹಾತ್ಮಾಗಾಂಧಿಯ ಕರೆ ಎಂದು ಸ್ವಾತಂತ್ರ್ಯ ಚಳವಳಿಗೆ ಶಾಲಾಕಾಲೇಜು, ಮನೆ-ಮಠ, ಹೆಂಡತಿ-ಮಕ್ಕಳನ್ನು ತೊರೆದು ಧುಮುಕಿ ಜೈಲು ಸೇರಿದವರು, ಜೀವ ಕೊಟ್ಟವರು... ಈ ಎಲ್ಲರಲ್ಲೂ ಬೆಳಗುತ್ತಿದ್ದ ಆ ದೇಶಪ್ರೇಮದ ಕಿಚ್ಚನ್ನು ಹಿಂದೀ ಬಾಷೆ ಮೂಡಿಸಿತ್ತಾ? ಸುಭಾಶ್‌ಚಂದ್ರಭೋಸ್, ರವೀಂದ್ರನಾಥ್ ಟ್ಯಾಗೂರರೂ ಸೇರಿದಂತೆ ಸಾವಿರಾರು ಬೆಂಗಾಲಿಗಳು, ಭಗತ್ ಸಿಂಗ್, ಲಾಲಾ ಲಜಪತ್ ರಾಯರಂಥಾ ಪಂಜಾಬಿಗಳು, ಬಾಲ ಗಂಗಾಧರ ತಿಲಕ್, ವೀರ ಸಾವರ್ಕರ್ ಥರದ ಮರಾಠೀಯರು, ಸುಬ್ರಮಣ್ಯ ಭಾರತೀ, ವಿ ವಿ ಸುಬ್ರಮಣ್ಯ ಅಯ್ಯರ್, ಚಿದಂಬರಂ ಪಿಳ್ಳೈ... ಮೊದಲಾದ ತಮಿಳರು, ಅಲ್ಲೂರಿ ಸೀತಾರಾಮರಾಜುವಿನಂಥಾ ತೆಲುಗರು... ಎಲ್ಲರಲ್ಲೂ ದೇಶಪ್ರೇಮ ಹಿಂದೀ ಭಾಷೆಯಿಂದ ಮೂಡಿತ್ತೇ? ಅಷ್ಟೇಕೆ, ಇಂದಿಗೂ ಹಿಂದೀ ಬಾರದ ಕೋಟ್ಯಾಂತರ ಭಾರತೀಯರಿದ್ದಾರಲ್ಲಾ ಅವರಲ್ಲಿ ದೇಶಪ್ರೇಮವಿಲ್ಲವೇ? ಕನ್ನಡಪ್ರೇಮವೇ ದೇಶಪ್ರೇಮ ಎಂದ ಅ.ನ.ಕೃ ಮಾತನ್ನರಿತರೆ, ಕರ್ನಾಟಕದಲ್ಲೇ ಭಾರತವಿದೆ ಎಂದ ಕನ್ನಡ ಕುಲಪುರೋಹಿತ ಆಲೂರು ವೆಂಕಟರಾಯರ ಮಾತನ್ನು ಅರಿತರೆ ಹಿಂದೀಗೂ ರಾಷ್ಟ್ರಪ್ರೇಮಕ್ಕೂ ಹಾಕಿರುವ ತಳುಕು ಪೊಳ್ಳಿನದ್ದಷ್ಟೇ ಅಲ್ಲದೆ ದುರುದ್ದೇಶದ್ದು ಎಂಬುದು ಅರಿವಾಗುತ್ತದೆ.

## ಹಿಂದೀ ಭಾರತದ ಒಗ್ಗಟ್ಟಿನ ಸಾಧನ

ಒಂದು ನಾಡಿನಲ್ಲಿ ಒಂದೇ ಭಾಷೆ ಇದ್ದರೆ ಜನರನ್ನು ಅದು ಒಗ್ಗೂಡಿಸುತ್ತದೆ ಅನ್ನುವುದು ಸರಿ. ಆದರೆ ಅದು ಹೊಂದುವುದು ಎಂತಹ ನಾಡುಗಳಿಗೆ ಎಂದು ನೋಡಬೇಕಾಗಿದೆ. ಜಗತ್ತಿನಲ್ಲಿ ನಾನಾ ಕಾರಣಗಳಿಂದಾಗಿ ದೇಶಗಳು ಹುಟ್ಟಿವೆ. ಜರ್ಮನ್ ಭಾಷೆಯಾಡುವ ಜನಾಂಗದ ನಾಡು ಜರ್ಮನಿಯಾದಂತೆ ಫ್ರೆಂಚ್ ಭಾಷಿಕರ ನಾಡು ಫ್ರಾನ್ಸ್. ಇಂಗ್ಲೀಶರದು ಇಂಗ್ಲೇಂಡ್, ಫಿನ್ನಿಶ್ ಜನರದ್ದು ಪಿಹ್ನ್‌ಲ್ಯಾಂಡ್, ಜರ್ಮನ್ ನುಡಿಯವರದ್ದು ಜರ್ಮನಿ, ಜಪಾನೀಯರದು ಜಪಾನ್, ಥಾಯ್ ಭಾಷಿಕರ ಥಾಯ್‌ಲ್ಯಾಂಡ್, ಕೊರಿಯನ್‌ರ ಕೊರಿಯಾ. ಆದರೆ ಭಾರತದ ಪರಿಸ್ಥಿತಿ ಹಾಗಿಲ್ಲ. ನಮ್ಮ ದೇಶದಲ್ಲಿ ಒಂದೇ ಭಾಷಿಕ ಜನರು ಇಲ್ಲ! ಇಲ್ಲಿ ನಾನಾ ಭಾಷೆಗಳ, ಜನಾಂಗಗಳ, ನಾನಾ ರೂಪಿನ, ನಾನಾ ಸಂಸ್ಕೃತಿಯ, ನಾನಾ ನಂಬಿಕೆಗಳ, ನಾನಾ ಧರ್ಮಗಳ ಜನರು ವಾಸವಿದ್ದೇವೆ. ಇದು ವಾಸ್ತವ.

ಹೇಳಿ... ಈ ಚಂದದ ವೈವಿಧ್ಯತೆಯನ್ನು ಶಾಪವೆಂದುಕೊಳ್ಳುವುದು ತರವೇ? ಒಗ್ಗಟ್ಟನ್ನು ಸಾಧಿಸುವ ವಿಧಾನ ತಿಳಿಯದವರು ಹಾಗೆ ಶಾಪವೆಂದುಕೊಂಡಾರು ಮತ್ತು ವೈವಿಧ್ಯತೆಯನ್ನು ಅಳಿಸಲು ಭಾರತ ಸರ್ಕಾರದಂತೆಯೇ ಮುಂದಾದಾರು, ಅಷ್ಟೆ.

ನಮ್ಮಲ್ಲಿನ ಅನನ್ಯತೆಯನ್ನು ಒಪ್ಪಿಕೊಂಡು, ಉಳಿಸಿಕೊಂಡು ಪ್ರತಿಯೊಂದು ಅನನ್ಯತೆಯನ್ನೂ ಗೌರವಿಸಿ, ಸಮಾನವೆಂದು ಕಂಡು, ಸಮಾನ ಸ್ಥಾನಮಾನ ನೀಡುವುದರಲ್ಲಿ ಒಗ್ಗಟ್ಟಿನ ಗುಟ್ಟಿದೆಯೋ, ಬಾಯಲ್ಲಿ ನಾವೆಲ್ಲಾ ಸಮಾನರು ಆದರೂ ನೀ ನನ್ನ ಗುಲಾಮ ಎನ್ನುವಂತೆ ನಡೆಸಿಕೊಳ್ಳುವುದರಲ್ಲಿದೆಯೋ? ಭಾರತವನ್ನು ಹಿಂದೀ ಒಗ್ಗೂಡಿಸಲಾರದು. ಯಾಕೆಂದರೆ ಇಲ್ಲಿ ಹಿಂದೀ ಈ ನಾಡಿನ ದೊಡ್ಡಣ್ಣನಂತೆ ವರ್ತಿಸುತ್ತಿದೆ. ನಿಮ್ಮ ಮನೆಯಲ್ಲಿ ಮಾತ್ರಾ ನಿಮ್ಮ ನುಡಿಗೆ ಸ್ಥಾನ, ಬೀದಿಗೆ ಬಂದೊಡನೆ ಹಿಂದೀ ಬಳಸಿ ಎನ್ನುತ್ತಾ ಹಿಂದೀಯೇತರರನ್ನು ಎರಡನೇ ದರ್ಜೆಯ ನಾಗರೀಕನ್ನಾಗಿಸುತ್ತಿದೆ. ಹಾಗಾಗಿ, ಹಿಂದೀ ನಾಡನ್ನು ಒಗ್ಗೂಡಿಸದೇ ಒಗ್ಗೂಡಿಸುತ್ತದೆ ಎನ್ನುವ ಭ್ರಮೆ ಹುಟ್ಟುಹಾಕುತ್ತಲೇ ಒಡೆದು ಹಾಕುತ್ತಿದೆಯೆನ್ನುವುದೇ ಬೀದಿ ದಿಟವಾಗಿದೆ. ಹಾಗಲ್ಲದಿದ್ದರೆ ಅಸ್ಸಾಮಿನಂತಹ ರಾಜ್ಯದಲ್ಲಿ ಹಿಂದೀ ಭಾಷಿಕ ವಲಸಿಗರ ಮೇಲೇಕೆ ಆಕ್ರೋಶವಿದೆ? ಮಹಾರಾಷ್ಟ್ರದಲ್ಲಿ, ಕರ್ನಾಟಕದಲ್ಲಿ ರೈಲು ನೇಮಕಾತಿ ಪರೀಕ್ಷೆಗೆ ಬಂದ ಹಿಂದೀಯವರನ್ನೇಕೆ ಪ್ರತಿಭಟಿಸಿ ವಾಪಸ್ಸು ಕಳಿಸಲಾಯಿತು?

## ಹಿಂದೀ ಭಾರತದ ಸಂಪರ್ಕ ಭಾಷೆ: ಸಾಮಾನ್ಯ ಸಂಪರ್ಕ ಕೊಂಡಿ

“ಭಾರತದಲ್ಲಿ ಅನೇಕ ಭಾಷೆಗಳ ಜನರಿದ್ದಾರೆ. ನಾವು ಒಂದೂರಿನಿಂದ ಇನ್ನೊಂದೂರಿಗೆ ಹೋದರೆ ನಮ್ಮ ಭಾಷೆ ಅವರಿಗೆ, ಅವರ ಭಾಷೆ ನಮಗೆ ತಿಳಿಯುವುದಿಲ್ಲಾ. ನಾವು ಅವರ ಭಾಷೆಯನ್ನು ಕಲಿಯೋಣವೆಂದರೆ ಅಷ್ಟೊಂದು ಭಾಷೆಗಳನ್ನು ಕಲಿಯುವ ಹೊತ್ತಿಗೆ ಅರ್ಧ ಆಯಸ್ಸು ಮುಗಿದಿರುತ್ತದೆ. ಎಲ್ಲೆಡೆ ಹೋದರೂ ಎಲ್ಲರೂ ಒಂದೇ ಭಾಷೆ ಮಾತಾಡಿದರೆ ಎಷ್ಟೊಂದು ಅನುಕೂಲವಲ್ಲವೇ? ಹಾಗಾಗಿ ಇಡೀ ದೇಶದಲ್ಲಿ ಹೆಚ್ಚು ಜನರು ಮಾತಾಡುವ ಹಿಂದೀಯನ್ನು ಇಡೀ ದೇಶದ ಎಲ್ಲರೂ ಕಲಿಯಬೇಕು. ಆಗ ನಾವುಗಳು ಬೇರೆ ರಾಜ್ಯಗಳಿಗೆ ಹೋದಾಗ ತೊಡಕಾಗದು.” ಇದು ಹಿಂದೀ ಬೇಕೆನ್ನುವವರ ವಾದ.

ಈಗ ನಾವು ತಮಿಳುನಾಡಿಗೆ ಹೋದರೆ ತಮಿಳಿನಲ್ಲಿ ಮಾತಾಡಬೇಕೋ? ಹಿಂದೀಯಲ್ಲೋ? ಮಹಾರಾಷ್ಟ್ರಕ್ಕೆ ಹೋದರೆ ಮರಾಠಿಯಲ್ಲೋ? ಹಿಂದೀಯಲ್ಲೋ? ಕರ್ನಾಟಕಕ್ಕೆ ಬಂದರೆ ಕನ್ನಡದಲ್ಲೋ? ಹಿಂದೀಯಲ್ಲೋ? ಎಲ್ಲೆಡೆ ಹಿಂದೀಯಲ್ಲೇ ಮಾತನ್ನಾಡಿದರೆ ಏನಾಗುತ್ತದೆ? ಆಗ ನಾವು ಮನೆಯಲ್ಲಿ ಮಾತ್ರಾ ಕನ್ನಡವನ್ನು ಸೀಮಿತಗೊಳಿಸಿಕೊಳ್ಳಬೇಕಾಗುತ್ತದೆ. ಬೀದಿಯ ಭಾಷೆ ಹಿಂದೀಯಾಗಿರುತ್ತದೆ. ಸಹಜವಾಗಿ ನಮ್ಮೂರಿನ ಎಲ್ಲಾ ವ್ಯವಸ್ಥೆಗಳನ್ನೂ ಹಿಂದೀಯಲ್ಲಿ ಕಟ್ಟಬೇಕಾಗುತ್ತದೆ. ವಾಸ್ತವವಾಗಿ, ಒಂದು ನಾಡಿನ ವ್ಯವಸ್ಥೆಯನ್ನು ಆಯಾನಾಡಿನ ಜನರಿಗಾಗಿ ಕಟ್ಟಬೇಕೇ ಹೊರತು ವಲಸಿಗರಿಗಲ್ಲಾ. ಇಷ್ಟಕ್ಕೂ ಕರ್ನಾಟಕಕ್ಕೆ ಬರುವವರು ಕನ್ನಡ ಕಲಿಯಲಿ ಎನ್ನುವುದು ಸಹಜವೂ ಸರಿಯೂ ಆದ ನಿಲುವಾಗಿದೆ. ಇದನ್ನೇ ನಾವು ವಲಸಿಗನ ಧರ್ಮವೆನ್ನುವುದು. ಇಲ್ಲಿ ಪ್ರವಾಸಿಗನ ಧರ್ಮವೇ ಬೇರೆ. ಪ್ರವಾಸಿ ಯಾವುದೇ ಭಾಷೆಯನ್ನು ಕಲಿತು ಪ್ರವಾಸ ಮಾಡಬೇಕಾಗಿಲ್ಲ. ವ್ಯವಹರಿಸಲು ಬೇಕಾಗುವಷ್ಟು ಕಲಿತು ಬಂದರೆ ಸಾಕು, ಅಥವಾ ಅನುವಾದಕರ ಸೇವೆ ಎರವಲು ಪಡೆದರೆ ಆಯ್ತು. ಆದರೆ ಇಲ್ಲೇ ನೆಲೆಸಲು ಬರುವ ವಲಸಿಗನಿಗೆ ಬೇರೆಯೇ ಧರ್ಮವಿದೆ. ಈ ನಾಡಿನ ನುಡಿ ಕಲಿತು ಮುಖ್ಯವಾಹಿನಿಗೆ ಸೇರಬೇಕಾದ ಹೊಣೆಗಾರಿಕೆ ಅವನದು. ಬೇಕೆಂದರೆ ಸರ್ಕಾರ ಇಂಥವರಿಗೆ ಕನ್ನಡ ಕಲಿಕೆಗೆ ಸಹಾಯ ಮಾಡಲಿ. ಅದು ಬಿಟ್ಟು ಇಡೀ ನಾಡಿನ ವ್ಯವಸ್ಥೆಯನ್ನು ವಲಸಿಗರಿಗಾಗಿ ಕಟ್ಟುತ್ತೇವೆ ಎನ್ನುವುದು ಸರಿಯಲ್ಲ.

ಇಂದು ತಮ್ಮ ನಾಡುಗಳಿಂದ ಬೇರೆ ಭಾಷೆಯ ನಾಡಿಗೆ ವಲಸೆ ಹೋದರೆ ಅನುಕೂಲವಾಗುತ್ತದೆಯಾದ್ದರಿಂದ ಹಿಂದೀ ಕಲಿಯಿರಿ ಎನ್ನುವುದಾದರೆ ತಮ್ಮ ಸ್ವಂತ ರಾಜ್ಯ ಬಿಟ್ಟು ಹೊರರಾಜ್ಯಗಳಿಗೆ ವಲಸೆ ಹೋಗುವವರ ಪ್ರಮಾಣವೆಷ್ಟು ಎನ್ನುವ ಕುತೂಹಲ ಹುಟ್ಟುತ್ತದೆ. ಈ ಕೆಳಗಿನ ಮಾಹಿತಿ ೨೦೦೧ರ ಜನಗಣತಿಯಲ್ಲಿ ಇರುವುದು. ಕರ್ನಾಟಕದ ಮಾಹಿತಿ ಹೀಗಿದೆ. (ಮಾಹಿತಿ ಮೂಲ: http://www.censusindia.gov.in/Census_Data_2001/Census_data_finder/D_Series/Migrants_by_place_of_birth.htm)

| | | | | | |
|---|---|---|---|---|---|
| 120 | Karnataka | Total Population | 52,850,562 | 26,898,918 | 25,951,644 |
| 121 | Karnataka | Born in India | 52,806,257 | 26,871,164 | 25,935,093 |
| 122 | Karnataka | Within the state of enumeration | 50,698,451 | 25,907,398 | 24,791,053 |
| 123 | Karnataka | Born in the place of enumeration | 36,668,935 | 21,345,456 | 15,323,479 |
| 124 | Karnataka | Born elsewhere in the district of enumeration | 9,531,671 | 2,807,673 | 6,723,998 |
| 125 | Karnataka | Born in other districts of the state | 4,497,845 | 1,754,269 | 2,743,576 |
| 126 | Karnataka | States in India beyond the state of enumeration | 2,107,806 | 963,766 | 1,144,040 |

ಇದರಂತೆ ಒಟ್ಟು ಕರ್ನಾಟಕದ ಜನಸಂಖ್ಯೆಯ ೫.೨೮ ಕೋಟಿಯಲ್ಲಿ ಬೇರೆ ರಾಜ್ಯದಲ್ಲಿ ಹುಟ್ಟಿ ಇಲ್ಲಿಗೆ ಬಂದವರ ಸಂಖ್ಯೆ ೦.೨೧ ಕೋಟಿಯಷ್ಟು ಜನರು. ಅಂದರೆ ವಲಸೆಯ ಪ್ರಮಾಣ ೩.೯೮%. ಅಂದರೆ ಕೇವಲ ನಾಲ್ಕು ಪ್ರತಿಶತ ಜನರಿಗಾಗಿ ಇಡೀ ನಾಡಿನ ಜನರು ಒಂದು ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕೆನ್ನುವುದು ಎಷ್ಟು ಸರಿ?

ಒಂದು ಸಣ್ಣ ಕಲ್ಪನೆ ನೋಡಿ: ನಾಳೆ ನಮ್ಮ ಶಿವಮೊಗ್ಗೆ ಅದ್ಭುತವಾದ ಬೆಳವಣಿಗೆ ಕಂಡುಕೊಂಡಿತೆಂದುಕೊಳ್ಳೋಣ. ಅನೇಕಾನೇಕ ಕಾರ್ಖಾನೆಗಳು, ಸಂಸ್ಥೆಗಳು ಅಲ್ಲಿ ಕೆಲಸ ಮಾಡಲು ಆರಂಭಿಸಿದವೆಂದುಕೊಳ್ಳೋಣ. ಆಗ ದೇಶದ ನಾನಾ ಭಾಗಗಳ ಪ್ರತಿಭಾನ್ವಿತರು(?) ಅಲ್ಲಿಗೆ ವಲಸೆ ಬರುತ್ತಾರೆ. ಭಾರತದ ಭಾಷಾನೀತಿಯ ಆಶಯದಂತೆ ಅವರೆಲ್ಲಾ ಹಿಂದೀಯನ್ನು ಕಲಿತು, ಹಿಂದೀ ಭಾರತವನ್ನು ಜೋಡಿಸುತ್ತದೆಯೆಂದು ನಮ್ಮ ಶಿವಮೊಗ್ಗೆಯಲ್ಲೂ ಹಿಂದೀಯಲ್ಲೇ ವ್ಯವಹರಿಸಲು ಆರಂಭಿಸುತ್ತಾರೆ. ಪಕ್ಕದ ಗಾಜನೂರಿನ ಓದು ಬರಹವೇ ಬಾರದ ಕನ್ನಡದ ಗಂಡೊಂದು ಶಿವಮೊಗ್ಗೆಯಲ್ಲಿ ಆಟೋ ಓಡಿಸಿ ಜೀವನ ಮಾಡುತ್ತೇನೆ ಎಂದುಕೊಂಡು ಬಂದರೆ ಏನಾಗುತ್ತದೆ? ಆಟೋ ಓಡಿಸುವವನೂ ಕೂಡಾ ಹಿಂದೀಯಲ್ಲೇ ವ್ಯವಹರಿಸಬೇಕಾಗುತ್ತದೆ. ಅಂದರೆ ಏನರ್ಥ? ಓದು ಬರಹ ಬರದವನೂ ಹಿಂದೀಯನ್ನು ಕಲಿತರೆ ಮಾತ್ರಾ ಬದುಕಲು ಸಾಧ್ಯ ಎಂಬಂತಾಗುತ್ತದೆ. ಶಿವಮೊಗ್ಗೆಯಲ್ಲಿ ಕನ್ನಡದ ಪರಿಸರ ಮಾಯವಾಗಿ ಹಿಂದೀ ಪರಿಸರ ಹುಟ್ಟುತ್ತದೆ. ಹಿಂದೀ ಬಳಸುವ ಮಾರುಕಟ್ಟೆ, ಹಿಂದೀಯಲ್ಲಿ ಸೇವೆ ನೀಡುವ ಸರ್ಕಾರಿ ಇಲಾಖೆಗಳು, ಬೋರ್ಡುಗಳು, ಅರ್ಜಿಗಳು, ಮನರಂಜನೆ.. ಬೆಳೆಯುತ್ತವೆ. ಕನ್ನಡ ಅಡುಗೆ ಮನೆಯಲ್ಲಾದರೂ ಉಳಿಯುತ್ತದೆಯೋ ಎಂದರೆ ಈಗಾಗಲೇ ಅಲ್ಲಿನ ಮಾರುಕಟ್ಟೆಯಲ್ಲಿ ತರಕಾರಿಗಳು ಮಾಯವಾಗಿ ಸಬ್ಜೀ, ಬೇಳೆ ಮಾಯವಾಗಿ ದಾಲ್, ಅಕ್ಕಿ ಹೋಗಿ ಚಾವಲ್ ಬಂದು ಕೂತಿರುತ್ತದೆ. ಅಂದರೆ

ಮೂಲ ಕನ್ನಡನಾಡಿನ ಜನಜೀವನ ಲಕ್ಷಣ (ಡೆಮೋಗ್ರಫಿ) ಸರ್ಕಾರದ ಭಾಷಾನೀತಿಯ ಹಸ್ತಕ್ಷೇಪದಿಂದ ಬದಲಾಗಿಬಿಡುತ್ತದೆ. ಒಂದು ಪ್ರದೇಶದ ಲಕ್ಷಣ ಸಹಜವಾಗಿ ಬದಲಾಗುವುದು ಬೇರೆ, ಇದು ಬೇರೆಯೇ ಅಲ್ಲವೇ? ಹೀಗೆ ಬದಲಿಸುವ ಹಕ್ಕನ್ನು ಕೇಂದ್ರಸರ್ಕಾರಕ್ಕೆ ಕೊಟ್ಟವರು ಯಾರು? ಹೋಗಲೀ ಇದರಿಂದ ಕನ್ನಡಿಗರಿಗೇನು ಉಪಯೋಗ? ಇದರಿಂದ ಅನುಕೂಲವಾಗುವುದು ಹಿಂದೀ ಭಾಷಿಕರಿಗೆ ಇಡೀ ಭಾರತದ ಯಾವ ಮೂಲೆಗೇ ಆದರೂ ವಲಸೆ ಹೋಗುವುದಕ್ಕೆ ಮಾತ್ರಾ. ಅಂದರೆ ಭಾರತದ ಪ್ರತಿಮೂಲೆಯೂ ಹಿಂದೀ ಭಾಷಿಕರ ವಸಾಹತು ಪ್ರದೇಶವಾಗಬೇಕೆ? ಇದೇ ಕೇಂದ್ರದ ಉದ್ದೇಶವೇ ಎನ್ನುವ ಅನುಮಾನಕ್ಕೆ ಕಾರಣವಾದಂತಹ ಮಾಹಿತಿಯೂ ಇಲ್ಲಿದೆ ನೋಡಿರಿ.

## ಜನಸಂಖ್ಯಾ ನಿಯಂತ್ರಣ ಮತ್ತು ವಲಸೆ

ನಮ್ಮೆಲ್ಲಾ ಸಮಸ್ಯೆಗೆ ಮೂಲ ಜನಸಂಖ್ಯಾ ಸ್ಫೋಟ ಎನ್ನುವ ವದಂತಿಯನ್ನು ಸದಾಕಾಲ ಹರಡಲಾಗುತ್ತಿದೆ. ಅದರಲ್ಲೂ ಸರ್ಕಾರ ಎಲ್ಲಾ ಸಮೂಹ ಮಾಧ್ಯಮಗಳ ಮೂಲಕ ಜನರಿಗೆ ಕುಟುಂಬ ನಿಯಂತ್ರಣ ಮಾಡಿ ಎಂದು ಕರೆ ಕೊಡುತ್ತಲೇ ಇರುತ್ತದೆ. ನಿಜಕ್ಕೂ ಕರ್ನಾಟಕಕ್ಕೆ ಜನಸಂಖ್ಯಾ ಸ್ಫೋಟದ ಸಮಸ್ಯೆ ಇದೆಯೇ? ಕನ್ನಡಿಗರನ್ನು ಕುಟುಂಬ ಯೋಜನೆಗೆ ಒಲಿಸುತ್ತಾ ಭಾರತ ಸರ್ಕಾರ ಮಾಡುತ್ತಿರುವುದಾದರೂ ಏನನ್ನು? ವಾಸ್ತವ ಸಂಗತಿ ಏನು?

## ಜನಸಂಖ್ಯೆ ಮತ್ತು ಜನದಟ್ಟಣೆ

ಸಾಮಾನ್ಯವಾಗಿ ಜನಸಂಖ್ಯೆ ಹೆಚ್ಚು ಅನ್ನುವ ಪ್ರಚಾರದಲ್ಲಿ ಆಯಾದೇಶದ ವಿಸ್ತೀರ್ಣವನ್ನು ಗಣನೆಗೆ ತೆಗೆದುಕೊಳ್ಳಬೇಕಾದ್ದು ಸರಿಯಾದ ವಿಧಾನ. ಪ್ರಪಂಚದ ಅತಿ ಹೆಚ್ಚು ಜನಸಂಖ್ಯೆಯುಳ್ಳ ದೇಶ ಚೀನಾ, ಅದರ ನಂತರ ಭಾರತ. ಜನಸಂಖ್ಯೆಯೇ ನಮ್ಮೆಲ್ಲಾ ಅವ್ಯವಸ್ಥೆ, ಸಮಸ್ಯೆಗಳಿಗೆ ಮೂಲ ಅನ್ನೋದು ಸಾಮಾನ್ಯವಾಗಿ ಹುಟ್ಟು ಹಾಕಲಾಗಿರುವ ನಂಬಿಕೆ. ಒಂದು ನಾಡಿನ ಜನಸಂಖ್ಯೆಗಿಂತಲೂ ಮಹತ್ವದ್ದು ಅಲ್ಲಿನ ಜನದಟ್ಟಣೆ. ಈ ಜನದಟ್ಟಣೆಯನ್ನು ಒಂದು ಚದರ ಕಿಲೋಮೀಟರ್ ಪ್ರದೇಶದಲ್ಲಿ ವಾಸಿಸುತ್ತಿರುವ ಜನರ ಸಂಖ್ಯೆಯ ಮೂಲಕ ಸೂಚಿಸುವುದು ಒಂದು ವಿಧಾನ. ಆ ಲೆಕ್ಕದಲ್ಲಿ ಚೀನಾಗಿಂತಲೂ ಭಾರತ ಮುಂದಿದೆ. ಚೀನಾ ಜನದಟ್ಟಣೆ ೧೪೦ ಇದ್ದಲ್ಲಿ ಭಾರತದ್ದು ೩೬೮. ವಾಸ್ತವವಾಗಿ ಅದಕ್ಕಿಂತಲೂ ಅರ್ಥಪೂರ್ಣವಾದ ಸೂಚಿ ಎಂದರೆ ಆಯಾಪ್ರದೇಶದಲ್ಲಿರುವ

ಸಂಪನ್ಮೂಲದ ಪ್ರಮಾಣದೊಂದಿಗಿನ ಅನುಪಾತ ಪರಿಗಣಿಸಿ ಲೆಕ್ಕ ಹಾಕುವ ಜನದಟ್ಟಣೆ.

ಸದ್ಯ ಭಾರತದ ಸಂಪನ್ಮೂಲಾಧಾರಿತ ಜನದಟ್ಟಣೆಯ ಅಂಕಿಅಂಶಗಳನ್ನು ಬದಿಗಿಟ್ಟು ವಿಸ್ತೀರ್ಣದ ಆಧಾರದ ಮೇಲಿನ ಜನದಟ್ಟಣೆಯ ಅಂಕಿಅಂಶಗಳನ್ನು ವಿಶ್ಲೇಷಿಸಿ ನೋಡೋಣ. ಅಂದರೆ ನಾಡಿನ ಜನಸಂಖ್ಯೆಯ ಹೆಚ್ಚಳ ಅಥವಾ ಕುಸಿತ ಎನ್ನುವುದು ಆ ಪ್ರದೇಶದ ವಿಸ್ತೀರ್ಣ ಆಧಾರಿತ ಜನದಟ್ಟಣೆಯಾಗಿದೆ. ಜನಸಂಖ್ಯಾ ದಟ್ಟಣೆಯನ್ನು ನಿಭಾಯಿಸಲು ಇರುವ ಸಾಧನ ಹುಟ್ಟಿನ ಪ್ರಮಾಣದ ಮೇಲಿನ ನಿಯಂತ್ರಣ. ಈ ಪ್ರಮಾಣ ಆಯಾ ಪ್ರದೇಶದಲ್ಲಿನ ತಾಯಂದಿರು ಸರಾಸರಿ ಎಷ್ಟು ಮಕ್ಕಳನ್ನು ಹೆರುತ್ತಾರೆ ಎಂಬುದನ್ನು ಅವಲಂಬಿಸಿದೆ. ಈ ಹುಟ್ಟಿನ ಪ್ರಮಾಣವನ್ನು ಫಲವತ್ತತೆ ಎನ್ನಬಹುದಾಗಿದೆ. ಜನಸಂಖ್ಯಾ ನಿಯಂತ್ರಣವೆಂದರೆ ಈ ಫಲವತ್ತತೆಯನ್ನು/ ಹೆರುವಿಕೆಯ ಪ್ರಮಾಣವನ್ನು ನಿಯಂತ್ರಿಸುವುದೇ ಆಗಿದೆ. ಇದನ್ನು ಮತ್ತಷ್ಟು ಸರಳವಾಗಿ ಅರಿಯೋಣ ಬನ್ನಿ.

**ಜನಸಂಖ್ಯಾ ನಿಯಂತ್ರಣ**

ಜನರು ಹುಟ್ಟುತ್ತಿರುವಂತೆಯೇ ಸಾಯುತ್ತಲೂ ಇರುವುದರಿಂದ ಈ ಎರಡು ಪ್ರಮಾಣಗಳ ನಡುವಿನ ಹೊಂದಾಣಿಕೆ ಆಯಾಪ್ರದೇಶದ ಜನಸಂಖ್ಯೆ ಏರುತ್ತಿದೆಯೇ, ಇಳಿಯುತ್ತಿದೆಯೇ ಅನ್ನುವುದನ್ನು ನಿಶ್ಚಯಿಸುತ್ತದೆ. ಜನಸಂಖ್ಯಾ ನಿಯಂತ್ರಣವೆಂದರೆ ಜನಸಂಖ್ಯೆಯ ಏರಿಕೆ ಪ್ರಮಾಣದ ಮೇಲೆ ಕಡಿವಾಣ ಹಾಕಿಕೊಳ್ಳುವುದೇ ಆಗಿದೆ. ಇದಕ್ಕಿರುವ ಅಳತೆಗೋಲು TFR, ಅಂದರೆ ಒಟ್ಟು ಫಲವತ್ತತೆಯ ಪರಿಮಾಣ. ಈ ಸೂಚ್ಯಂಕವು ೨.೦ ಇದ್ದಲ್ಲಿ ಜನಸಂಖ್ಯೆ ಹೆಚ್ಚೂ ಆಗದು ಕಮ್ಮಿಯೂ ಆಗದು. ಸರಾಸರಿಯಾಗಿ ಒಬ್ಬ ತಂದೆತಾಯಿಗೆ ಇಬ್ಬರು ಮಕ್ಕಳಿರುವುದು ಎಂದರೆ ಸೂಚ್ಯಂಕ ೨.೦ ಇದೆ ಎಂದರ್ಥ. ಎರಡಕ್ಕಿಂತ ಹೆಚ್ಚಿನ ಸೂಚ್ಯಂಕದ ಅರ್ಥ ಜನಸಂಖ್ಯೆ ಏರುಮುಖದಲ್ಲಿದೆ, ಇದು ಜನಸಂಖ್ಯಾ ಸ್ಫೋಟದ ಕಡೆಗಿನ ಹೆಜ್ಜೆ. ಇದೇ ಸೂಚ್ಯಂಕ ೨.೦ಕ್ಕಿಂತ ಕೆಳಗೆ ಇಳಿದರೆ ಜನಸಂಖ್ಯೆಯ ಇಳಿಮುಖವಾಗುತ್ತಿರುವ ಲಕ್ಷಣ. ಜನಸಂಖ್ಯಾ ನಿಯಂತ್ರಣ ಎನ್ನುವುದರ ಅರ್ಥ ಏರುಮುಖವಾಗಿರುವ ಜನಸಂಖ್ಯಾ ಸೂಚ್ಯಂಕವನ್ನು ನೇರವಾಗಿಸುವುದು. ಅಂದರೆ ಸೂಚ್ಯಂಕವನ್ನು ೨.೦ಕ್ಕಿಳಿಸುವುದು. ಆದರೆ ಮದುವೆ ಮಾಡಿಕೊಳ್ಳದವರು, ಚಿಕ್ಕಮಕ್ಕಳ ಸಾವಿನ ಪ್ರಮಾಣ... ಮುಂತಾದುವನ್ನೆಲ್ಲಾ ಗಮನದಲ್ಲಿಟ್ಟುಕೊಂಡು ಈಗಿರುವ ಜನಸಂಖ್ಯಾ ಪ್ರಮಾಣವನ್ನೇ ಕಾಯ್ದುಕೊಳ್ಳಬೇಕೆಂದರೆ ಸೂಚ್ಯಂಕವನ್ನು

೨.೧ರಲ್ಲಿಟ್ಟುಕೊಳ್ಳುವುದು ಒಳಿತು. ಯಾವ ದೇಶವೂ, ಯಾವ ಜನಾಂಗವೂ ಸದರಿ ಫಲವತ್ತತೆ ಸೂಚ್ಯಂಕವನ್ನು ೨.೧ಕ್ಕಿಂತ ಕೆಳಕ್ಕಿಳಿಸಲು ಒಪ್ಪದು. ಯಾಕೆಂದರೆ ಅದು ಕಾಲಾಂತರದಲ್ಲಿ ಆ ಜನಾಂಗವನ್ನೇ ಭೂಪಟದಿಂದ ಅಳಿಸಿಬಿಡುತ್ತದೆ. ಇದನ್ನು ಮತ್ತಷ್ಟು ಸರಳವಾಗಿ ತಿಳಿಯಲು ಈ ನಕ್ಷೆ ನೋಡಿ. ೨.೦ ಸೂಚ್ಯಂಕ




ಅನುಸರಿಸಿದರೆ ಎಷ್ಟೇ ಶತಮಾನಗಳುರುಳಿದರೂ ಜನಸಂಖ್ಯೆ ಅದೇ ಪ್ರಮಾಣದಲ್ಲಿರುತ್ತದೆ. ೨ಕ್ಕಿಂತ ಕೆಳಗಿಳಿದರೆ ಹೇಗೆ ಕುಸಿತ ಕಂಡು ಕೊನೆಗೊಮ್ಮೆ ಆ ಜನಾಂಗ ನಿರ್ನಾಮವಾಗಿಬಿಡುತ್ತದೆ ಎಂದು ತಿಳಿಯುತ್ತದೆ.

## ಭಾರತ ದೇಶದ ಸ್ವರೂಪ ಮತ್ತು ಜನದಟ್ಟಣೆ

ಭಾರತವೂ ಕೂಡಾ ಏರುಮುಖವಾಗಿರುವ ಜನಸಂಖ್ಯೆ ಹೊಂದಿದ್ದು (ಈಗಿನ ಫಲವತ್ತತೆ ಸೂಚ್ಯಂಕ ೨.೯) ತನ್ನ ಜನಸಂಖ್ಯೆಯನ್ನು ಸ್ಫೋಟವಾಗಲು ಬಿಡದಂತೆಯೂ, ಈಗ ಇರುವಷ್ಟೇ ಕಾಪಾಡಿಕೊಳ್ಳಲೂ ಯೋಜಿಸಿದೆ. ಆ ಕಾರಣಕ್ಕಾಗಿಯೇ ೨೦೨೦ರ ಹೊತ್ತಿಗೆ ಫಲವತ್ತತೆ ಸೂಚ್ಯಂಕವನ್ನು ೨.೧ಕ್ಕೆ ಇಳಿಸಲು ಯೋಜಿಸಿದೆ. ಆದರೆ ಯೋಜನೆ ಜಾರಿ ಮಾಡುವ ಭರದಲ್ಲಿ ಕೆಲಜನಾಂಗಗಳ ಸರ್ವನಾಶಕ್ಕೆ ಮುನ್ನುಡಿ ಬರೆದಿದೆ. ಹೌದೂ.. ಭಾರತದ ಪ್ರಸ್ತುತ ಜನಸಂಖ್ಯಾ ನಿಯಂತ್ರಣ ಯೋಜನೆಯ ರೂಪುರೇಶೆಯನ್ನು ಅರಿತುಕೊಂಡರೆ ಈ ದಿಟವು ಗೋಚರವಾಗುತ್ತದೆ. ಇದು ಹುನ್ನಾರವೇ? ಅವಿವೇಕವೇ?

ಉದ್ದೇಶಪೂರ್ವಕವೇ? ದಡ್ಡತನವೇ? ಎಂಬುದನ್ನು ವಿಶ್ಲೇಷಿಸುವುದು ನಿಮಗೆ ಬಿಟ್ಟದ್ದು.

**ಜನಸಂಖ್ಯಾ ದಟ್ಟಣೆಯ ವಸ್ತುಸ್ಥಿತಿ**

ನಿಯಂತ್ರಣೆಯ ಬಗ್ಗೆ ಮಾತಾಡುವ ಮೊದಲು ಕರ್ನಾಟಕದ ಜನಸಂಖ್ಯಾ ದಟ್ಟಣೆಯ ಬಗ್ಗೆ ಒಂದಷ್ಟು ಅಂಕಿ ಅಂಶಗಳತ್ತ ಕಣ್ಣು ಹಾಯಿಸೋಣ. ೨೦೧೧ರ ಜನಗನತಿಯ ಆಧಾರದ ಮೇಲೆ ತಯಾರಿಸಿರುವ ಈ ಪಟ್ಟಿಯನ್ನೊಮ್ಮೆ ನೋಡಿ. (ಮಾಹಿತಿ ಮೂಲ: http://en.wikipedia.org/wiki/List_of_states_and_union_territories_of_India_by_population)

| | |
|---|---|
| ದೆಹಲಿ | ೯,೩೪೦ |
| ಚಂಡೀಗಡ | ೯,೨೫೨ |
| ಪಾಂಡಿಚೇರಿ | ೨,೫೯೮ |
| ದಮನ್ ಮತ್ತು ಡಿಯು | ೨,೧೬೯ |
| ಲಕ್ಷದ್ವೀಪ | ೨,೦೧೩ |
| ಬಿಹಾರ | ೧೧೦೨ |
| ಪಶ್ಚಿಮ ಬಂಗಾಲ | ೧೦೨೯ |
| ಕೇರಳ | ೮೫೯ |
| ಉತ್ತರ ಪ್ರದೇಶ | ೮೨೮ |
| ದಾದ್ರ ನಗರ ಹವೇಲಿ | ೬೯೮ |
| ಹರ್ಯಾಣ | ೫೭೩ |
| ತಮಿಳುನಾಡು | ೫೫೫ |
| ಪಂಜಾಬ್ | ೫೫೦ |
| ಜಾರ್ಖಂಡ್ | ೪೧೪ |
| ಅಸ್ಸಾಮ್ | ೩೯೭ |
| ಗೋವಾ | ೩೯೪ |

| | |
|---|---|
| ಮಹಾರಾಷ್ಟ್ರ | ೩೬೫ |
| ತ್ರಿಪುರಾ | ೩೫೦ |
| ಕರ್ನಾಟಕ | ೩೧೯ |
| ಆಂಧ್ರಪ್ರದೇಶ | ೩೦೮ |
| ಗುಜರಾತ್ | ೩೦೮ |
| ಒರಿಸ್ಸಾ | ೨೬೯ |
| ಮಧ್ಯಪ್ರದೇಶ | ೨೩೬ |
| ರಾಜಾಸ್ಥಾನ | ೨೦೧ |
| ಚತ್ತೀಸ್ ಘಡ | ೧೮೯ |
| ಉತ್ತರಖಂಡ | ೧೮೯ |
| ಮೇಘಾಲಯ | ೧೩೨ |
| ಹಿಮಾಚಲಪ್ರದೇಶ | ೧೨೩ |
| ಮಣಿಪುರ | ೧೨೨ |
| ನಾಗಾಲ್ಯಾಂಡ್ | ೧೧೯ |
| ಸಿಕ್ಕಿಮ್ | ೮೬ |
| ಜಮ್ಮು ಮತ್ತು ಕಾಶ್ಮೀರ | ೫೬ |
| ಮಿಜೋರಾಮ್ | ೫೨ |
| ಅಂಡಮಾನ್ ಮತ್ತು ನಿಕೋಬಾರ್ | ೪೬ |
| ಅರುಣಾಚಲ ಪ್ರದೇಶ | ೧೭ |

ಇದು ರಾಜ್ಯವಾರು ಜನದಟ್ಟಣೆಯ ಪಟ್ಟಿ. ಕರ್ನಾಟಕದ ದಟ್ಟಣೆ ಸೂಚ್ಯಂಕ ೩೧೯. ಅಂದರೆ ಪ್ರತಿ ಚದರ ಕಿಲೋಮೀಟರ್ ವ್ಯಾಪ್ತಿಯಲ್ಲಿ ವಾಸಿಸುತ್ತಿರುವ ಜನರ ಸರಾಸರಿ ಸಂಖ್ಯೆ ೩೧೯. ಭಾರತದ ಸರಾಸರಿ ಜನದಟ್ಟಣೆ ೩೬೮. ನಮಗಿಂತಾ ಜನದಟ್ಟಣೆಯಲ್ಲಿ ೧೮ ರಾಜ್ಯಗಳು ಮುಂದಿವೆ. ನಮ್ಮದು ೧೯ನೇ ಸ್ಥಾನ. ಅಂದರೆ ಕರ್ನಾಟಕದ ಇಂದಿನ ಜನದಟ್ಟಣೆಯು ರಾಷ್ಟ್ರೀಯ ಸರಾಸರಿಗಿಂತಲೂ

ಕಡಿಮೆಯಿದೆ. ಪಶ್ಚಿಮ ಬಂಗಾಳ, ಉತ್ತರ ಪ್ರದೇಶ, ಬಿಹಾರ, ತಮಿಳುನಾಡುವಿನಂತಹ ರಾಜ್ಯಗಳಲ್ಲಿ ಜನದಟ್ಟಣೆ ಕರ್ನಾಟಕದ ಎರಡು ಪಟ್ಟು ಮೂರು ಪಟ್ಟು ಹೆಚ್ಚಿವೆ. ಇದರ ಪರಿಣಾಮ ಹಳ್ಳದ ಕಡೆಗೆ ನೀರು ಹರಿಯುವಂತೆ ಕಡಿಮೆ ಜನದಟ್ಟಣೆಯ ನಾಡುಗಳಿಗೆ ಹೆಚ್ಚು ಜನದಟ್ಟಣೆಯ ನಾಡುಗಳಿಂದ ವಲಸೆ. ಅಂದರೆ ನೇರವಾಗಿ ಕರ್ನಾಟಕಕ್ಕೆ ಪರಭಾಷಿಕರ ವಲಸೆಯೇ ಆಗಿದೆ. ಆ ಮೂಲಕ ನಮ್ಮ ನಾಡಿನ ಸಂಪನ್ಮೂಲಗಳನ್ನು ಇತರರೊಂದಿಗೆ ಹಂಚಿಕೊಳ್ಳುವ ಅನಿವಾರ್ಯತೆ ನಮ್ಮದಾಗಿದೆ. ಇನ್ನು ಜಗತ್ತಿನ ಕೆಲವು ದೇಶಗಳ ಜೊತೆ ತುಲನೆ ಮಾಡೋಣ. ಈ ಒಂದು ನಕ್ಷೆ ನೋಡಿರಿ. (ಮಾಹಿತಿ ಮೂಲ: http://en.wikipedia.org/wiki/List_of_sovereign_states_and_dependent_territories_by_population_density)




ಕರ್ನಾಟಕದ ಜನದಟ್ಟಣೆ ಜಪಾನು, ಇಸ್ರೇಲುಗಳಂತಹವುಗಳಿಗಿಂತಲೂ ಕಡಿಮೆಯಿದೆ. ಸ್ವಲ್ಪ ಗಮನಿಸಿ ನೋಡಿದರೆ ಜಪಾನಿನಂತಹ ದೇಶ ತನ್ನ ಜನಸಂಖ್ಯೆಯನ್ನು ಮತ್ತಷ್ಟು ಹೆಚ್ಚಿಸಿಕೊಳ್ಳಲು ಎಷ್ಟು ಗಂಭೀರವಾದ ಪ್ರಯತ್ನಗಳನ್ನು ಮಾಡುತ್ತಿದೆಯೆಂದು ತಿಳಿಯುತ್ತದೆ. ಆ ಯಾವ ದೇಶಗಳಿಗೂ ಇಲ್ಲದ ಜನಸಂಖ್ಯಾ ಸ್ಫೋಟದ ಸಮಸ್ಯೆ ಕರ್ನಾಟಕಕ್ಕಿದೆ ಎಂದು ಯಾರಾದರೂ ಹೇಳಿದರೆ ನಂಬಬೇಕೆ? ಆ ‘ಯಾರಾದರೂ’ ಎನ್ನುವುದು ನಮ್ಮದೇ ಕೇಂದ್ರ ಮತ್ತು ರಾಜ್ಯಸರ್ಕಾರಗಳಾಗಿದ್ದಾಗಲೂ ಕೂಡಾ ನಂಬಬೇಕಾಗಿಲ್ಲ.

**ನಮ್ಮನ್ನು ಇಲ್ಲವಾಗಿಸುವ ಹುನ್ನಾರ?**

ಹೋಗಲೀ, ಕೇಂದ್ರಸರ್ಕಾರ ಕನ್ನಡಿಗರ ಈಗಿನ ಜನಸಂಖ್ಯೆಯನ್ನು ಉಳಿಸಿಕೊಂಡು ಹೋಗಬೇಕೆಂಬ ಉದ್ದೇಶವನ್ನಾದರೂ ಹೊಂದಿದೆಯೇ? ಇಲ್ಲ...ಇದು ಕನ್ನಡಿಗರ ಜನಸಂಖ್ಯೆಯನ್ನು ಇಳಿಮುಖವಾಗಿಸಬೇಕೆಂಬ ಗುರಿ ನಮಗಿತ್ತಿದೆ. ಹೌದೂ! ಇಂತಹ

**ANNEXURE 3.1.7**
**Total Fertility Rate—India and Major States**

| S. No. | State | Current Level | Eleventh Five Year Plan Goal |
|---|---|---|---|
| | India | 2.9 | 2.1 |
| 1 | Andhra Pradesh | 2.1 | 1.8 |
| 2 | Assam | 2.9 | 2.3 |
| 3 | Bihar | 4.3 | 3.0 |
| 4 | Chhattisgarh | 3.3 | 2.4 |
| 5 | Delhi | 2.1 | 1.8 |
| 6 | Gujarat | 2.8 | 2.2 |
| 7 | Haryana | 3.0 | 1.9 |
| 8 | Himachal Pradesh | 2.1 | 1.8 |
| 9 | J&K | 2.4 | 2.0 |
| 10 | Jharkhand | 3.5 | 2.5 |
| 11 | Karnataka | 2.3 | 1.8 |
| 12 | Kerala | 1.7 | 1.7 |
| 13 | MP | 3.7 | 2.6 |
| 14 | Maharashtra | 2.2 | 1.9 |
| 15 | Orissa | 2.7 | 2.1 |
| 16 | Punjab | 2.2 | 1.8 |
| 17 | Rajasthan | 3.7 | 2.6 |
| 18 | Tamil Nadu | 1.8 | 1.7 |
| 19 | UP | 4.4 | 3.0 |
| 20 | WB | 2.2 | 1.8 |

*Note:* Figures for other States are not available.
*Source:* Current level—Statistical Report, RGI (2004).

ಕ್ರಮಕ್ಕೆ ಭಾರತ ಸರ್ಕಾರದ ಜನಸಂಖ್ಯಾ ನಿಯಂತ್ರಣ ಯೋಜನೆ ಮುಂದಾಗಿದೆ ಎಂದರೆ ನಂಬಲೇ ಬೇಕಾಗಿದೆ.

ಯಾಕೆಂದರೆ ಕರ್ನಾಟಕದ ಮುಂದೆ ಕೇಂದ್ರಸರ್ಕಾರವು ಇಟ್ಟಿರುವ ಸೂಚ್ಯಂಕದ ಗುರಿ ೧.೮. ಕರ್ನಾಟಕ ಸರ್ಕಾರವೂ ತನಗೆ ತಾನೇ ವಿಧಿಸಿಕೊಂಡಿರುವ ಗುರಿ ೧.೬ ಆಗಿದ್ದು ವಿಚಿತ್ರವಾಗಿದೆ. ಈ ೧.೮ರ/ ೧.೬ರ ಗುರಿಗಳನ್ನೇನಾದರೂ ಕನ್ನಡಿಗರು ಸಾಧಿಸಿಬಿಟ್ಟರೆ ಕನ್ನಡಿಗರು ನೂರಿನ್ನೂರು ವರ್ಷಗಳಲ್ಲಿ ಭೂಪಟದಿಂದ ಮರೆಯಾಗಬೇಕಾಗುತ್ತದೆ. ಈಗಾಗಲೇ ೨.೩ರಷ್ಟು ಸೂಚ್ಯಂಕ ಸಾಧಿಸಿರುವ, ೩೧೯ರ ಜನದಟ್ಟಣೆಯನ್ನು ಹೊಂದಿರುವ ಕರ್ನಾಟಕಕ್ಕೆ ೨.೧ಕ್ಕಿಂತ ಕೆಳಗಿನ ಗುರಿಯನ್ನು ಕೊಟ್ಟಿರುವುದರ ಉದ್ದೇಶವೇನಿರಬಹುದು? ಜನರಿಂದ ತುಂಬಿ ತುಳುಕುತ್ತಿರುವ ಉತ್ತರದ ಹಿಂದೀಭಾಷಿಕ ಪ್ರದೇಶಗಳಾದ ಬಿಹಾರ, ಉತ್ತರಪ್ರದೇಶ ಮೊದಲಾದ ಈಗಾಗಲೇ ಹೆಚ್ಚಿನ ಬಹಳ ಜನದಟ್ಟಣೆಯಿರುವ, ಹೆಚ್ಚಿನ ಫಲವತ್ತತೆ ಸೂಚ್ಯಂಕವಿರುವ ರಾಜ್ಯಗಳಿಗೆ ನೀಡಿರುವ ಗುರಿ ೩.೦ ಆಗಿದೆ. ಅಂದರೆ 'ಕಾಲಾಂತರದಲ್ಲಿ ದಕ್ಷಿಣ ಭಾರತೀಯರೆಲ್ಲಾ ಜನಸಂಖ್ಯೆಯ ಕುಸಿತದ ಕಾರಣದಿಂದಾಗಿ ವಿನಾಶ ಹೊಂದಿರಿ, ಉತ್ತರದ ಹಿಂದೀ ಭಾಷಿಕರು ಮಕ್ಕಳು ಮರಿ ಹುಟ್ಟಿಸಿಕೊಂಡು ಮುಂದುವರಿಯಲಿ. ನಿಮ್ಮ ನಾಡಿನ ಸಂಪನ್ಮೂಲಗಳನ್ನೆಲ್ಲಾ ಅವರು ಬದುಕಲು ಬಿಟ್ಟುಕೊಡಿ' ಅಂದಂತಾಯಿತಲ್ಲಾ?

**ಸರಿಯಾದ 'ಜನಸಂಖ್ಯಾ ಸ್ಫೋಟ ನಿಯಂತ್ರಣ' ಕ್ರಮ ಹೀಗಿರಲಿ!**

ಭಾರತವು ನಾನಾ ಭಾಷಿಕ ಜನಾಂಗಗಳ ತವರಾಗಿದೆಯಷ್ಟೇ ಅಲ್ಲದೆ ನಾನಾ ತೆರನಾದ ಭೌಗೋಳಿಕ ವೈವಿಧ್ಯತೆಗಳನ್ನೂ ಹೊಂದಿದೆ. ಇಲ್ಲಿ ಸಹಜವಾಗಿಯೇ ಒಂದು ಪ್ರದೇಶಕ್ಕೂ ಮತ್ತೊಂದಕ್ಕೂ, ಒಂದು ಜನಾಂಗಕ್ಕೂ ಮತ್ತೊಂದಕ್ಕೂ ಜನಸಂಖ್ಯಾ ದಟ್ಟಣೆಯ ಪ್ರಮಾಣದಲ್ಲಿ ವ್ಯತ್ಯಾಸವಿದೆ. ಹಾಗಾಗಿ ಜನಸಂಖ್ಯಾ ನಿಯಂತ್ರಣವೆನ್ನುವ ಅಸ್ತ್ರವನ್ನು ವಿವೇಚನೆಯೊಂದಿಗೆ ಸರಿಯಾಗಿ ಪ್ರಯೋಗಿಸಬೇಕಾಗಿದೆ. ಸರಿಯಾದ ವಿಧಾನದಲ್ಲಿ ಪ್ರತಿಯೊಂದು ರಾಜ್ಯಕ್ಕೂ ೨.೧ರ ಸೂಚ್ಯಂಕವನ್ನು ಸಾಧಿಸುವ ಗುರಿಯನ್ನು ನಿಗದಿಪಡಿಸಬೇಕಾಗಿದೆ. ಯಾವ ರಾಜ್ಯ ೨.೧ರ ಗುರಿ ಮುಟ್ಟುತ್ತದೋ ಆ ರಾಜ್ಯಕ್ಕೆ ಹೆಚ್ಚು ಯೋಜನೆಗಳ, ಸಂಪನ್ಮೂಲ ಹರಿಸುವಿಕೆಯ, ತೆರಿಗೆ ವಿನಾಯತಿಯ ಪ್ರೋತ್ಸಾಹಕ ಉಡುಗೊರೆ ಕೊಡುವ ಮೂಲಕ ಗುರಿ ಸಾಧನೆಯತ್ತ ದಾಪುಗಾಲಿಡಬಹುದಾಗಿದೆ. ಒಮ್ಮೆ ಒಂದು ರಾಜ್ಯ ಗುರಿ ಸಾಧಿಸಿದೆಯೆಂದ ಮೇಲೆ ಆ ರಾಜ್ಯದಲ್ಲಿನ್ನು ಜನಸಂಖ್ಯಾ ನಿಯಂತ್ರಣ ಪ್ರಚಾರಾಂದೋಲನಗಳಿಗೆ ಕೊನೆ ಹಾಡಬಹುದಾಗಿದೆ. ಆದರೆ ಇಂದು ಭಾರತ ಸರ್ಕಾರ ಅನುಸರಿಸುತ್ತಿರುವ ನೀತಿ ಒಂದು ಕಣ್ಣಿಗೆ ಬೆಣ್ಣೆ ಮತ್ತೊಂದಕ್ಕೆ ಸುಣ್ಣ

ಸುರಿಯುವಂತಿದ್ದು ಕೆಲಜನಾಂಗಗಳನ್ನು ವಿನಾಶದೆಡೆಗೆ ತಳ್ಳುತ್ತಿದೆ. ಕಾಲಾಂತರದಲ್ಲಿ ಇವು ಹೇಳಹೆಸರಿಲ್ಲದಂತೆ ನಿರ್ನಾಮವಾಗಿಬಿಡುತ್ತವೆ. ಕಾಕತಾಳಿಯವೋ ಏನೋ, ಈ ಜನಾಂಗಗಳಲ್ಲಿ ಹೆಚ್ಚಿನವು ದಕ್ಷಿಣ ಭಾರತದ್ದಾಗಿವೆ, ಹಿಂದೀಯೇತರ ಭಾಷಾ ಜನಾಂಗಗಳಾಗಿವೆ. ಭಾರತ ಬಹಳ ದೊಡ್ಡದು, ಹಾಗಾಗಿ ಕೇಂದ್ರಸರ್ಕಾರಕ್ಕೆ ನಾವು ಕಾಣಿಸದೇ ಇರಬಹುದು. ಆದರೆ ನಮ್ಮ ಹಿತ ಕಾಯಲೆಂದೇ ಅಸ್ತಿತ್ವದಲ್ಲಿರುವ ರಾಜ್ಯಸರ್ಕಾರಕ್ಕೆ, ರಾಜ್ಯದ ಆಡಳಿತ ಯಂತ್ರಕ್ಕೇನೂ ಬರಬಾರದ ದೊಡ್ಡರೋಗ ಬಂದಿಲ್ಲವಲ್ಲಾ? ಇವರು ಒಟ್ಟು ಫಲವತ್ತತೆ ಸೂಚ್ಯಂಕವನ್ನು ಯಾವ ಕಾರಣಕ್ಕೂ ೨.೧ಕ್ಕಿಂತ ಕೆಳಗಿಳಿಸಲು ಯೋಜಿಸುವುದಾಗಲೀ, ಒಪ್ಪುವುದಾಗಲೀ ಮಾಡಬಾರದಲ್ಲಾ? ಅಂತರರಾಜ್ಯ ಅನಿಯಂತ್ರಿತ ವಲಸೆ ತಡೆಗಾಗಿ ಕಾಯ್ದೆ ರೂಪಿಸುವಂತೆ ಕೇಂದ್ರದ ಮೇಲೆ ಒತ್ತಡ ಹೇರಬಹುದಲ್ಲ? ನಮ್ಮಂತೇ ಸವೆಯುತ್ತಿರುವ ರಾಜ್ಯಗಳನ್ನು ಒಗ್ಗೂಡಿಸಿ ಸರಿಯಾದ ನೀತಿಯನ್ನು ರೂಪಿಸುವಂತೆ ಹಟ ಹಿಡಿಯಬಹುದಲ್ಲಾ? ಕಡೇ ಪಕ್ಷ ಗುಜರಾತಿನಂತೆ ಕರ್ನಾಟಕಕ್ಕೆ ೨.೨ನ್ನಾದರೂ ಸೂಚ್ಯಂಕ ಗುರಿಯಾಗಿಸಲು ಲಾಬಿ ಮಾಡಬಹುದಲ್ಲಾ? ಎಂದು ಅನ್ನಿಸದಿರದು.

# ಹಿಂದೀಹೇರಿಕೆಯ ಪರಿಣಾಮಗಳು



# ಅಧ್ಯಾಯ – ೫

# ಕನ್ನಡಿಗರ ಬದುಕಿನ ಮೇಲೆ ಹಿಂದೀಹೇರಿಕೆಯ ಪರಿಣಾಮಗಳು

ಭಾರತದ ಭಾಷಾನೀತಿಯನ್ನು ರೂಪಿಸಿ ಆ ಮೂಲಕ ಹಿಂದೀಯನ್ನು ದೇಶದ ಮೂಲೆಮೂಲೆಯಲ್ಲಿ ಹರಡುವ ಕೇಂದ್ರಸರ್ಕಾರದ ಪ್ರಯತ್ನಗಳಿಗೆ ಜನರಿಂದ ವಿರೋಧ ಬಾರದಂತೆ ತಡೆಯಲು ಏನೆಲ್ಲಾ ಪ್ರಚಾರ ಮಾಡಲಾಗುತ್ತಿದೆ? ಯಾವೆಲ್ಲಾ ಕಾರಣಗಳನ್ನು ನೀಡಿ ಹಿಂದೀ ಕಲಿಕೆ ಹಾಗೂ ಬಳಕೆ ಅಗತ್ಯ ಎನ್ನಲಾಗುತ್ತಿದೆ? ಈ ನಂಬಿಕೆಗಳು ಎಷ್ಟು ನಿಜಾ?

## ಕನ್ನಡಿಗರ ಮೇಲೆ ಹಿಂದೀಹೇರಿಕೆಯ ಪರಿಣಾಮಗಳು

ನಮ್ಮ ಬದುಕಿನ ಮೇಲೆ ಭಾರತದ ಭಾಷಾನೀತಿಯ ಕಾರಣದಿಂದಾಗುತ್ತಿರುವ ಹಿಂದೀ ಹೇರಿಕೆಯು ಏನೆಲ್ಲಾ ಪರಿಣಾಮಗಳನ್ನು ಉಂಟುಮಾಡುತ್ತಿದೆ ಎಂಬುದರ ಬಗ್ಗೆ ನೋಡೋಣ. ಒಂದು ಸರಿಯಾದ ವ್ಯವಸ್ಥೆಯಲ್ಲಿ, ಒಂದು ನಾಡಿನಲ್ಲಿ ಹುಟ್ಟಿ ಬೆಳೆದವನೊಬ್ಬನಿಗೆ ತನ್ನ ನಾಡಿನ ಪ್ರತಿಯೊಂದು ವ್ಯವಸ್ಥೆಯೂ ತನ್ನದೇ ನುಡಿಯಲ್ಲಿ ಸಿಗಬೇಕೆನ್ನುವುದು ಸಹಜವಾಗಿದೆ. ಅಂದರೆ ಆ ನಾಡಿನ ಯಾವ ಮೂಲೆಗೇ ಹೋದರೂ, ಯಾವ ಅಂಗಡಿ–ಮುಂಗಟ್ಟು, ಇಲಾಖೆ–ಕಛೇರಿ–ಸಂಸ್ಥೆಗೆ ಹೋದರೂ, ಬಸ್ಸು–ರೈಲು–ವಿಮಾನ–ಟಾಕೀಸು–ಆಸ್ಪತ್ರೆಯಂತಹ ಸಾರ್ವಜನಿಕ ಸ್ಥಳಗಳಿಗೆ ಹೋದರೂ... ಯಾವುದೇ ಅಳುಕು–ತೊಡಕು–ಕೀಳರಿಮೆಯಿಲ್ಲದೆ ತನ್ನ ನುಡಿಯಲ್ಲಿಯೇ ವ್ಯವಹರಿಸಿಕೊಂಡು ಬರುವಂತಹ ವ್ಯವಸ್ಥೆಯನ್ನು ಕಟ್ಟಬೇಕಾದದ್ದು ಸರಿಯಾದ ವಿಧಾನ. ಇದೇ ನಿಜವಾದ ಪ್ರಜಾಪ್ರಭುತ್ವದ ಅರ್ಥ. ಆದರೆ ಭಾರತದಲ್ಲಿಂದು ಅಂತಹ ಒಂದು ಸಹಜವೂ ಸರಿಯಾಗಿರುವುದೂ ಆದ ವ್ಯವಸ್ಥೆಯ ನಿರ್ಮಾಣಕ್ಕೆ ತೊಡಕಾಗಿರುವುದು ಭಾರತದ ಭಾಷಾನೀತಿ.



ಸಂಯುಕ್ತ ಕರ್ನಾಟಕ ೦೮.೧೨.1967

# ಹಿಂದಿಯು ಬಗ್ಗೆ ಬಲವಂತವಿಲ್ಲ

ನವದೆಹಲಿ, ಡಿ. ೬—ಶಿಕ್ಷಣ ಕ್ಷೇತ್ರದಲ್ಲಿ ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಜಾರಿಗೆ ತರುವ ನೆಪದಲ್ಲಿ ಹಿಂದಿಯನ್ನು ಇತರರ ಮೇಲೆ ಬಲವಂತವಾಗಿ ಹೇರಲು ಪ್ರಯತ್ನಿಸುವುದಿಲ್ಲವೆಂದು ಶಿಕ್ಷಣ ಸಚಿವ ಡಾ|| ತ್ರಿಗುಣಸೇನ್ ಇಂದು ಲೋಕಸಭೆಯಲ್ಲಿ ಭರವಸೆಯಿತ್ತರು.

ಭಾಷಾ ವಿಧೇಯಕ ಜಾರಿಗೆ ಬರುವುದರಿಂದ ಪ್ರಾದೇಶಿಕ ಭಾಷೆಗಳು ಉನ್ನತ ಶಿಕ್ಷಣದಲ್ಲಿ ಮಾಧ್ಯಮವಾಗಿ ಬಳಸಲು ಅವಕಾಶವಾಗುವುದು ಮತ್ತು, ಹಿಂದಿಯೇತರರ ಹಿತವನ್ನು ರಕ್ಷಿಸಲಾಗುವುದು ಎಂದರು.

ಈ ಬಗ್ಗೆ ಚರ್ಚೆ ನಡೆದ ಸಮಯದಲ್ಲಿ ಜನಸಂಘ ಮತ್ತು ಕಮ್ಯೂನಿಸ್ಟ್ ಸದಸ್ಯರುಗಳು ಭಾಷಾ ವಿಧೇಯಕಕ್ಕೆ ಬೆಂಬಲ ನೀಡಿದರು ಮತ್ತು ಬಡವ ಬಲ್ಲಿದ [illegible] ಯಾವ ತಾರತಮ್ಯವೂ ಇಲ್ಲದೇ ಸರ್ವರಿಗೂ ಉತ್ತಮ ಶಿಕ್ಷಣ ಪಡೆಯಲು ಅವಕಾಶ ಸಿಗುವುದೆಂದು ಅಭಿಪ್ರಾಯಪಟ್ಟರು

ಈ ಚಿತ್ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ ೦೮.೧೨.೧೯೬೭ರಂದು ಪ್ರಕಟವಾಗಿದ್ದ ಒಂದು ಸುದ್ದಿಯದು. ಉನ್ನತ ಮಾಧ್ಯಮದಲ್ಲಿ ಪ್ರಾದೇಶಿಕ ಭಾಷೆಗಳು ಬರುವುದೆಂದೂ, ಹಿಂದೀ ಹೇರುವುದಿಲ್ಲವೆಂದೂ ಅಂದು ಸಚಿವರಾದ ಶ್ರೀ. ತ್ರಿಗುಣಸೇನ್ ನೀಡಿದ್ದ ಹೇಳಿಕೆಯನ್ನೇ ಇಂದೂ ನಮ್ಮ ಕೇಂದ್ರದ ನಾಯಕರುಗಳು ಹೇಳುತ್ತಿರುವುದು. ಆದರೆ ವಾಸ್ತವವೇ ಬೇರೆ!

ನಮ್ಮ ಕೇಂದ್ರಸರ್ಕಾರವು ಕೂಡಾ ಅಂದಿನಿಂದಲೂ ಹಿಂದೀ ಹೇರಿಕೆಯನ್ನು ಮಾಡುವುದಿಲ್ಲ ಎಂದು ಹೇಳುತ್ತಲೇ ಬಂದಿವೆ. ಆದರೆ ವಾಸ್ತವ ಏನಿದೆ? ಹೇಗೆ ಭಾರತದ ಭಾಷಾನೀತಿ ಉಳಿದ ಭಾಷೆಗಳನ್ನು ನುಂಗುತ್ತಿವೆ ಎಂಬುದನ್ನು ನೀವೇ ನೋಡಿ. ಇವುಗಳನ್ನು ನೋಡಿದಾಗ ನಮಗೆ ಹಿಂದೀಯನ್ನು ಒಪ್ಪಿಸಲಾಗುತ್ತಿದೆಯೋ ಹೇರಲಾಗುತ್ತಿದೆಯೋ ತಿಳಿಯುತ್ತದೆ. ನಮ್ಮ ಬದುಕಿನ ಪ್ರಮುಖ ಅಂಗಗಳಾದ, ನಮ್ಮ ಏಳಿಗೆಗೆ ಅತ್ಯಗತ್ಯ ಸಾಧನಗಳಾದ ಕಲಿಕೆ, ದುಡಿಮೆ, ಆಡಳಿತ, ಗ್ರಾಹಕಸೇವೆಗಳಲ್ಲಿ... ನಮ್ಮ ಮನರಂಜನೆಯಲ್ಲಿ ಹೆಜ್ಜೆಹೆಜ್ಜೆಗೂ ಹೇಗೆ ವ್ಯವಸ್ಥಿತವಾಗಿ ಹಿಂದೀಯನ್ನು ಹೇರಲಾಗುತ್ತಿದೆಯೆನ್ನುವುದನ್ನು ಗಮನಿಸಿ ನೋಡಿ.

## ಕೇಂದ್ರಸರ್ಕಾರಿ ನೌಕರಿ ಬೇಕೆ? ಹಿಂದೀ ಕಲೀರಿ...

ಇಂದಿನ ಭಾರತದ ಭಾಷಾನೀತಿಯಿಂದಾಗಿ ಹುಟ್ಟಿಕೊಂಡಿರುವ ಕಟ್ಟುಪಾಡುಗಳ ಕಾರಣದಿಂದಾಗಿ ಕನ್ನಡಿಗರಿಗೆ ಕೇಂದ್ರಸರ್ಕಾರಿ ಉದ್ಯಮಗಳಲ್ಲಿ, ಕಛೇರಿಗಳಲ್ಲಿ ನೌಕರಿ ಬೇಕೆಂದರೆ ಹಿಂದೀಯ ಅರಿವಿರಬೇಕಾದ್ದು ಕಡ್ಡಾಯವೆನ್ನುವಂತೆ ನಮ್ಮ ನಾಡಿನಲ್ಲಿ ಸನ್ನಿವೇಶವಿದೆ. ಒಂದೆಡೆ ಸಂವಿಧಾನದಲ್ಲಿ ೮ನೇ ಶೆಡ್ಯೂಲಿನ ಎಲ್ಲಾ ಭಾಷೆಗಳಲ್ಲಿ ಪ್ರವೇಶ ಪರೀಕ್ಷೆಗಳನ್ನು ನಡೆಸಬೇಕೆಂದರೂ ವಾಸ್ತವವಾಗಿ ಬ್ಯಾಂಕು, ಕೇಂದ್ರಸರ್ಕಾರಿ ಉದ್ದಿಮೆಗಳು, ಎಲ್ಲೇ ಆಗಲೀ... ಯಾವುದೇ ಹಂತದ ಹುದ್ದೆಯಾಗಿರಲಿ ಹಿಂದೀ ಕಲಿಯದಿದ್ದರೆ ಕೆಲಸ ಸಿಗುವುದಿಲ್ಲ ಎನ್ನುವಂತಹ ಪರಿಸ್ಥಿತಿಯಿದೆ.

## ಬ್ಯಾಂಕಿನ ನೌಕರಿ ಸೇರಲು ಇರುವ ಕಟ್ಟುಪಾಡು

ಮಣಿಪಾಲ ಮೂಲದ ಸಿಂಡಿಕೇಟ್ ಬ್ಯಾಂಕಿನವರು ಜುಲೈ ೧೨, ೨೦೦೭ರಲ್ಲಿ ನೇಮಕಾತಿಗಾಗಿ ಹೊರಡಿಸಿರುವ PD/HRDD/REC/೪೮೩ ಆದೇಶದಲ್ಲಿ ಸಂದರ್ಶನಕ್ಕೆ ಬರುವ ಅಭ್ಯರ್ಥಿಗಳಿಗೆ ಸೂಚನೆ ನೀಡಿದ್ದಾರೆ. ಅದರಲ್ಲಿ ಈ ರೀತಿ ಬರೆಯಲಾಗಿದೆ:

> *11. Working Knowledge of Hindi is essential. The candidates should have studied Hindi as one of the subjects till Secondary School level. The relevant mark sheet containing Hindi as one of the subjects should be highlighted.*

(ಆಧಾರ: http://www.syndicatebank.in/downloads/SYNDBK-ANMENT-CLERK-RECMENT-2007.PDF)

ಹೀಗೆಂದರೆ ನೀವು ಕನ್ನಡಿಗರಾಗಿದ್ದಲ್ಲಿ.. ನಿಮ್ಮ ಶಾಲಾ ಕಲಿಕೆಯಲ್ಲಿ ಹಿಂದೀ ಭಾಷೆಯನ್ನು ಕಲಿಯದೇ ಇದ್ದಲ್ಲಿ ನೀವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ಅನರ್ಹರು ಎಂಬುದಾಗಿದೆ. ಈಗ ಹೇಳಿ, ಹಿಂದೀ ಭಾಷೆಯನ್ನು ಕನ್ನಡಿಗರ ಮೇಲೆ ಹೇರಲಾಗುತ್ತಿದೆಯೋ? ಒಪ್ಪಿಸಲಾಗುತ್ತಿದೆಯೋ?

ಕನ್ನಡಿಗರಿಗೆ 'ಇದು ಹಿಂದೀಯನ್ನೋ, ಹಿಂದೀಯಂತಹ ಮತ್ತೊಂದು ಭಾಷೆಯನ್ನೋ ತಾಯ್ನುಡಿಯಾಗಿ ಹೊಂದಿರುವ ಉತ್ತರ ಭಾರತದ ರಾಜ್ಯಗಳ ಜನರನ್ನು ನಮ್ಮ ನಾಡುಗಳಿಗೆ ವಲಸೆ ಮಾಡಿಸಿ... ಬ್ಯಾಂಕುಗಳಲ್ಲಿ ತುಂಬಲಿಕ್ಕೆ ಮಾಡಿದ ಸಂಚು' ಎನ್ನಿಸುವುದಿಲ್ಲವೇ? ಇದು, ಕನ್ನಡಿಗರಿಗೆ ಹಿಂದೀ ಭಾಷೆ ಹೇಗಿದ್ದರೂ ಬರುವುದಿಲ್ಲ, ಹಾಗಾಗಿ ಈ ಜನರಿಗೆ ಬ್ಯಾಂಕಿನ ಕೆಲಸಕ್ಕೆ ಬೇಕಾದ ಅರ್ಹತೆಯಿಲ್ಲ ಎಂದು ಸುಲಭವಾಗಿ ಹಿಂದೆ ತಳ್ಳಲು ಮಾಡಿರುವ ಸಂಚಲ್ಲದೆ ಮತ್ತೇನು? ಎನ್ನಿಸುವುದು ಸಹಜವಾಗಿದೆ.

## ನೈಋುತ್ಯ ರೈಲ್ವೇಯಲ್ಲಿ ನೌಕರಿ ಸೇರಲು ಇರುವ ನಿಯಮ

ಹುಬ್ಬಳ್ಳಿಯಲ್ಲಿ ರೈಲ್ವೇ ಇಲಾಖೆಯವರು 'ಡಿ' ಕೆಲಸಗಳಿಗೆ ಅರ್ಜಿಗಳನ್ನ ಕರೆದದ್ದು ಹೀಗೆ:

> *Candidate should carefully read the instructions in this Employment Notice before filling up the application form. Application (including Personal Data Sheet) should be made on a good quality white paper of **A4 size** (210mm x 297mm) using ONE SIDE ONLY. The candidate should use the **FORMAT** published in the Employment Notice. The candidates have to fill up required information with Black Ink Pen/Black Ball Point pen in his/ her **own handwriting**. **The application should be written only in English or Hindi and not in any other language. The application has to be duly dated and signed by the candidate.** Application filled in any language other than Hindi/English, and by any person other than the applicant, and having any change in the format will be rejected summarily.*

ಈ ಹುದ್ದೆಗಳು 'ಡಿ' ದರ್ಜೆಯ ಹುದ್ದೆಗಳು. ಇದಕ್ಕೆ ಬೇಕಿರುವ ವಿದ್ಯಾರ್ಹತೆ ಎಂಟನೇ ತರಗತಿ. ಈಗ ಯೋಚಿಸಿ, ಎಂಟನೇ ತರಗತಿಯವರೆಗೆ ಮಾತ್ರಾ ಓದಿರುವ ಎಷ್ಟು ಜನ ಕನ್ನಡಿಗನಿಗೆ ಹಿಂದೀ/ ಇಂಗ್ಲೀಶ್ ಭಾಷೆಯಲ್ಲಿ ಅರ್ಜಿ ಬರೆಯಲು ಸಾಧ್ಯ? ಹೋಗಲೀ, ಬಲ್ಲವರಿಂದ ಬರೆಸುವಂತೆಯೂ ಇಲ್ಲ. ತಮ್ಮ ಕೈಬರಹದಲ್ಲೇ ಬರೆಯಬೇಕು ಅನ್ನುತ್ತದೆ ಈ ಜಾಹೀರಾತು. ಇವರು ಯಾವ ವರ್ಗದ ಅಭ್ಯರ್ಥಿಗಳನ್ನು ಕರೆದಿರುತ್ತಾರೋ ಆ ಕನ್ನಡಿಗರಿಗೆ ಇಂಗ್ಲೀಷಾಗಲಿ ಹಿಂದೀಯಾಗಲಿ ಬರುವ ಸಾಧ್ಯತೆಗಳೇ ಕಡಿಮೆ. ಒಟ್ಟಿನಲ್ಲಿ ಇದು, ಕರೆದ ಹಾಗೆ ಮಾಡಿ ಮೊದಲನೇ ಹೆಜ್ಜೆಯಿಂದಾನೇ ಕನ್ನಡಿಗರನ್ನು ದೂರ ಇಡುವ ಹುನ್ನಾರವಲ್ಲದೆ ಮತ್ತೇನು? ಯಾರಿಗೆ ಕಲಿಕೆ ಹಿಂದೀಯಲ್ಲಾಗಿರುತ್ತದೋ, ಯಾರ ತಾಯ್ನುಡಿ ಹಿಂದೀಯಾಗಿರುತ್ತದೋ ಅವರಿಗೆ ಮಾತ್ರವೇ ಈ ಅವಕಾಶ ಎನ್ನುವುದನ್ನು ನೇರವಾಗಿ ಹೇಳದೆ ಹೀಗೆ ಹೇಳಿದ್ದಾರೆ ಎನ್ನಿಸುವುದಿಲ್ಲವೇ?

**ಮುಂದೆ ನಡೆದ ಹೋರಾಟ ಮತ್ತು ಫಲಿತಾಂಶ:**

ನಂತರದ ದಿನಗಳಲ್ಲಿ ಈ ಅನ್ಯಾಯದ ವಿರುದ್ಧವಾಗಿ ದನಿಯೆತ್ತಿ ಹೋರಾಟದ ಕಣಕ್ಕೆ ಧುಮುಕಿದ್ದು ಕರ್ನಾಟಕ ರಕ್ಷಣಾ ವೇದಿಕೆ. ನೇಮಕಾತಿ ಪರೀಕ್ಷೆಗೆ ಉತ್ತರದಿಂದ ಪುಗಸಟ್ಟೆ ರೈಲಲ್ಲಿ ಜನರನ್ನು ತುಂಬಿಕೊಂಡು ಬಂದಾಗ ಈ ಹೋರಾಟ ಉಗ್ರಸ್ವರೂಪ ಪಡೀತು. ನೈಋತ್ಯ ರೈಲ್ವೇ ಕಛೇರಿಗೆ ಮುತ್ತಿಗೆ ಹಾಕಿದಾಗ ರೈಲು ಇಲಾಖೆ ಎಚ್ಚೆತ್ತುಕೊಂಡು ಇಡೀ ನೇಮಕಾತಿ ಪ್ರಕ್ರಿಯೆಯನ್ನು ಮುಂದೂಡಿತು. ಇಂಥದೇ ಹೋರಾಟ ಕರ್ನಾಟಕದಿಂದಲೇ ಪ್ರೇರಣೆ ಪಡೆದ ಹಾಗೆ ಮಹಾರಾಷ್ಟ್ರದಲ್ಲೂ... ಭಾರತದ ಬೇರೆಬೇರೆ ಕಡೆಗಳಲ್ಲೂ ನಡೀತು. ಆ ನಂತರದ ರಾಜಕೀಯ ಬದಲಾವಣೆಗಳಲ್ಲಿ ಕೇಂದ್ರಸರ್ಕಾರದಲ್ಲಿ ಹೊಸ ಸರ್ಕಾರ, ಹೊಸ ಮಂತ್ರಿಗಳು ಬಂದರು. ತೃಣಮೂಲ ಕಾಂಗ್ರೆಸ್ಸಿನ ಶ್ರೀಮತಿ. ಮಮತಾ ಬ್ಯಾನರ್ಜಿಯವರು ಕನ್ನಡಿಗರ ಹೋರಾಟಕ್ಕೆ ಗೌರವ ನೀಡಿ ಒಂದೊಳ್ಳೆಯ ನಿರ್ಧಾರವನ್ನು ಘೋಷಿಸಿದ್ದಾರೆ. ಇದರಂತೆ ಇನ್ನು ಮುಂದೆ ರೈಲ್ವೇ ಪರೀಕ್ಷೆಗಳನ್ನು ಕನ್ನಡದಲ್ಲಿಯೇ ಬರೆಯಬಹುದು. ದೇಶದ ಎಲ್ಲೆಡೆ ಒಟ್ಟಿಗೆ ಪರೀಕ್ಷೆಗಳನ್ನು ನಡೆಸುವುದರಿಂದ ಬೇರೆ ರಾಜ್ಯದಿಂದ ಇಲ್ಲಿಗೆ ಬರುವವರ ಸಂಖ್ಯೆ ಕಡಿಮೆ ಆಗುವ ಸಾಧ್ಯತೆ ಇದೆ. ಅಲ್ಲದೆ ಸ್ಥಳೀಯರಿಗೆ ಆದ್ಯತೆ ನೀಡುವುದಕ್ಕೂ ರೈಲ್ವೇ ಮುಂದಾಗಿರೋದು ಸರಿಯಾದ ಒಪ್ಪುಕೂಟದೆಡೆಗಿನ ಹೆಜ್ಜೆಯಾಗಿದೆ. ಈ ಬದಲಾವಣೆಗಳು ಎಷ್ಟು ಪರಿಣಾಮಕಾರಿಯೆನ್ನುವುದನ್ನು ಕಾಲವೇ ನಿರ್ಧರಿಸಲಿದೆ.

## ಬರೀ ರೈಲಲ್ಲ! ಎಲ್ಲ ನೇಮಕಾತಿಗಳೂ ಹೀಗಾಗಬೇಕು.

ಇದು ಬರೀ ರೈಲು ಇಲಾಖೆಯಲ್ಲಾದ ಬದಲಾವಣೆಯಲ್ಲ. ಇದರಿಂದ ಕೇಂದ್ರಸರ್ಕಾರದ ಕೆಲಸಗಳಲ್ಲಿ ಇನ್ಮುಂದೆ ಸ್ಥಳೀಯರಿಗೆ ಆದ್ಯತೆ ಕೊಡಬೇಕು, ಆಯಾ ಪ್ರದೇಶಗಳ ಭಾಷೆಗಳಲ್ಲೇ ಪರೀಕ್ಷೆ ಬರೆಯೋ ಜನರ ಹಕ್ಕನ್ನ ಮಾನ್ಯ ಮಾಡಬೇಕು. ಬ್ಯಾಂಕಿರಲಿ, ಸೈನ್ಯವಿರಲಿ ಎಲ್ಲಾ ಕಡೆಯ ಪರೀಕ್ಷೆಗಳು ಆಯಾ ರಾಜ್ಯಗಳ ಭಾಷೆಯಲ್ಲಿ ನಡೀಬೇಕು.

## ಬ್ಯಾಂಕಿನ ಪ್ರವೇಶ ಪರೀಕ್ಷೆಯಲ್ಲಿ ಹಿಂದೀ ಭಾಷಿಕರಿಗೆ ಅನುಕೂಲ!

ಭಾರತೀಯ ಸ್ಟೇಟ್ ಬ್ಯಾಂಕಿನ ಬೆಂಗಳೂರು ವೃತ್ತದಲ್ಲಿ ಅಂದ್ರೆ ಕರ್ನಾಟಕದ ವ್ಯಾಪ್ತಿಯಲ್ಲಿ ಖಾಲಿಯಿದ್ದ ೮೦೦ ಗುಮಾಸ್ತರ ಹುದ್ದೆಗಳನ್ನು ತುಂಬಲಿಕ್ಕೆ ಬ್ಯಾಂಕು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಕರೆದಿದ್ದರು. ಈ ಮೂಲಕ ಕರ್ನಾಟಕದ ೮೦೦ ನಿರೋದ್ಯೋಗಿಗಳಿಗೆ ಕೆಲಸ ಸಿಕ್ಕಿರಬಹುದು ಎಂದು ನಾವಂದುಕೊಂಡಿದ್ದರೆ ದಡ್ಡರಾಗುತ್ತೇವೆ.

ಈ ನೇಮಕಾತಿ ಮಾಡಿಕೊಳ್ಳಲು ಅಭ್ಯರ್ಥಿಗಳು ಹಲವಾರು ಅರ್ಹತೆಗಳನ್ನು ಹೊಂದಿರಬೇಕು ಎಂದು ಬ್ಯಾಂಕ್ ನೇಮಕಾತಿ ಮಾಡುವವರು ನಿಗದಿ ಮಾಡಿದಾರೆ. ಇದರಲ್ಲಿ ಸ್ಥಳೀಯ ಭಾಷೆ ಗೊತ್ತಿರುವುದು ಒಂದು "ಅಡಿಷನಲ್ ಕ್ವಾಲಿಟಿ" ಅಂದರೆ ಹೆಚ್ಚುವರಿ ಅರ್ಹತೆಯಂತೆ. ಇಂಗ್ಲೀಷಿನ ಅರಿವು ಕಡ್ಡಾಯವಂತೆ. ಹಾಗೆಂದು ಜಾಹೀರಾತಿನಲ್ಲಿ ಹಾಕಿದ್ದಾರೆ.

"ತಪ್ಪೇನಿದೆ ಇದರಲ್ಲಿ? ಇಂದು ಬ್ಯಾಂಕುಗಳೆಲ್ಲಾ ಕೆಲಸಾ ಮಾಡುವುದು ಇಂಗ್ಲಿಶಿನಲ್ಲಲ್ವಾ?" ಎಂದು ಕೇಳುವಿರೇನೋ? ಹಾಗಾದರೆ ಹಿಂದೀ ಭಾಷೆಯೋರಿಗೆ ಯಾಕೆ ಮತ್ತೊಂದು ವಿಶೇಷ ಸವಲತ್ತು ಕೊಡುತ್ತಿದ್ದಾರೆ ಇವರು? ಎಂದು ಹುಬ್ಬೇರುವಂತೆ ಮುಂದಿನ ಸಾಲುಗಳಲ್ಲಿ ಬರೆದಿದ್ದಾರೆ.

Pagers or any other instrument in the Examination Hall.

(vi) The candidate will have option to answer written test questions in Hindi or English except in General English paper and opt for Hindi at the time of interview.

(vii) The candidates will have to appear for the tests/interviews at their own cost. SC/ST/

ಈ ಬ್ಯಾಂಕಿಂಗ್ ಪರೀಕ್ಷೆ ಪ್ರಶ್ನೆಪತ್ರಿಕೆಗಳು ಇಂಗ್ಲಿಷ್ ಮತ್ತು ಹಿಂದೀಭಾಷೆಯಲ್ಲಿ ಇರುತ್ತವೆ. ಉತ್ತರ ಬರೆಯುವವರು ಹಿಂದೀಯಲ್ಲಿ ಬೇಕಾದರೂ ಬರೆಯಬಹುದು! ಅಕಸ್ಮಾತ್ ಉತ್ತೀರ್ಣರಾಗಿ ಸಂದರ್ಶನಕ್ಕೆ ಹೋದರೆ ಅಲ್ಲೂ ಹಿಂದೀಭಾಷೆಯನ್ನು ಅಯ್ಕೆ ಮಾಡಿಕೊಳ್ಳಬಹುದು!! ಇಂಥದ್ದೇ ರಿಯಾಯಿತಿಯನ್ನು ೨೦೧೧ರ ವಿಶೇಷ ಅಧಿಕಾರಿಗಳ ನೇಮಕಾತಿಯಲ್ಲೂ ನೀಡಿರುವುದನ್ನು ಎಸ್.ಬಿ.ಐನ ಈ ಕೊಂಡಿಯಲ್ಲಿ ನೋಡಬಹುದಾಗಿದೆ.

http://www.statebankofindia.com/webfiles/uploads/files/1307105255161_ADVT_FOR_SPECIALIST_OFFICERS_IN_SBI_2011_NEW.pdf

ಈ ಸಾಲುಗಳ ಅವಶ್ಯಕತೆ ಏನಿದೆ? ಕರ್ನಾಟಕದ ಶಾಖೆಗಳಲ್ಲಿ ಕೆಲಸಕ್ಕೆ ಸೇರುವವನಿಗೆ ಕನ್ನಡ ಕಡ್ಡಾಯವಾಗಿ ಬರಬೇಕೆಂಬ ನಿಯಮವಿಲ್ಲ. ಬ್ಯಾಂಕು ಪರೀಕ್ಷೆ ತೆಗೆದುಕೊಳ್ಳುವ ಕನ್ನಡಿಗನಿಗೆ ತನ್ನದಲ್ಲದ ಇಂಗ್ಲಿಷ್ ಅರಿವು ಕಡ್ಡಾಯ. ಆದರೆ ಹಿಂದೀ ತಾಯ್ನುಡಿಯವನಿಗೆ? ಜಾಹೀರಾತಿನಲ್ಲಿ ಇಂಗ್ಲಿಶ್ ವ್ಯವಹಾರ ಜ್ಞಾನ ಕಡ್ಡಾಯ ಎಂದಿದ್ದರೂ ಕೂಡಾ ಕೇವಲ ಇಂಗ್ಲಿಷಿನ ಒಂದು ಪ್ರಶ್ನೆಪತ್ರಿಕೆಯನ್ನು ಎದುರಿಸಿ ಪಾಸಾದರೆ ಸಾಕು, ಉಳಿದದ್ದೆಲ್ಲಾ ಹಿಂದೀಲಿ ಬರೆದು ಪಾಸಾಗಬಹುದು ಎಂದು ಇದರ ಅರ್ಥವಲ್ಲವೇ? ಹಿಂದೀಭಾಷಿಕನಿಗೆ ಬ್ಯಾಂಕಿನ ವ್ಯವಹಾರಕ್ಕೆ ಬೇಕಾಗುವ ಇಂಗ್ಲಿಶ್ ಬರದಿದ್ದರೂ, ತಾನು ವ್ಯವಹರಿಸಬೇಕಾಗಿರುವ ಜನರ ಭಾಷೆಯ ಗಾಳಿಗಂಧವೇ ಇಲ್ಲದಿದ್ದರೂ ಕೆಲಸ ಸಿಗಲಿಕ್ಕೆ ಯಾವ ಸಮಸ್ಯೆಯೂ ಇಲ್ಲ. ಇದು ನೂರುಮೀಟರ್ ಓಟದ ಸ್ಪರ್ಧೆಯಲ್ಲಿ ಹಿಂದೀಯವನನ್ನು ಎಂಬತ್ತು ಮೀಟರ್‌ನಷ್ಟು ಮುಂದೆ ನಿಲ್ಲಿಸಿ ೧, ೨, ೩ ಸ್ಟಾರ್ಟ್... ಅನ್ನುವ ಮೋಸದಾಟವಲ್ಲವೇನು? ತನ್ನೊಡಲೊಳಗಿರುವ ಎಲ್ಲಾ ನುಡಿಗಳ ಜನರನ್ನೂ ಸಮಾನವಾಗಿ ನೋಡದೆ ತಾರತಮ್ಯ ಮಾಡುತ್ತಿರುವ ಈ ವ್ಯವಸ್ಥೆ ಸರಿಯೇನು?

"ಬ್ಯಾಂಕಿನ ಕೆಲಸ ವರ್ಗಾವಣೆ ಆಗುವ ಕೆಲಸಾ, ಇಡೀ ಭಾರತದಲ್ಲಿ ಯಾವ ಮೂಲೆಗೆ ಬೇಕಾದರೂ ಪೋಸ್ಟಿಂಗ್/ ವರ್ಗ ಆಗಬಹುದು" ಅನ್ನುವ ಮಾತಿಗೆ ಮರುಳಾಗುವುದು ಬೇಕಿಲ್ಲ. ಎಲ್ಲಿಗೇ ವರ್ಗಾವಣೆಯಾದರೂ ಕೂಡಾ ಆಯಾ ಪ್ರದೇಶದ ನುಡಿಯಲ್ಲಿ ವ್ಯವಹರಿಸುವ ತರಬೇತಿಯನ್ನು ಕೊಟ್ಟು ಕಳಿಸಲಿಕ್ಕೆ ಆಗುತ್ತದೆ ಮತ್ತು ಹಾಗೆ ಮಾಡುವುದೇ ಸರಿಯಾದ ರೀತಿಯಾಗಿದೆ!

## ಭೂಸೇನಾ ನೇಮಕಾತಿಗೆ ಪ್ರಮಾಣಪತ್ರವೂ ಹಿಂದೀಯಲ್ಲಿರಬೇಕಂತೆ!

೨೦೦೮ನೇ ಅಕ್ಟೋಬರ್ ೧೩ನೇ ತಾರೀಕಿನ ವಿಜಯ ಕರ್ನಾಟಕ ದಿನಪತ್ರಿಕೆಯ ೫ನೇ ಪುಟದಲ್ಲಿ ಈ ಒಂದು ಪ್ರಕಟವಾಯಿತು. ಭೂಸೇನಾ ನೇಮಕಾತಿಯು ಹಾಸನದಲ್ಲಿ ಒಂದು ನೇಮಕಾತಿ ಶಿಬಿರವನ್ನು ನಡೆಸುತ್ತಿತ್ತು. ಈ ಶಿಬಿರದಲ್ಲಿ ಪಾಲ್ಗೊಂಡ ಅಭ್ಯರ್ಥಿಗಳು ತಮ್ಮ ತಮ್ಮ ಹುಟ್ಟಿನ, ಜಾತಿಯ, ಆದಾಯದ, ಓದಿನ ಪ್ರಮಾಣಪತ್ರಗಳನ್ನು ಸಲ್ಲಿಸಬೇಕಾಗಿತ್ತು. ಕರ್ನಾಟಕದ ಹಲವಾರು ಅಭ್ಯರ್ಥಿಗಳು ಸಲ್ಲಿಸಿದ ಪ್ರಮಾಣಪತ್ರಗಳು ಕನ್ನಡದಲ್ಲಿದ್ದವು. ಕರ್ನಾಟಕದ ಆಡಳಿತ ಭಾಷೆ ಕನ್ನಡವಾದ್ದರಿಂದ ಕರ್ನಾಟಕ ರಾಜ್ಯ ಸರ್ಕಾರ ಕೊಡಮಾಡಿದ ಪ್ರಮಾಣಪತ್ರಗಳು ಸಹಜವಾಗಿ ಕನ್ನಡದಲ್ಲೇ ಇದ್ದವು.

ಆದರೆ ಈ ಪ್ರಮಾಣಪತ್ರಗಳು ಇಂಗ್ಲೀಶ್/ ಹಿಂದೀಯಲ್ಲಿಲ್ಲ ಎನ್ನುವ ಕಾರಣ ನೀಡಿ ಅಭ್ಯರ್ಥಿಗಳ ಪ್ರಮಾಣಪತ್ರಗಳನ್ನು ಸ್ವೀಕರಿಸಲು ನಿರಾಕರಿಸಿದರಂತೆ. ಕಾರಣವೇನೆಂದರೆ ಕೇಂದ್ರಸರ್ಕಾರಿ ನೌಕರಿಗೆ ಹಿಂದೀ/ ಇಂಗ್ಲೀಶಿನಲ್ಲಿ ಮಾತ್ರಾ ಪ್ರಮಾಣಪತ್ರಗಳಿರಬೇಕಂತೆ. ಹೀಗಂದವರೇ ಅಭ್ಯರ್ಥಿಗಳನ್ನು ಹೊರಗಡೆ ಮೂಲೆಯಲ್ಲಿ ಕೂರಿಸಿದರಂತೆ. ಆಮೇಲೆ ಅಭ್ಯರ್ಥಿಗಳು ಗಲಾಟೆ ಮಾಡಿದ ನಂತರ ಕನ್ನಡದ ಪ್ರಮಾಣಪತ್ರಗಳನ್ನೂ ಒಪ್ಪಿಕೊಂಡರಂತೆ. ಅಷ್ಟು ಹೊತ್ತಿಗೆ ಅದೆಷ್ಟೋ ಅಭ್ಯರ್ಥಿಗಳು ಅಲ್ಲಿಂದೆದ್ದು ಮನೆಗೆ ಹೋಗಿದ್ದರಂತೆ.

'ಕನ್ನಡದ ಪ್ರಮಾಣಪತ್ರಗಳನ್ನು ಒಪ್ಪುವುದಿಲ್ಲ' ಎನ್ನಿಸಿಕೊಂಡ ಕನ್ನಡಿಗ ಅಭ್ಯರ್ಥಿಗಳ ಮನಸ್ಸಿನ ಮೇಲೆ ಅದು ಎಂತಹ ಪರಿಣಾಮ ಬೀರೀತು? ನನ್ನ ನುಡಿಯೇ ಕೀಳು, ಇದು ಕೆಲಸ ಕೊಡಿಸಲು ಯೋಗ್ಯತೆಯಿಲ್ಲದ್ದು ಎನ್ನಿಸುವುದಿಲ್ಲವೇ? ಇಂತಹ ಕೀಳರಿಮೆಯನ್ನು ಭಾರತದ ಹಿಂದೀಯೇತರರಲ್ಲಿ ಹುಟ್ಟು ಹಾಕುತ್ತಿರುವುದು ಯಾವುದು? ಅದು ಭಾರತದ ಇಂದಿನ ಭಾಷಾನೀತಿಯೇ ಅಲ್ಲವೇ? ಅದು ಭಾರತದಲ್ಲಿ ಹಿಂದೀಯೊಂದಕ್ಕೇ ತಾರತಮ್ಯದಿಂದ ನೀಡಿರುವ ಸ್ಥಾನಮಾನಲ್ಲವೇ?

ಇದಕ್ಕೆ ವಿರುದ್ಧವಾದ ಮತ್ತೊಂದು ಘಟನೆ ಚನ್ನೈ ನಗರದಲ್ಲಿ ಇತ್ತೀಚೆಗೆ ನಡೆಯಿತು ಎಂದು ಎನ್‌ಡಿಟಿವಿ ವರದಿ ಮಾಡಿತು. ರಾಜಸ್ಥಾನ ಮೂಲದ ವಲಸಿಗನೊಬ್ಬ ತನ್ನ ಮಗುವನ್ನು ಶಾಲೆಯೊಂದಕ್ಕೆ ಸೇರಿಸಲು ಅರ್ಜಿ ತರಲು ಹೋದಾಗ ಹಿಂದೀಯಲ್ಲಿದ್ದ ಜನನ ಪ್ರಮಾಣ ಪತ್ರವನ್ನು ತೋರಿಸಿದನಂತೆ. ಆ

ಶಾಲೆಯವರು ಇದರ ನಕಲನ್ನು ಇಂಗ್ಲೀಶಿನಲ್ಲಿ ಬರೆಸಿಕೊಂಡು ತನ್ನಿರಿ, ಹಿಂದೀ ನಮಗೆ ಅರ್ಥವಾಗುತ್ತಿಲ್ಲಾ ಎಂದರಂತೆ. ಇದನ್ನೇ ದೊಡ್ಡ ಸುದ್ದಿ ಮಾಡಿದ ಆ ಟಿವಿ ಚಾನೆಲ್‌ನವರು 'ತಮಿಳುನಾಡಿನಲ್ಲಿ ಅರವತ್ತರ ದಶಕದ ಹಿಂದೀ ದ್ವೇಷದ ನೆರಳು ಇನ್ನೂ ಜೀವಂತ ಮತ್ತು ಇದರಿಂದ ಮಗುವಿನ ಭವಿಷ್ಯ ಬಲಿಯಾಗಿದೆ' ಎಂದು ಪ್ರಸಾರ ಮಾಡಿತು. ಹೇಳಿ, ತಮಿಳುನಾಡಿನ ಶಾಲೆಯಲ್ಲಿ ಹಿಂದೀ ಭಾಷೆಯ ಪ್ರಮಾಣ ಪತ್ರ ಒಪ್ಪಬೇಕು ಮತ್ತು ಕನ್ನಡನೆಲದಲ್ಲಿ ನಡೆಯುವ ಭೂಸೇನಾ ನೇಮಕಾತಿಗೂ ಹಿಂದೀಯಲ್ಲಿಯೇ ಪ್ರಮಾಣ ಪತ್ರಗಳಿರಬೇಕು ಎಂದರೆ ಏನರ್ಥ? ನಾಳೆ ಕನ್ನಡದ ಜನರೇ ಕರ್ನಾಟಕ ಸರ್ಕಾರದ ಮೇಲೆ ಹಿಂದೀಯಲ್ಲಿ ಪ್ರಮಾಣಪತ್ರಗಳನ್ನು ಕೊಡುವಂತೆ ಒತ್ತಾಯ ಹೇರುವುದಿಲ್ಲವೇ? ಹೀಗೆ ನಮ್ಮನ್ನು ಹಿಂದೀ ಒಪ್ಪುವಂತೆ ಮಾಡುವುದು ಒತ್ತಾಯವಲ್ಲವೇ? ಕೆಲಸದ ಆಮಿಶವಲ್ಲವೇ? ಇದು ಹಿಂದೀ ಸಾಮ್ರಾಜ್ಯಶಾಹಿ ಮನಸ್ಥಿತಿಯಲ್ಲವೇ?

ಹಾಗಾದಲ್ಲಿ ಸರಿಯಾದ ವಿಧಾನ ಯಾವುದು? ಭಾರತವು ರಾಜ್ಯಗಳ ಒಪ್ಪುಕೂಟವಾಗಿದ್ದು, ಭಾರತ ಸೇನೆಯು ದೇಶದ ಹೊರಗಿನ ಹಾಗೂ ಒಳಗಿನ ಶತ್ರುಗಳಿಂದ ಈ ಒಪ್ಪುಕೂಟವನ್ನು ರಕ್ಷಿಸುವ ಜವಾಬ್ದಾರಿ ಹೊತ್ತಿದೆ. ಒಪ್ಪುಕೂಟ ವ್ಯವಸ್ಥೆಯ ಯಾವುದೇ ಕ್ಷೇತ್ರವಾದರೂ ಸರಿಯೇ, ಈ ಒಕ್ಕೂಟ ವ್ಯವಸ್ಥೆಯನ್ನು ಒಪ್ಪಿ ಭಾಗಿಯಾಗಿರುವ ಎಲ್ಲ ರಾಜ್ಯದ ಜನರಿಗೂ ಆ ಕ್ಷೇತ್ರವನ್ನು ಸೇರಲು ಪ್ರತಿನಿಧಿಸಲು ಸಮಾನ ಅವಕಾಶ ಇರಬೇಕು. ಇದಕ್ಕೆ ಸೇನೆಯೂ ಹೊರತಾಗಿಲ್ಲ. ನೂರಾರು ಭಾಷೆಗಳನ್ನು ಮಾತಾಡುವ ಈ ದೇಶದಲ್ಲಿ ಹಿಂದೀ/ ಇಂಗ್ಲಿಷ್ ಬರಲೇಬೇಕು ಎಂಬ ಮಾನದಂಡವನ್ನು ಆಯ್ಕೆಯ ಹಂತದಲ್ಲೇ ಉಪಯೋಗಿಸಿ ಅಭ್ಯರ್ಥಿಗಳನ್ನು ಸೈನ್ಯಕ್ಕೆ ಸೇರದ ಹಾಗೆ ಮಾಡುವುದು ಒಪ್ಪುಕೂಟದ ಪ್ರತಿನಿಧಿಗಳಿಗೆ ಮಾಡುವ ಅಪಮಾನ, ವಂಚನೆ ಮತ್ತು ಪಕ್ಷಪಾತ.

**ಪರಿಹಾರ?**

ಸೇನೆ ಸೇರಿದವರಿಗೆ ಏನೆಲ್ಲಾ ತರಬೇತಿ ನೀಡುವ ಭಾರತೀಯ ಸೇನೆ, ನೇಮಕಾತಿಗೆ ಬರುವ ಅಭ್ಯರ್ಥಿಗಳಿಗೆ ಹಿಂದೀ/ ಇಂಗ್ಲಿಷ್ ಪತ್ರಿಕೆ ಕಡ್ಡಾಯ ಮಾಡದೆ, ಉಳಿದೆಲ್ಲ ಪರೀಕ್ಷೆಗಳನ್ನು ಪಾಸು ಮಾಡಿದವರನ್ನು ಸೈನ್ಯಕ್ಕೆ ಸೇರಿಸಿಕೊಂಡು ಯಾವ ಮಟ್ಟದ ಹಿಂದೀ/ ಇಂಗ್ಲಿಷ್ ಜ್ಞಾನ ನಿರೀಕ್ಷಿಸುತ್ತಾರೋ ಅಷ್ಟು ತರಬೇತಿಯನ್ನು ಕೊಡೋ ವ್ಯವಸ್ಥೆ ಸಾಧ್ಯವಿಲ್ಲವೇ? ಅಂದರೆ ಸೈನ್ಯ ಸೇರಿದ ಮೇಲೆ, ಹಿಂದೀ/ ಇಂಗ್ಲಿಷ್ ಅಥವಾ ಯಾವ ಭಾಷೆಯಾದರೂ ಸರಿ... ಅವಶ್ಯಕತೆಯ ಮೇರೆಗೆ ಭಾಷೆಯ

ತರಬೇತಿಯನ್ನು ಕೊಡುವ ಏರ್ಪಾಡು ಮಾಡಲಾಗದೆ? ಇನ್ನೂ ಸರಿಯಾದ ವ್ಯವಸ್ಥೆಯಲ್ಲಿ ಆಯಾ ಭಾಷಿಕ ತುಕಡಿಗಳು ಆಯಾ ಭಾಷೆಯಲ್ಲಿ ಕೆಲಸ ಮಾಡುವುದು. ಬೇರೆ ಬೇರೆ ಭಾಷೆಯ ತುಕಡಿಗಳ ನಡುವಿನ ಸಂಪರ್ಕಕ್ಕೆ ಬೇಕಾಗುವ ಭಾಷೆಯನ್ನು ಸೈನ್ಯದ ತರಬೇತಿಯ ಕಾಲದಲ್ಲೇ ಕಲಿಸುವುದು. ಇಂತಹ ಕಟ್ಟುಪಾಡುಗಳನ್ನು ಒಪ್ಪುಕೂಟ ವ್ಯವಸ್ಥೆಯ ಎಲ್ಲಾ ಕ್ಷೇತ್ರಗಳಲ್ಲೂ ಮಾಡಿದರೆ ನಿಜವಾದ ಒಪ್ಪುಕೂಟ ವ್ಯವಸ್ಥೆಯ ಕಾರ್ಯವೈಖರಿಯು ಹೇಗಿರಬೇಕೆಂದು ತೋರಿಸಿಕೊಟ್ಟು ಒಪ್ಪುಕೂಟ ವ್ಯವಸ್ಥೆಯ ಘನತೆಯನ್ನು ಎತ್ತಿ ಹಿಡಿದಂತಾಗುತ್ತದೆ.

ಭಾರತ ಸರ್ಕಾರ ನಡೆಸುತ್ತಿರುವ 'ಇಡೀ ಭಾರತದ ವಿಶ್ವವಿದ್ಯಾಲಯಗಳ ಗುಣಮಟ್ಟ ಕಾಪಾಡಿಕೊಳ್ಳುವ/ ಹೆಚ್ಚಿಸುವ' ಘೋಷಿತ ಉದ್ದೇಶವಿರೋ ಯೂನಿವರ್ಸಿಟಿ ಗ್ರಾಂಟ್ಸ್ ಕಮಿಷನ್ (UGC) ಎನ್ನುವ ಹೆಸರಿನ ಸಂಸ್ಥೆಯು, ನಾಡಿನ ಕಾಲೇಜುಗಳ ಶಿಕ್ಷಕರ ನೇಮಕಾತಿ ನಡುಸುತ್ತದೆ. ಈ ನೇಮಕಾತಿ ಪರೀಕ್ಷೆಗಳು ಕನ್ನಡದಲ್ಲೂ ನಡೆಸಿ ಎಂದು ಕಳೆದ ವರ್ಷ ಕೇಂದ್ರಸರ್ಕಾರವನ್ನು ಕರ್ನಾಟಕ ರಾಜ್ಯಸರ್ಕಾರದ ಉನ್ನತ ಶಿಕ್ಷಣ ಇಲಾಖೆಯ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಮದನಗೋಪಾಲ್‌ರವರು ಮನವಿ ಸಲ್ಲಿಸಿದರೆಂಬ ಸುದ್ದಿ ೨೩.೧೧.೨೦೧೦ರ ಡಿಎನ್ಎ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಈಗಿನ ಯು.ಜಿ.ಸಿ ಪರೀಕ್ಷೆಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಮಾತ್ರಾ ಬರೆಯಬೇಕೆನ್ನುವ ನಿಯಮವಿದ್ದು ಇರುವ ಪರೀಕ್ಷೆಯಲ್ಲಿ ಉತ್ತೀರ್ಣರಾಗುವ ಕನ್ನಡಿಗರ ಸಂಖ್ಯೆ ೯೨೧೬ಕ್ಕೆ ಬರೀ ೫೫ ಮಾತ್ರವಂತೆ.

ರೈಲು ಪರೀಕ್ಷೆಯಲ್ಲಿ ಅರ್ಜಿಯನ್ನು ಹಿಂದೀ/ ಇಂಗ್ಲೀಶಲ್ಲಿ ಮಾತ್ರಾ ಬರೆಯಬೇಕು ಎನ್ನುವಾಗ, ಬ್ಯಾಂಕು ಕೆಲಸಗಳಲ್ಲಿ ಅರ್ಜಿ ಹಾಕಲಿಕ್ಕೆ ಹತ್ತನೇ ತರಗತಿಯ ಅಂಕಪಟ್ಟಿಯಲ್ಲಿ ಹಿಂದೀ ಇರಲೇಬೇಕೆನ್ನುವ ನಿಯಮ ಇರೋವಾಗ, ಯು.ಜಿ.ಸಿ ಪರೀಕ್ಷೆಗಳಲ್ಲಿ ಹಿಂದೀ ಗೊತ್ತಿರಲೇಬೇಕೆನ್ನುವ ನಿಯಮವಿರುವಾಗ ಹಿಂದೀ/ ಇಂಗ್ಲೀಶಿನಲ್ಲಿ ಪ್ರಾವೀಣ್ಯತೆಯಿರದ ಕನ್ನಡಿಗ ಅಂತಹ ಕೆಲಸಗಳಿಂದ ವಂಚಿತನಾಗುತ್ತಾನೆ. ಆದರೆ ತಮ್ಮ ತಾಯ್ನುಡಿಯಾದ ಹಿಂದೀ ರಾಷ್ಟ್ರದ ಆಡಳಿತ ಭಾಷೆಯಾಗಿರೋ ಕಾರಣದಿಂದ ಎಲ್ಲಾ ಪರೀಕ್ಷೆ/ ಸಂದರ್ಶನಗಳನ್ನು ಹಿಂದೀಯಲ್ಲೇ ಎದುರಿಸಲು ಅವಕಾಶ ಇರುವ ನಿಯಮವು, ಖಾಲಿ ಇರುವ ಕೆಲಸಗಳ ಎಲ್ಲಾ ನೇಮಕಾತಿ ಅವಕಾಶಗಳನ್ನು ಹಿಂದೀ ತಾಯ್ನುಡಿಯವರಿಗೆ

ಒದಗಿಸಿಕೊಡುತ್ತೆ. ಈ ಕಾರಣದಿಂದಲೇ ನಮ್ಮ ಜನರು ಅದೆಷ್ಟೋ ಅವಕಾಶಗಳನ್ನು ಕಳೆದುಕೊಳ್ಳುತ್ತಾ ಇದ್ದಾರೆ. ಅಂದರೆ ಭಾರತ ಸರ್ಕಾರಕ್ಕೆ ಇವೆಲ್ಲಾ ಗೊತ್ತಾಗುವುದಿಲ್ಲವೇನು? ಈ ಸರ್ಕಾರವಿರುವುದು ಕೇವಲ ಹಿಂದೀ ಭಾಷಿಕರನ್ನು ಪೊರೆಯಲೆಂದೇನು? ಉಳಿದವರು ಭಾರತೀಯರಲ್ಲವೇನು?

## ಮನರಂಜನೆಯ ಮೂಲಕ ಹಿಂದೀ ಪ್ರಸಾರ?

ಮನರಂಜನೆಯೆನ್ನುವುದು ನಮ್ಮ ಬದುಕಿನಲ್ಲಿ ಅತ್ಯಂತ ಮಹತ್ವದ್ದಾಗಿದೆ. ಸುಮ್ಮನೆ ನೂರಾರು ವರ್ಷಗಳ ಹಿಂದೆ ನಮ್ಮ ಮನರಂಜನೆ ಹೇಗಿತ್ತು ಎನ್ನುವುದನ್ನು ಒಮ್ಮೆ ಕಲ್ಪಿಸಿಕೊಳ್ಳೋಣ. ಆಗೆಲ್ಲಾ ಹಾಡು, ಕುಣಿತ, ಸಂಗೀತಗಳ ಜೊತೆಯಲ್ಲಿ

ನಾಟಕಗಳೂ ಇದ್ದವು. ಜಾನಪದದ ದೊಡ್ಡ ಭಂಡಾರ ನಮ್ಮದಾಗಿತ್ತು. ಕಾಲಾನಂತರದಲ್ಲಿ ತಂತ್ರಜ್ಞಾನಗಳು ಮೂಡಿಬಂದು ಮನರಂಜನಾ ಮಾಧ್ಯಮದಲ್ಲಿ ಹೊಸಕ್ರಾಂತಿ ಮಾಡಿದಾಗ, ಈ ತಂತ್ರಜ್ಞಾನವೇ ಜನರನ್ನು ಸೆಳೆಯುತ್ತಾ ಹೋಯಿತು. ಇಂತಹ ತಾಂತ್ರಿಕ ಕ್ರಾಂತಿಯ ಪ್ರಮುಖ ಫಲವೇ ಚಲನಚಿತ್ರಗಳು. ಚಿತ್ರ ನಿರ್ಮಾಣ ಮನರಂಜನೆಯ ಪ್ರಮುಖ ಮಾಧ್ಯಮವಾಗುವುದರ ಜೊತೆಯಲ್ಲೇ ಸಾವಿರಾರು ಜನರಿಗೆ ಬದುಕು ಕೊಡುವ ಉದ್ಯಮವಾಗಿಯೂ ಬೇರೂರಿತು. ಇಂದಿಗೂ ಭಾರತದಲ್ಲಿ ಚಲನಚಿತ್ರಗಳು ಜನರ ಮನರಂಜನೆಯ ಪ್ರಮುಖ ಭಾಗವಾಗಿದೆ ಮತ್ತು ಹಾಗಾಗಿ ಇಂದು ಕನ್ನಡನಾಡಿನ ಮೇಲೆ ತೀವ್ರವಾಗಿ ಪ್ರಭಾವ ಬೀರಿರುವ ಕಲಾಮಾಧ್ಯಮವೆಂದರೆ ಚಿತ್ರರಂಗವೇ ಎನ್ನಬಹುದಾಗಿದೆ.

ಸಹಜವಾಗಿ ಆಗೆಲ್ಲಾ ಕೇವಲ ಕಡಲ ಮೂಲಕ ವಿದೇಶ ಸಂಪರ್ಕವಿದ್ದುದರಿಂದಲೂ, ಬ್ರಿಟೀಶರು ಹೆಚ್ಚಾಗಿ ಬಳಸಿ ಬೆಳೆಸಿದ್ದರಿಂದಲೂ ಭಾರತದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದ ಮುಂಬೈ, ಚೆನ್ನೈಗಳಲ್ಲಿಯೇ ಚಿತ್ರೋದ್ಯಮವೂ ನೆಲೆ ನಿಂತಿತು. ಮೊದಲಿಗೆ ಮೂಕಿ ಚಿತ್ರಗಳಿದ್ದ ಕಾಲವಾದ್ದರಿಂದ ನಮ್ಮ ನಾಡಿನಲ್ಲಿ ಅವು ಪ್ರದರ್ಶನಗೊಂಡರೂ ಭಾಷೆಯ ವಿಷಯವಾಗಿಯೂ, ಹೆಚ್ಚಾಗಿ ಪೌರಾಣಿಕ ಕಥೆಗಳು ಚಿತ್ರವಾಗುತ್ತಿದ್ದುದರಿಂದ ಸಾಂಸ್ಕೃತಿಕವಾಗಿಯೂ, ಸಾಮಾಜಿಕವಾಗಿಯೂ ಇದು ಅಂತಹ ಪರಿಣಾಮ ಬೀರಿರಲಿಲ್ಲ. ಇದೇ ದೊಡ್ಡ ಕಾರಣವಾಗಿ ಕನ್ನಡನಾಡಿನಲ್ಲಿ ಚಿತ್ರರಂಗವು ಸ್ವತಂತ್ರ ಅಸ್ತಿತ್ವ ಕಂಡುಕೊಳ್ಳುವಲ್ಲಿ ಉಳಿದವುಗಳಿಗಿಂತಾ ಹಿಂದೆ ಉಳಿಯಿತು. ಮುಂದೆ ಟಾಕೀ ಚಿತ್ರಗಳು ಬಂದ ನಂತರವು ಕನ್ನಡ ಚಿತ್ರರಂಗ ಉಳಿದವುಗಳಿಗಿಂತ ತಂತ್ರಜ್ಞಾನ ಮತ್ತು ಚಿತ್ರನಿರ್ಮಾಣದಲ್ಲಿ ಹಿಂದೆಯೇ ಉಳಿಯಿತು ಎಂದರೆ ತಪ್ಪಾಗಲಾರದು. ಇದನ್ನು ನಾವು ಮನರಂಜನೆಯಲ್ಲಿ ಭಾಷೆ ಎನ್ನುವ ಹಿನ್ನೆಲೆಯಲ್ಲಿ ನೋಡಿದಾಗ ಸ್ಪಷ್ಟವಾಗಿ ಅರ್ಥವಾಗುತ್ತದೆ. ಸ್ವಾತಂತ್ರ್ಯಕ್ಕೆ ಮೊದಲು ಚಲನಚಿತ್ರ ತಯಾರಿಕೆಯೂ ಇಂದಿಗಿಂತ ಕಡಿಮೆಯೇ ಇತ್ತು. ಹಾಗಾಗಿ ಹಿಂದೀ ಭಾಷೆಯ ಪ್ರಭಾವ ಕನ್ನಡನಾಡಿನ ಮೇಲೆ ಇಂದಿನಷ್ಟು ತೀವ್ರವಾಗಿಯೂ ಇರಲಿಲ್ಲ ಎನ್ನಬಹುದಾಗಿದೆ. ಸ್ವಾತಂತ್ರದ ನಂತರವೂ ಕಚ್ಚಾ ಫಿಲ್ಮುಗಳು, ಕ್ಯಾಮರಾಗಳು, ಸ್ಟುಡಿಯೋ ಯಂತ್ರಗಳು ಆಮದಾಗಿ ಬರುತ್ತಿದ್ದುದರಿಂದಲೂ, ಭಾರತದ ಬಿಗುವಿನ ಆಮದು ನೀತಿಯಿಂದಲೂ ಕನ್ನಡ ಚಿತ್ರರಂಗದ ಬೆಳವಣಿಗೆ ಹಿಂದೀ ಭಾಷಾ ಚಿತ್ರರಂಗದಷ್ಟು ಆಗಲಿಲ್ಲ. ದೇಶದ ಎಲ್ಲೆಡೆ ಹಿಂದೀ ಪ್ರಸಾರದ ಭರಾಟೆ ಹೆಚ್ಚಾಗಿದ್ದುದರಿಂದ ಹಿಂದೀಯೇತರ ಪ್ರದೇಶಗಳಲ್ಲೂ ಹಿಂದೀ ಚಿತ್ರಗಳು ತೆರೆಕಾಣತೊಡಗಿದ್ದವು.

ಇಂತಹ ವಿಶಾಲ ವ್ಯಾಪ್ತಿಯ ಅವಕಾಶದ ಕಾರಣ ದೇಶದ ನಾನಾ ಭಾಗಗಳ ಹಿಂದೀಯೇತರ ಪ್ರತಿಭೆಗಳೂ ಹಿಂದೀ ಚಿತ್ರರಂಗದಲ್ಲಿ ದುಡಿದು, ಅದರ ಬೆಳವಣಿಗೆಗೆ ಕಾರಣರಾದರು. ದಾದಾ ಸಾಹೇಬ್ ಫಾಲ್ಕೆ, ವಣಕುದುರಿ ಶಾಂತಾರಾಂ, ಪೃಥ್ವಿರಾಜ್‌ಕಪೂರ್, ರಾಜ್‌ಕಪೂರ್, ಮೊಹಮ್ಮದ್ ರಫಿ, ಎಸ್.ಡಿ. ಬರ್ಮನ್, ಆರ್.ಡಿ ಬರ್ಮನ್, ಕಿಶೋರ್ ಕುಮಾರ್, ಲತಾ ಮಂಗೇಶ್ಕರ್, ಆಶಾ ಭೋನ್ಸ್ಲೇ, ಗುರುದತ್ ಮೊದಲಾಗಿ ಹಿಂದೀ ಚಿತ್ರರಂಗವನ್ನು ಕಟ್ಟಿ ಬೆಳಸಿದವರಲ್ಲಿ ಹಿಂದೀಯೇತರರೂ ಬಹುತೇಕರಿದ್ದರು. ನಿರಂತರವಾಗಿ ಬಿಡುಗಡೆಯಾಗಿ ಪ್ರದರ್ಶನಗೊಳ್ಳುವ ಅನುಕೂಲಗಳು ಹಿಂದೀ ಚಿತ್ರಗಳಿಗೆ ದೊರೆತ ಕಾರಣದಿಂದಾಗಿಯೂ, ಭಾರತ ಸರ್ಕಾರ ಮತ್ತು ನಾಡಿನ ನಾಯಕರುಗಳು ಜನರಲ್ಲಿ ಹುಟ್ಟು ಹಾಕಿದ್ದ "ಏಕತೆಗಾಗಿ ಹಿಂದೀಯನ್ನು ಒಪ್ಪಬೇಕು" ಎಂಬ ನಂಬಿಕೆಯ ಕಾರಣಗಳಿಂದಾಗಿಯೂ ಪ್ರತಿರೋಧವಿಲ್ಲದೆ ಒಪ್ಪಿತವಾಗತೊಡಗಿದವು.

## ಆಕಾಶವಾಣಿಗಳಲ್ಲಿ ಹಿಂದೀ

ಭಾರತದ ಭಾಷಾನೀತಿಯ ಕಾರಣದಿಂದಲೂ, ಆಕಾಶವಾಣಿಯು ಕೇವಲ ಕೇಂದ್ರದ ಹಿಡಿತದಲ್ಲಿದುದರಿಂದಲೂ ರೇಡಿಯೋ ಮೂಲಕ ಹಿಂದೀ ಕಾರ್ಯಕ್ರಮಗಳ ಪ್ರಸಾರವೆನ್ನುವುದು ಸಾಮಾನ್ಯವಾಗಿ ಹೋಯಿತು. ಬೆಂಗಳೂರಿನ ಎಫ್.ಎಂ ೧೦೧.೩ – ಕನ್ನಡ ಕಾಮನಬಿಲ್ಲಿನಲ್ಲಿ ಇಂದಿಗೂ ನಮಗೆ ಕೇಳುವುದು ಹಿಂದೀ ಚಿತ್ರಗೀತೆಗಳೇ. ಆಗಾಗ ನಡೆಯುವ ಕ್ರಿಕೆಟ್ ಪಂದ್ಯಗಳ ಸ್ಕೋರ್ ಹೇಳುವುದಾಗಲೀ, ಕಾಮೆಂಟರಿ ಕೊಡುವುದಾಗಲೀ ಹಿಂದೀಯಲ್ಲಿಯೆ. ಇದು ಸರ್ಕಾರ ತನ್ನ ಅಧಿಕಾರ ಬಳಸಿಕೊಂಡು ಹಿಂದೀಯೇತರರ ಮೇಲೆ ಹಿಂದೀಯನ್ನು ಹೇರುತ್ತಿರುವುದಕ್ಕೆ ಬಲವಾದ ಪುರಾವೆಯಾಗಿದೆ. ಇಷ್ಟೇ ಅಲ್ಲದೆ ಶಿಕ್ಷಣಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಹಿಂದೀಯಲ್ಲೇ ಪ್ರಸಾರ ಮಾಡಬೇಕೆನ್ನುತ್ತದೆ ಸಂಸತ್ ಸಮಿತಿಯ ಶಿಫಾರಸ್ಸು. ಇಂದಿಗೂ ನಮ್ಮೂರಿನ ಸರ್ಕಾರಿ ಸ್ವಾಮ್ಯದ ಬಾನುಲಿ ನಿಲಯಗಳು ಹಿಂದೀ ಹೇರಿಕೆಯ ಪ್ರಬಲವಾದ ಸಾಧನಗಳೇ ಆಗಿವೆ.

ನಮ್ಮ ಮನರಂಜನೆ ನಮ್ಮ ನುಡಿಯಲ್ಲಿರಬೇಕು ಅನ್ನುವುದು ಸರಿಯಾದದ್ದು. ಬೆಂಗಳೂರಿನಂತಹ ಕನ್ನಡನಾಡಿನ ರಾಜಧಾನಿಯಲ್ಲಿ ಕನ್ನಡದಲ್ಲಿ ರೇಡಿಯೋ ನಡೆಸಿದರೆ ಲಾಭ ಎಂದು ಖಾಸಗಿ ಎಫ್.ಎಂಗಳಿಗೆ ಮನವರಿಕೆ ಆಗಲು ಇಷ್ಟು ಕಾಲ

ಬೇಕಾಯ್ತು. ಆದರೂ `ಕನ್ನಡ ಕಾಮನ ಬಿಲ್ಲು' ಎಂದು ಗಳಿಗೆಗೊಮ್ಮೆ ಪ್ರಸಾರ ಮಾಡಿಕೊಳ್ಳುವ ರೈನ್ ಬೋಗೆ ಮಾತ್ರಾ ಇದು ಇನ್ನೂ ಮನವರಿಕೆ ಆದಂತಿಲ್ಲ. ಸರ್ಕಾರಿ ಪ್ರಾಯೋಜಿತ ವಾಹಿನಿಯಾದ್ದರಿಂದ ಇದರಲ್ಲಿ ನಿರಂತರವಾಗಿ ಕನ್ನಡಿಗರ ಮೇಲಿನ ಹಿಂದೀ ಹೇರಿಕೆ ನಿರಾತಂಕವಾಗಿ ನಡೆದೇ ಇದೆ. ಬೆಂಗಳೂರಿನಲ್ಲಿ ಜನರಿಗೆ ಬೇಕಿರುವುದು ಕನ್ನಡದ ಮನರಂಜನೆಯೆಂದು ಅವರಿಗೆ ಹೇಳುವವರಾದರೂ ಯಾರು ?

## ಕನ್ನಡನಾಡಿನ ದೂರದರ್ಶನದಲ್ಲಿ ಹಿಂದೀ

ಈ ಹಿಂದೀ ಮನರಂಜನೆಯೆನ್ನುವುದು ನಿಧಾನವಾಗಿ ಭಾರತದ ಇತರೆ ಭಾಷೆಯ ಮನರಂಜನಾ ಕ್ಷೇತ್ರಗಳನ್ನು ಆಪೋಶನ ತೆಗೆದು ಕೊಳ್ಳತೊಡಗಿತು. ಈ ಪ್ರಕ್ರಿಯೆಯು ಎಂಬತ್ತು ತೊಂಬತ್ತರ ದಶಕದ ನಂತರ ತೀವ್ರವಾದ ವೇಗ ಪಡೆದುಕೊಂಡಿತು. ಟೆಲಿವಿಷನ್ ಮಾಧ್ಯಮ ದೇಶದೊಳಗೆ ಕಾಲಿಟ್ಟ ಸಂದರ್ಭದಲ್ಲಿ ದೂರದರ್ಶನ ಎನ್ನುವ ಒಂದೇ ವಾಹಿನಿಯಿದ್ದು ಅದೂ ಕೇಂದ್ರಸರ್ಕಾರದ ಹಿಡಿತದಲ್ಲಿದ್ದ ಕಾರಣದಿಂದಾಗಿ ಅಲ್ಲಿಯೂ ಹಿಂದೀ ಕಾರ್ಯಕ್ರಮಗಳು ಮಾತ್ರವೇ ಪ್ರಾಮುಖ್ಯತೆ ಪಡೆದಿದ್ದವು. ಹಿಂದೀ ಸಿನಿಮಾಗಳು, ಹಿಂದೀ ಹಾಡುಗಳು, ಹಿಂದೀ ಧಾರಾವಾಹಿಗಳು ಬೇಕಾಗೋ ಬೇಡದೆಯೋ ಕನ್ನಡಿಗರಿಗೆ ಮನೆಯಲ್ಲೇ ಕೈಗೆಟುಕುವ ಮನರಂಜನೆಯ ಏಕೈಕ ದಾರಿಯಾದವು. ಖಾಸಗಿ ವಾಹಿನಿಗಳ ಪ್ರವೇಶವಾದ ನಂತರವಷ್ಟೇ ಕನ್ನಡಕ್ಕೇ ಮೀಸಲಾದ ವಾಹಿನಿಗಳು ಶುರುವಾದವು. ನಂತರದ ದಿನಗಳಲ್ಲಿ ಈ ವಾಹಿನಿಗಳಲ್ಲೂ ನಿಧಾನವಾಗಿ ಹಿಂದೀ ಪ್ರಭಾವ ಹೆಚ್ಚತೊಡಗಿತು.

ಬಹು ಹಿಂದೆ ಅಸ್ಸಾಮಿ, ಪಂಜಾಬಿ, ಗುಜರಾತಿ, ಮರಾಠಿ, ತೆಲುಗು, ತಮಿಳು, ಕನ್ನಡ, ಮಲಯಾಳಂ, ಭೋಜ್‌ಪುರಿ, ಕಾಶ್ಮೀರಿ, ಬೆಂಗಾಲಿ ಮೊದಲಾದ ಭಾರತೀಯ ಚಿತ್ರರಂಗಗಳು ತಮ್ಮ ನಾಡಿನಲ್ಲಿ ಮೆರೆಯುತ್ತಿದ್ದವು. ಇಂದು ಹಿಂದೀ ಮನರಂಜನೆಯ ಕಾರಣದಿಂದಾಗಿ ಇವುಗಳಲ್ಲಿ ಅನೇಕವು ಉಸಿರಾಡಲು ತೇಕುತ್ತಿವೆ. ಇದೀಗ ಈ ಹಿಂದೀ ಮನರಂಜನೆಯೆನ್ನುವುದು ಕನ್ನಡದ ಹೊಸ್ತಿಲಿಗೆ ಬಂದು ಕನ್ನಡದ ಮನರಂಜನೆಯನ್ನು ನುಂಗಲು ಶುರುಮಾಡಿದೆ.

## ಆಸ್ಕರ್‌ಗೆ ಹಿಂದೀ ಚಿತ್ರಾನೇ ಹೋಗಬೇಕಾ?

ಆಸ್ಕರ್ ಪ್ರಶಸ್ತಿಗೆ ನಡೆಯುವ ಸ್ಪರ್ಧೆಯಲ್ಲಿ ಭಾಗವಹಿಸುವುದಕ್ಕೆ ಭಾರತದಿಂದ ಒಂದು ಹಿಂದೀ ಚಿತ್ರ "ಆಯ್ಕೆ" ಆಗಿದೆ ಅಂತನ್ನೋ ಸುದ್ದಿ ೨೦೦೭ರ ಸೆಪ್ಟೆಂಬರ್ ೨೬ರ ಟೈಮ್ಸ್ ಆಫ್ ಇಂಡಿಯಾದಲ್ಲಿ ಬಂದಿದೆ. ಭಾರತ ಸರ್ಕಾರವು ಒಂದು ಸಮಿತಿಯನ್ನು ರಚಿಸಿ ಅದರ ಮೂಲಕ ಆ ವರ್ಷ ಭಾರತಾದ್ಯಂತ ಬಿಡುಗಡೆಯಾದ ಚಲನಚಿತ್ರಗಳಲ್ಲಿ ಒಂದನ್ನು ಆಯ್ಕೆ ಮಾಡಿ "ಅತ್ಯುತ್ತಮ ವಿದೇಶಿ ಚಿತ್ರ"ದ ಅಡಿಯಲ್ಲಿ ಸ್ಪರ್ಧೆಗಾಗಿ ಆಸ್ಕರ್‌ಗೆ ಕಳಿಸಿಕೊಡುತ್ತದೆ. ೧೯೫೭ರಿಂದ ಈ ಸ್ಪರ್ಧೆಯಲ್ಲಿ ಭಾಗವಹಿಸಲು ಕಳಿಸಲ್ಪಟ್ಟ ಭಾರತೀಯ ಚಿತ್ರಗಳ ಬಗ್ಗೆ ಮಾಹಿತಿ ಅಂತರ್ಜಾಲ ತಾಣದಲ್ಲಿದೆ.
(ನೋಡಿ:http://en.wikipedia.org/wiki/List_of_Indian_submissions_for_the_Academy_Award_for_Best_Foreign_Language_Film) ಈ ತಾಣದ ಮಾಹಿತಿಯಂತೆ ಆಸ್ಕರ್ ಪ್ರಶಸ್ತಿಗೆ ಸಾಮಾನ್ಯವಾಗಿ ನೇಮಕವಾಗೋದು ಹಿಂದೀ ಭಾಷೆಯ ಚಿತ್ರಗಳೇ. ಹಲವು ಬಾರಿ ತಮಿಳು ಮತ್ತು ಉರ್ದು, ಎರಡು ಬಾರಿ ಮರಾಠಿ, ಬೆಂಗಾಲಿ, ತೆಲುಗು ಮತ್ತು ಮಲಯಾಳಂ ಚಿತ್ರಗಳು ಒಂದು ಬಾರಿ ನಾಮಕರಣಗೊಂಡಿವೆ. ಭಾರತದಿಂದ ಒಂದು ಚಿತ್ರ ಹೋಗಬೇಕಾದಲ್ಲಿ ಅದು ಹಿಂದೀಯಲ್ಲೇ ಇರಬೇಕೆಂಬ ನಿಯಮ ಇದೆಯೇನು? ಭಾರತದ ಬೇರೆ ಎಲ್ಲಾ ಭಾಷೆಗಳ ಚಿತ್ರಗಳಿಗೆ ಏನೂ ಬೆಲೆಯೇ ಇಲ್ಲವೇನು? ಕನ್ನಡದ ಯಾವ ಚಿತ್ರಕ್ಕೂ ಈ "ಆಯ್ಕೆ" ಪ್ರಕ್ರಿಯೆಯಲ್ಲಿ ಸೇರಿಕೊಳ್ಳುವ ಯೋಗ್ಯತೆಯೇ ಇಲ್ಲವೇನು? ಎಂಬುದು ಯಕ್ಷಪ್ರಶ್ನೆಯಾಗಿದೆ.

ಒಂದು ವರ್ಷಕ್ಕೆ ಭಾರತದಲ್ಲಿ ಹೆಚ್ಚು-ಕಡಿಮೆ ೮೦೦ ಚಿತ್ರಗಳು ತೆರೆ ಕಾಣುತ್ತವೆ, ಅವುಗಳಲ್ಲಿ ಹಿಂದೀಚಿತ್ರಗಳು ಬರೀ ೨೦೦ ಮಾತ್ರ. ಮಿಕ್ಕ ೬೦೦ರಲ್ಲಿ ಪ್ರಮುಖವಾಗಿ ಕನ್ನಡವೂ ಸೇರಿದಂತೆ ೫~೬ ಭಾಷೆಗಳ ಚಿತ್ರಗಳಿರುತ್ತವೆ. ಇದು ಭಾರತದ ಭಾಷಾ ವಿವಿಧತೆಗೆ ಒಂದು ಉದಾಹರಣೆಯೇ ಸರಿ. ಹೀಗಿರುವಾಗ ಬರೀ ಹಿಂದೀ ಭಾಷೆಯ ಚಿತ್ರಗಳನ್ನೇ ಆಯ್ಕೆ ಮಾಡಿ ಕಳಿಸುವುದು ಯಾವ ನ್ಯಾಯ? ಈ ದೇಶ ಭಾಷಾವಾರು ರಾಜ್ಯಗಳ ಒಕ್ಕೂಟ ಆಗಿರುವಾಗ ಎಲ್ಲ ಭಾಷೆಗಳಿಗೂ ಸಮಾನ ಹಕ್ಕಿರಬೇಕೋ ಬೇಡವೋ? ಆಸ್ಕರ್‌ನಂತಹಾ ಸ್ಪರ್ಧೆಗೆ ಭಾರತದಿಂದ ಒಂದು ಚಿತ್ರ ಎಂದು ಕಳಿಸಬೇಕಾದಲ್ಲಿ ಎಲ್ಲಾ ಮುಖ್ಯ ಚಿತ್ರ–ನಿರ್ಮಾಣ ಮಾಡುವ ಭಾಷೆಗಳ ಚಿತ್ರಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಲ್ಲಿ ಎಲ್ಲಾದಕ್ಕಿಂತ ಉತ್ತಮವಾದದ್ದನ್ನು ಆಯ್ಕೆ ಮಾಡಿ ಕಳಿಸಬೇಕು ಎನ್ನುವುದು ನ್ಯಾಯವಲ್ಲವೇ?

ಇದುವರೆಗೂ ಕಳಿಸಲ್ಪಟ್ಟ ಸಿನಿಮಾಗಳ ಪಟ್ಟಿ ನೋಡಿದರೆ ಆ ನ್ಯಾಯ ನಿಜಕ್ಕೂ ಇಲ್ಲಿದೆಯಾ ಎಂಬ ಅನುಮಾನ ಬರುತ್ತದೆ.

## ಸರ್ಕಾರಿ ಕಾರ್ಯಕ್ರಮದಲ್ಲಿ ಹಿಂದೀ ಸಂಗೀತ

**Aap ki farmaaish**

The occasion was the foundation day celebration of Karnataka Power Corporation to be inaugurated by the Chief Minister B S Yeddyurappa. Guests who had arrived early were treated to Telugu and Hindi film hits by an orchestra.

As the CM arrived at the venue hall, the orchestra which was playing *Kajra re* from *Bunty aur Babli* stopped abruptly. But on Yeddyurappa's farmaaish the musicians had to play the whole song which they did with an extra punch.

Oh yeah, there was *Gubbacchi goodu* and *Anisuthide* sung in between to make one remember that this was Karnataka Power Corporation programme.

ANANTHA SUBRAMANYAM K

೨೦೦೮ರ ಜುಲೈ ೨೦ನೇ ತಾರೀಖು ಬೆಂಗಳೂರಿನಲ್ಲಿ ಕರ್ನಾಟಕ ರಾಜ್ಯ ವಿದ್ಯುತ್ ನಿಗಮದ ಹುಟ್ಟುಹಬ್ಬವನ್ನು ಆಚರಿಸಲಾಯಿತು. ಕರ್ನಾಟಕ ವಿದ್ಯುತ್ ನಿಗಮದ ಕಾರ್ಯಕ್ರಮವೇ ಆಗಿದ್ದರೂ ಇದರಲ್ಲಿ ತೆಲುಗು ಮತ್ತು ಹಿಂದೀ ಹಾಡುಗಳ್ನ ಹಾಡುತ್ತಿದ್ದರಂತೆ. ಈ ಕಾರ್ಯಕ್ರಮಕ್ಕೆ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ. ಯಡ್ಯೂರಪ್ಪನವರು ಬಂದರೆಂದು ಹಾಡು ನಿಲ್ಲಿಸಿದರಂತೆ. "ಛೆ ಛೆ ನಿಲ್ಲುಸ್ಬೇಡಿ, ಸಂಗೀತ ಮುಂದುವರೀಲಿ" ಎಂದು ಯಡ್ಯೂರಪ್ಪನವರು ಹೇಳಿದರಂತೆ. ಇದರಲ್ಲಿ ವಿನಯವೇನೋ ಕಾಣುತ್ತೆ, ಆದರೆ "ಕನ್ನಡದ ಹಾಡು ಹಾಡಲಿಕ್ಕೆ ನಿಮಗೇನು ರೋಗ, ತೆಲುಗು ಮತ್ತೆ ಹಿಂದೀ ಹಾಡುಗಳ್ನ ಯಾಕೆ ಹಾಡ್ತಿದೀರಿ, ನಿಮಗೆ ಮೈಮೇಲೆ ಗ್ನಾನ ಇಲ್ವಾ?" ಅಂತ ಒಬ್ಬರಾದರೂ ಕೇಳದೆ ಹೋದದ್ದು ಅಚ್ಚರಿಯೆನ್ನಿಸುತ್ತದೆ.

## ಕ್ರಿಕೆಟ್ ಕಾಮೆಂಟರಿ ಎನ್ನುವ ಹಿಂದೀಹೇರಿಕೆಯ ಸರಳಾಸ್ತ್ರ!

"ಭಾರತದೋರಿಗೆ ಕ್ರಿಕೆಟ್ಟು ಅನ್ನೋದು ಕ್ರೀಡೆ ಮಾತ್ರಾ ಆಗಿಲ್ಲಾ, ಅದು ಅವರ ರಾಷ್ಟ್ರೀಯತೆಯಾಗಿದೆ" ಅಂತ ಒಬ್ಬರು ಪುಣ್ಯಾತ್ಮರು ಹೇಳಿದ್ದರಂತೆ. ಹಾಗೆ ಕ್ರಿಕೆಟ್ ಪಂದ್ಯಗಳು ಕಳೆದ ಮೂವತ್ತು ನಲವತ್ತು ವರ್ಷಗಳಲ್ಲಿ ಬೆಳೆದು ಆವರಿಸಿಕೊಂಡ ಪರಿ ಅದ್ಭುತವಾಗಿದೆ! ಇದೇ ಹೊತ್ತಿನಲ್ಲಿ ತಂತ್ರಜ್ಞಾನದಲ್ಲಾದ ಬೆಳವಣಿಗೆ ನಮ್ಮ ಮನೆಗಳ ಒಳಗೆ ಟಿವಿ ಬರಲು ಕಾರಣವಾಯ್ತು. ಇದರ ಜೊತೆಯಲ್ಲೇ ದೂರದರ್ಶನವೆಂಬುದು ಭಾರತ ಸರ್ಕಾರಕ್ಕೆ ತನ್ನ ಪ್ರಜೆಗಳ ಮೇಲೆ ಹಿಂದೀಯನ್ನು ಹೇರುವ ಹೆದ್ದಾರಿಯಾಯ್ತು. ಹೇಗಿದ್ದರೂ ಜನರಿಗೆ ಕ್ರಿಕೆಟ್ ನೋಡುವ ಹುಚ್ಚು

ಹಿಡಿದಿದೆ, ಇದೇ ಸಮಯಾ ಎಂದು ನಮ್ಮ ಸರ್ಕಾರಗಳು ಹಿಂದೀ ಕಾಮೆಂಟರಿಗೆ ಇನ್ನಿಲ್ಲದ ಪ್ರಾಮುಖ್ಯತೆ ಕೊಡಲು ಶುರು ಮಾಡಿದವು.

ಪ್ರಪಂಚದ ಯಾವುದೇ ಮೂಲೆಯಲ್ಲಿ ಕ್ರಿಕೆಟ್ ನಡೆದರೂ ನಡುರಾತ್ರಿ, ಮುಂಜಾನೆ ಅನ್ನುವ ಪರಿವೆ ಇಲ್ಲದೆ ಜನ ಟಿವಿಗಳ ಮುಂದೆ ಕೂಡಲಿಕ್ಕೆ ಶುರು ಮಾಡುತ್ತಿದ್ದಂತೇ ಹಿಂದೀ ಕಲಿಯಲು ಶುರು ಮಾಡಿಕೊಂಡರು. "ಅಣ್ಣಾ... ಏಕ್ ಸೌ ಉಂತೀಸ್ ಅಂದ್ರೆ ಎಷ್ಟಣ್ಣಾ?" "ಛೇ ವಿಕೆಟ್ ಖೋಕರ್, ನಿನ್ನಿಯಾನ್ಬೇ ರನ್ ಅಂದ್ರೆ ಎಷ್ಟು ಸಾರ್?" "ಓ ಇಕ್ಯಾವನ್ ಅಂದ್ರೆ ಐವತ್ತೊಂದಾ?" ಅನ್ನೋ ಡೈಲಾಗುಗಳು ಕನ್ನಡದ ಮನೆಮನೆಯಲ್ಲಿ ಸಾಮಾನ್ಯವಾಗಿ ಹೋಯಿತು. ಹಾಗೇ, ಅಲ್ಲೀತನಕಾ ನೀಲಕಂಠರಾವ್ ಥರದ ವೀಕ್ಷಕ ವಿವರಣೆಕಾರರಿಂದ ರೇಡಿಯೋಗಳಲ್ಲಿ ಕನ್ನಡದಲ್ಲಿ ಕೇಳಿಬರುತ್ತಿದ್ದ ಕಾಮೆಂಟರಿಗಳೂ ಕೊನೆಯಾಗಿಹೋದವು. ಇಷ್ಟೆಲ್ಲಾ ಬೆಳವಣಿಗೆ ಕಂಡ ಮೇಲೂ ನಮಗೆ ಕ್ರಿಕೆಟ್ ಕಾಮೆಂಟರಿ ಅನ್ನೋದು ಭಾರತ ಸರ್ಕಾರ ನಮಗೆಲ್ಲಾ ನುಂಗಿಸಲು ಮುಂದಾಗಿರುವ ಹಿಂದೀಹೇರಿಕೆಯೆಂಬ ವಿಷಕ್ಕೆ ಮೆತ್ತಿದ ಸಿಹಿ ಲೇಪನ ಅನ್ನುವುದು ಅರಿವಾಗಲಿಲ್ಲ.

## ಕನ್ನಡದ ಕಾಮೆಂಟರಿ : ಒಕ್ಕೂಟ ವ್ಯವಸ್ಥೆಗೆ ಗೌರವ!

ನಮ್ಮ ಮನರಂಜನೆ ನಮ್ಮ ನುಡಿಯಲ್ಲಿರಬೇಕು ಎನ್ನುವುದು ನಮ್ಮ ಮೂಲಭೂತ ಹಕ್ಕಾಗಿದೆ. ಬರೀ ಕಾಮೆಂಟರಿ ಮಾತ್ರವಲ್ಲ, ಟಿ.ವಿಯ ಜಾಹೀರಾತುಗಳು ಕೂಡಾ ಕನ್ನಡದಲ್ಲಿರುವುದು ಆಯಾ ಉತ್ಪನ್ನಗಳ ಮಾರಾಟ ನಮ್ಮ ನಾಡಲ್ಲಿ ಹೆಚ್ಚಲು ಸಹಾಯಕವಾಗುವ ಜೊತೆಯಲ್ಲಿ ಹಿಂದೀಹೇರಿಕೆಯ ಒಂದು ವಿಧಾನಕ್ಕೆ ಕೊನೆಹಾಡಲಿದೆ. ಒಕ್ಕೂಟ ವ್ಯವಸ್ಥೆಗೂ ಗೌರವ ಬರುತ್ತದೆ!

## ಹಿಂದೀ ಮನರಂಜನೆಯೆನ್ನುವ ಭಾಷಾಭಕ್ಷಕ

ದೇಶದ ಟಿವಿ ಮಾರುಕಟ್ಟೆ ಹೇಳ್ತಿರೊ ಕತೆ ಏನು? ಭಾರತದಾದ್ಯಂತ ಪತ್ರಿಕೆ, ಟಿವಿ, ಅಂತರ್ಜಾಲ, ರೇಡಿಯೊ, ಸಿನೆಮಾ ಮಾಧ್ಯಮಗಳ ಜಾಹೀರಾತಿನ ಮುನ್ನೋಟ, ಹಿನ್ನೋಟ ನೀಡುವ ‘ಪಿಚ್ ಮ್ಯಾಡಿಸನ್ ಮೀಡಿಯಾ ಅಡ್ವಟೈಸಿಂಗ್ ಔಟಲುಕ್ ಸರ್ವೆ’ ಹೊರತಂದಿರುವ ಮಾಹಿತಿ ಇಂತಿದೆ. ಸಮಾಜದ ಮೇಲೆ ದೊಡ್ಡ ಮಟ್ಟದಲ್ಲಿ ಪ್ರಭಾವ ಬೀರುವ ಟಿವಿ ಮಾಧ್ಯಮ ಯಾವ ರೀತಿ ಸಾಗುತ್ತಿದೆ, ಯಾವ ಭಾಷೆಗೆ ಎಷ್ಟು ಮಾರುಕಟ್ಟೆ ಇದೆ ಎಂಬ ಪಟ್ಟಿ ಹೀಗಿದೆ.

| ನುಡಿ | ಜನಸಂಖ್ಯೆ | ಜನಸಂಖ್ಯೆ % | ಟಿವಿ ಮಾರುಕಟ್ಟೆ % |
|---|---|---|---|
| ಹಿಂದೀ | ೪೨೨೦೪೮೬೪೨ | ೪೧.೦೩ | ೫೦.೯೪ |
| ಬೆಂಗಾಲಿ | ೮೩೩೬೯೭೬೯ | ೮.೧೧ | ೩.೩೧ |
| ತೆಲುಗು | ೭೪೦೦೨೮೫೬ | ೭.೧೯ | ೮.೩೬ |
| ಮರಾಠಿ | ೭೧೯೩೬೮೯೪ | ೬.೯೯ | ೩.೯೪ |
| ತಮಿಳು | ೬೦೭೯೩೮೧೪ | ೫.೯೧ | ೧೧.೦೬ |
| ಉರ್ದು | ೫೧೫೩೬೧೧೧ | ೫.೦೧ | ೦.೦೪ |
| ಗುಜರಾತಿ | ೪೬೦೯೧೬೧೭ | ೪.೪೮ | ೦.೩೪ |
| ಕನ್ನಡ | ೩೭೯೨೪೦೧೧ | ೩.೬೯ | ೪.೧೬ |
| ಮಲಯಾಳಂ | ೩೩೦೬೬೩೯೨ | ೩.೨೧ | ೨.೦೫ |
| ಒರಿಯಾ | ೩೩೦೧೭೪೪೬ | ೩.೨೧ | ೦.೩೬ |
| ಪಂಜಾಬಿ | ೨೯೧೦೨೪೭೭ | ೨.೮೩ | ೦.೪೮ |
| ಅಸ್ಸಾಮಿ | ೧೩೧೬೮೪೮೪ | ೧.೨೮ | ೦.೦೩ |
| ಇಂಗ್ಲೀಶ್ | | | ೯.೦೮ |
| ಇತರೆ | | | ೭.೩೧ |

ಮಾಹಿತಿ ಮೂಲ:

(http://www.pitchonnet.com/pitchmadisonmediaadvertisingoutlook/Review-2010-Television.asp)

**ಹೇಗಿದೆ ಟಿವಿ ಮಾರುಕಟ್ಟೆ ಭಾಷೆಯಾಧಾರದ ಮೇಲೆ ?**

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಹಿಂದೀ ಹೇರಿಕೆಗೆ ತುತ್ತಾಗಿ ಟಿ.ವಿ ಮಾರುಕಟ್ಟೆಯಲ್ಲಿ ಕೆಲವು ಭಾಷೆಗಳು ತಲುಪಿರುವ ಕೆಟ್ಟಸ್ಥಿತಿಯನ್ನು. ಇಲ್ಲಿ ಬೆಂಗಾಲಿ, ಗುಜರಾತಿ, ಪಂಜಾಬಿ, ಮರಾಠಿ, ಒರಿಯಾ, ಅಸ್ಸಾಮಿಯಂತಹ ನುಡಿಗಳ ಮಾರುಕಟ್ಟೆ ಸ್ಥಿತಿಯನ್ನು ಗಮನಿಸಿ. ಈ ನುಡಿಗಳನ್ನಾಡುವ ಜನರ ಸಂಖ್ಯೆಯ ಜೊತೆಗೆ ಈ ನುಡಿಗಳ ಟಿವಿ ಮಾಧ್ಯಮದ ಮಾರುಕಟ್ಟೆ ಪಾಲು ಹೋಲಿಸಿ ನೋಡಿದಾಗ ನಿಜಕ್ಕೂ ಅಚ್ಚರಿಯಾಗುತ್ತೆ. ಸಾಕಷ್ಟು ದೊಡ್ಡ ಸಂಖ್ಯೆಯಲ್ಲೇ ಈ ನುಡಿಗಳನ್ನಾಡುವ ಜನರಿದ್ದರೂ ತಮ್ಮ ನುಡಿಯಲ್ಲಿ ಸುದ್ದಿ,

ಮನರಂಜನೆಯಂತಹ ಮೂಲಭೂತ ಅಗತ್ಯಗಳನ್ನು ಪೂರ್ತಿಯಾಗಿ ಪೂರೈಸಿಕೊಳ್ಳಲಾಗದ, ಅದಕ್ಕೂ ಹಿಂದೀಯನ್ನೇ ನೆಚ್ಚಿಕೊಳ್ಳುವಂತಹ ಸ್ಥಿತಿ ಈ ಭಾಷೆಗಳಿಗೆ ಬಂದೊದಗಿದೆ (ಹಾಗೇ ಮಾಡಲಾಗಿದೆ ಅನ್ನಬಹುದು) ಅನ್ನುವುದು ವೈವಿಧ್ಯತೆಯನ್ನು ಎತ್ತಿ ಹಿಡಿಯಬೇಕಾದ ಭಾರತದ ಒಕ್ಕೂಟ ವ್ಯವಸ್ಥೆ ಹಿಂದೀ ಹೇರಿಕೆಯ ಮೂಲಕ ಮಾಡುತ್ತಿರುವ ತಪ್ಪು ಎಂತಹುದು ಅನ್ನುವುದನ್ನು ಎತ್ತಿ ತೋರಿಸುತ್ತೆ. ಸಹಜವಾಗಿ ಎಲ್ಲೆಲ್ಲಿ ಯಾವ ನುಡಿಯಲ್ಲಿ ಅಲ್ಲಿನ ವ್ಯವಸ್ಥೆಗಳಿರಬೇಕಿತ್ತೋ ಅಲ್ಲೆಲ್ಲ ಹಿಂದೀಗೆ ನೆಲೆ ಕಲ್ಪಿಸಿ, ಆ ನಾಡಿನ ನುಡಿಯನ್ನು ಮೂಲೆಗುಂಪು ಮಾಡುತ್ತಿರುವುದಕ್ಕೆ ಇದು ಇನ್ನೊಂದು ಉದಾಹರಣೆಯಷ್ಟೇ.

ಅಷ್ಟೇ ಅಲ್ಲ, ೨೦೦೧ರ ಜನಗಣತಿ ಪ್ರಕಾರ ಹಿಂದೀಭಾಷಿಕರ ಸಂಖ್ಯೆ ೪೧.೦೩% ಇದೆಯಂತೆ. ಆದ್ದರಿಂದ ಟಿವಿ ಮಾರುಕಟ್ಟೆಯಲ್ಲಿ ೫೧% ಮಾರುಕಟ್ಟೆ ಇರುವುದು ಸಹಜ ಅನ್ನಿಸಬಹುದು. ಆದರೆ ದಿಟವೇನೆಂದರೆ, ಹಿಂದೀಗೆ ಅಲ್ಪ ಸ್ವಲ್ಪ ಹೋಲುವ ಎಲ್ಲ ಭಾಷೆಗಳನ್ನು ಹಿಂದೀಯ ಉಪಭಾಷೆಗಳೆಂದು ಕೇಂದ್ರಸರ್ಕಾರವೇ ಕರೆದು ಅವುಗಳನ್ನ ಸಾರಾಸಗಟಾಗಿ ಹಿಂದೀಯೇ ಎಂದು ಮಾಡಿಕೊಂಡಿದ್ದಾರೆ. ಉದಾಹರಣೆಗೆ, ಹೀಗೆ ಹಿಂದೀ ಎಂದು ಕೇಂದ್ರಸರ್ಕಾರದಿಂದಲೇ ಕರೆಯಲ್ಪಡುತ್ತಿರುವ ಅವಧಿ, ಹರ್ಯಾಣ್ವಿ, ಬುಂಧೇಲಿ, ಕನೌಜಿ, ಬ್ರಜ್, ಭೋಜಪುರಿ, ಮೈಥಿಲಿ, ಮಾರ್ವಾಡಿ, ಬಗೇಲಿ, ಚತ್ತಿಸ್‌ಗರಿ, ಧನ್ವಾರ್ ಮುಂತಾದ ನುಡಿಗಳಿಗೆ ತಮ್ಮದೇ ಆದ ಹಲವು ನೂರುವರ್ಷಗಳ ಇತಿಹಾಸವಿದೆ. ಆದರೆ ಈ ಎಲ್ಲ ವಿಶಿಷ್ಟ ನುಡಿಗಳನ್ನು ಹಿಂದೀ ಎನ್ನುವ ಹೊದಿಕೆಯಡಿ ತಂದು ಆ ಎಲ್ಲ ವೈವಿಧ್ಯತೆಯನ್ನು ಅಳಿಸಿ, ಅಲ್ಲೆಲ್ಲ ಹಿಂದೀಯನ್ನು ಸ್ಥಾಪಿಸಿರುವುದು ಸ್ವಲ್ಪ ಗಮನಿಸಿದರೂ ಕಂಡೀತು. ವೈವಿಧ್ಯತೆಯನ್ನು ಶಾಪವೆಂದು ಪರಿಗಣಿಸುವ, ವೈವಿಧ್ಯತೆಯನ್ನು ಅಳಿಸಿವುದೇ ಒಗ್ಗಟ್ಟು ಸಾಧಿಸುವ ವಿಧಾನವೆನ್ನುವ ಮನಸ್ಥಿತಿ ಇರುವವರೆಗೆ ಈ ರೀತಿಯ ಅಧರ್ಮದ ಹಾದಿಯ ಕೆಲಸಗಳಿಗೆ ಕೊನೆಯಿಲ್ಲ ಅನ್ನಬಹುದು.

**ಭಾರತಕ್ಕೆ ಬೇಕು ಹೊಸ ಭಾಷಾನೀತಿ!**

ಭಾರತಕ್ಕೆ ಟಿವಿ ಬಂದ ಹೊಸತರಲ್ಲಿ ಹೇಗಿತ್ತು ಒಮ್ಮೆ ನೆನೆಸಿಕೊಳ್ಳಿ. ೧೯೮೨ರಲ್ಲಿ ಶುರುವಾದ ಕೇಂದ್ರ ಸರ್ಕಾರಿ ಪ್ರಾಯೋಜಿತ ದೂರದರ್ಶನವೆಂಬ ಹಿಂದೀಹೇರಿಕೆಯ ಸಾಧನ ನಿರಾಂತಕವಾಗಿ ೧೯೯೧ರವರೆಗೆ ನಡೆದಿತ್ತು. ದೇಶದ ಬೇರೆಲ್ಲ ಭಾಷೆಗಳಿಗೆ ವಾರಕ್ಕೊಮ್ಮೆ ಭಿಕ್ಷೆಯಂತೆ ೨-೩ಗಂಟೆಯ ಅವಕಾಶ ಕೊಟ್ಟು

ಬೇರೆಲ್ಲ ಸಮಯದಲ್ಲಿ ಹಿಂದೀ ಮಾತ್ರ ಪ್ರಸಾರ ಮಾಡಿ ಹಿಂದೀಯನ್ನು ವ್ಯವಸ್ಥಿತವಾಗಿ ಜನರ ಮೇಲೆ ಹೇರುವ ಮತ್ತು ಆ ಮೂಲಕ ಅದಕ್ಕೆ ಜನರ ಮನವೊಲಿಸುವ ಕೆಲಸ ನಡೆದಿತ್ತು. ೧೯೯೧ರಲ್ಲಿ ಒಮ್ಮೆ ಜಾಗತೀಕರಣಕ್ಕೆ ಭಾರತ ತೆರೆದುಕೊಂಡ ನಂತರ ಹಿಂದೀಯೇತರ ನುಡಿಯಲ್ಲೂ ಖಾಸಗಿ ವಾಹಿನಿಗಳು ಶುರುವಾಗುವ ಮೂಲಕ ಹಿಂದೀಹೇರಿಕೆಯೆಂಬ ಅಮಾನವೀಯ ನಡೆಯಿಂದ ಹಿಂದೀಯೇತರರಿಗೆ ಈ ವಿಷಯದಲ್ಲಿ ಬಿಡುಗಡೆ ದೊರಕಿದ್ದು. ಗಟ್ಟಿಯಾಗಿರುವ ತನ್ನತನ, ಸಬಲವಾದ ಸಿನಿಮಾ ಉದ್ಯಮ ಕಟ್ಟಿಕೊಂಡಿರುವ ದಕ್ಷಿಣ ಭಾರತದ ತಮಿಳು, ತೆಲುಗು, ಕನ್ನಡ ಭಾಷೆಗಳೇ ತಕ್ಕಮಟ್ಟಿಗೆ ಹಿಂದೀಭಾಷೆಯ ಸಾಂಸ್ಕೃತಿಕ ದಾಳಿಗೆ ತುತ್ತಾಗದೇ ತಮ್ಮ ತಮ್ಮ ಭಾಷೆಗಳ ಮಾರುಕಟ್ಟೆಯನ್ನು ಉಳಿಸಿಕೊಂಡಿವೆ ಎನ್ನಬಹುದು. ಇವತ್ತು ಅಸ್ಸಾಮಿಸ್, ಬೆಂಗಾಳಿ, ಮರಾಠಿ, ಒರಿಯಾ, ಗುಜರಾತಿ ನುಡಿಗಳಿಗೆ ಬಂದೊದಗಿರುವ ಕುತ್ತು ನಾಳೆ ನಮಗೂ ಬರಬಹುದು ಅನ್ನಿಸದೇ? ವೈವಿಧ್ಯತೆ ಅಳಿಸುವ ಯಾವ ಹೇರಿಕೆಯೂ ಸಲ್ಲದು ಅನ್ನಿಸದೇ? ಭಾರತದ ಎಲ್ಲಾ ಭಾಷೆಗಳನ್ನೂ, ಭಾಷಿಕರನ್ನೂ ಸಮಾನವೆಂದು ಕಾಣುವ ಭಾಷಾನೀತಿಯೊಂದೇ ವೈವಿಧ್ಯತೆಯನ್ನು ಕಾಪಾಡುವ, ಆ ಮೂಲಕ ಬಹು ಭಾಷಿಕರ ನಡುವೆ ಒಗ್ಗಟ್ಟು ಹೆಚ್ಚಿಸುವ ಸಾಧನವಾಗಬಹುದೇ ಹೊರತು ಈ ರೀತಿ "ಒಂದು ದೇಶ – ಒಂದು ಭಾಷೆ" ಅನ್ನುವ ಮನಸ್ಥಿತಿಯಲ್ಲ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.

## ಕಲಿಕೆಯಲ್ಲಿ ಹಿಂದೀ ಹೇರಿಕೆ

ಹಿಂದೀಹೇರಿಕೆಯ ಕರಾಳಹಸ್ತ ಮೊದಲು ಚಾಚಿರುವುದೇ ನಮ್ಮ ಮಕ್ಕಳ ಮುಗ್ಧ ಮನಗಳ ಮೇಲೆ. ಎಷ್ಟೋ ಶಾಲೆಗಳಲ್ಲಿ ನಮ್ಮ ಮಕ್ಕಳಿಗೆ 'ಹಿಂದೀ ನಮ್ಮ ರಾಷ್ಟ್ರಭಾಷೆ' ಎಂದೇ ಹೇಳಿಕೊಡಲಾಗುತ್ತಿದೆ ಎಂಬ ಅನುಮಾನ ಶಾಲಾಮಕ್ಕಳನ್ನು ಮಾತಾಡಿಸಿದಾಗ ಮೂಡುತ್ತದೆ. ಭಾರತ ಸಂವಿಧಾನದ ಯಾವ ಸಾಲಿನಲ್ಲೂ ಇಲ್ಲದ ಈ ಮಾತನ್ನು ಹೇಳಿಕೊಡುತ್ತಾ ಹೀಗೆ ಇಲ್ಲದ ಪ್ರಾಮುಖ್ಯತೆಯನ್ನು ಮಕ್ಕಳ ಮನದಲ್ಲಿ ಹಿಂದೀಯೆಡೆಗೆ ಹುಟ್ಟುಹಾಕಲಾಗುತ್ತಿದೆ. ನಮ್ಮ ಶಾಲೆಗಳಲ್ಲಿ 'ಬೋಲೋ ಭಾರತ್ ಮಾತಾಕಿ ಜೈ' ಎಂದು ಹೇಳಿ ಕೊಡಲಾಗುತ್ತದೆಯೇ ಹೊರತು 'ಭಾರತಾಂಬೆಗೆ ಜಯವಾಗಲಿ' ಎಂದು ಹೇಳಿಕೊಡುವುದಿಲ್ಲ. 'ಸಾರೆ ಜಹಾಸೆ ಅಚ್ಛಾ...' ಹಾಡಿನ ಮೂಲಕ 'ಹಿಂದೀ ಹೈ ಹಮ್' ಎನ್ನುವ ಗಿಳಿಪಾಠವಾಗುತ್ತದೆ. ನಮ್ಮ ದೈಹಿಕ ಶಿಕ್ಷಣ ತರಗತಿಗಳಲ್ಲೂ 'ದೇನೇ ಮೂಡ್, ಪೀಛೇ ಮೂಡ್, ಆಗೇ ಮೂಡ್'ಗಳೇ ತುಂಬಿವೆ. ಶಾಲೆಗಳಲ್ಲಿ ನಡೆಯುವ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯೋತ್ಸವಗಳಲ್ಲಿ ಮಕ್ಕಳಿಂದ ಹಾಡಿಸುವ ದೇಶಭಕ್ತಿ ಗೀತೆಗಳಲ್ಲಿ, ಕಾರ್ಯಕ್ರಮದ ನೃತ್ಯಗಳಲ್ಲಿ ಹಿಂದೀ ಹಾಡುಗಳಿಗೇ ಪ್ರಮುಖ ಸ್ಥಾನವಿರುವುದನ್ನು ನಾಡಿನ ಅನೇಕ ಶಾಲೆಗಳಲ್ಲಿ ನೋಡಬಹುದಾಗಿದೆ. ನಮ್ಮ ನಾಡಹಬ್ಬವಾದ ನವರಾತ್ರಿಯನ್ನು ಅನವಶ್ಯಕವಾಗಿ ದಶೇರಾ ಎಂದು ಉತ್ತರಭಾರತದ ಶೈಲಿಯಲ್ಲಿ ಸಂಬೋಧಿಸಲಾಗುತ್ತದೆ. ಈ ರೀತಿಯ ಬೇರೆ ಸಂಸ್ಕೃತಿಯ ವೈಭವೀಕರಣವು ನಮ್ಮ ಮಕ್ಕಳ ಮನದಲ್ಲಿ ನಮ್ಮತನದ ಬಗ್ಗೆ ತಿರಸ್ಕಾರಕ್ಕೆ, ಅಸಡ್ಡೆಗೆ ಕಾರಣವಾಗುತ್ತವೆ.

ಪ್ರಾಥಮಿಕ ಶಾಲೆಯ ಹಂತದಿಂದಲೇ ತ್ರಿಭಾಷಾ ಸೂತ್ರದ ಶಿಲುಬೆಯನ್ನು ಕನ್ನಡದ ಕಂದಮ್ಮಗಳ ಎಳೆಯ ಬೆನ್ನಿನ ಮೇಲೆ ಹೇರಲಾಗುತ್ತಿದೆ. ಹಿಂದೆಲ್ಲಾ ಉತ್ತೀರ್ಣವಾಗುವುದು ಕಡ್ಡಾಯವಾಗಿರದಿದ್ದ ಹಿಂದೀ ಪರೀಕ್ಷೆಯಲ್ಲಿ ಇದೀಗ ಉತ್ತೀರ್ಣವಾಗಬೇಕಿರುವುದು ಕಡ್ಡಾಯವಾಗಿದೆ. ಕನ್ನಡ ಭಾಷಿಕರಾದ ನಮಗೆ ಕನ್ನಡವಲ್ಲದ ಎಲ್ಲವೂ ಪರಭಾಷೆಗಳೇ ಆಗಿವೆ. ಇದರಲ್ಲಿ ಯಾವುದು ಉಪಯುಕ್ತವೋ ಅದನ್ನು ಕಲಿಯುವ ಆಯ್ಕೆ ಇರಲಿ. ಅದರಲ್ಲೂ ನಮ್ಮ ಪಟ್ಟಣಗಳಲ್ಲಿ ಮೊದಲನೆ ತರಗತಿಯಿಂದಲೇ ಹಿಂದೀಯ ಭೋಧನೆ ನಡೆಯುತ್ತಿದೆ. ಇದರಿಂದ ಒಂದು ಮಗು ತನ್ನ ತಾಯಿನುಡಿಯನ್ನು ಕಲಿಯುವುದಕ್ಕೆ ಮುಂಚಿತವಾಗಿಯೇ ಹಿಂದೀಗೆ ನೈತಾಡಬೇಕಾಗುತ್ತದೆ. ಬಾಲ್ಯದಲ್ಲೇ ಈ ಸ್ಥಿತಿ

ಮಕ್ಕಳಿಗೆ ಹೊರೆಯಾಗಿದೆ. ನಮ್ಮ ಮಕ್ಕಳಿಗೆ ಮೂರನೆಯ ಭಾಷೆಯ ಆಯ್ಕೆಯ ಸ್ವಾತಂತ್ರವಿರಲಿ. ಎಲ್ಲ ಭಾರತೀಯ ಭಾಷೆಗಳಿಗೂ ಒಂದೇ ಸ್ಥಾನಮಾನವಿರುವಾಗ ಹಿಂದೀಗೆ ಮಾತ್ರ ಏಕೆ ಈ ವಿಶೇಷ ಮನ್ನಣೆ?

ರಾಜ್ಯಗಳಿಗೆ ಉಪಕಾರ ಮಾಡುವಂತೆ ಕೇಂದ್ರೀಯ ಪಠ್ಯಕ್ರಮದ ಶಾಲೆಗಳನ್ನು ಆರಂಭಿಸುವುದು ಮತ್ತೊಂದು ಬಗೆಯ ಹೇರಿಕೆ. ಮೂಲತಃ ಕೇಂದ್ರೀಯ ಪಠ್ಯಕ್ರಮದ ಶಾಲೆಗಳನ್ನು ಕೇಂದ್ರಸರ್ಕಾರಿ ಶಾಲಾಮಕ್ಕಳಿಗಾಗಿ, ರಾಜ್ಯದಿಂದ ರಾಜ್ಯಕ್ಕೆ ವಲಸೆ ಹೋಗುವವರ ಮಕ್ಕಳ ಸಲುವಾಗಿ ಆರಂಭಿಸಲಾಗಿದೆ. ಹಾಗಾಗಿ, ಅಂತಹ ವಲಸೆಗೆ ಈಡಾಗಬಲ್ಲ ಮಕ್ಕಳ ಸಂಖ್ಯೆಯ ಆಧಾರದ ಮೇರೆಗೆ ಮಾತ್ರವೇ ಕೇಂದ್ರೀಯ ಪಠ್ಯಕ್ರಮದ ಶಾಲೆಗಳನ್ನು ಆರಂಭಿಸಬೇಕಾಗಿದೆ. ಕರ್ನಾಟಕ ಸರ್ಕಾರವಾದರೋ ಇಂತಹ ಶಾಲೆಗಳು ರಾಜ್ಯದ ಭಾಷಾನೀತಿಗೆ ಅನುಗುಣವಾಗಿಯೇ ನಡೆದುಕೊಳ್ಳಬೇಕೆಂಬ ಕರಾರಿಗೆ ಒಪ್ಪಿಸಿಯೇ ಅನುಮತಿ ನೀಡಬೇಕಾಗಿದೆ. ಇವೆಲ್ಲಾ ಕಾನೂನು ಪುಸ್ತಕದ ಮಾತಾಯಿತು. ಬೀದಿಯ ದಿಟ ಬೇರೆಯೇ ಆಗಿದೆ. ನಾಯಿಕೊಡೆಗಳಂತೆ ಕೇಂದ್ರೀಯ ಪಠ್ಯಕ್ರಮದ ಶಾಲೆಗಳು ತಲೆಯೆತ್ತಿವೆ. ಇಲ್ಲೆಲ್ಲಾ ಹಿಂದೀ ಕಲಿಕೆ ಕಡ್ಡಾಯವೇ ಆಗಿದೆ. ಇನ್ನು ಸರ್ಕಾರವೇ ಜಿಲ್ಲೆಗೊಂದರಂತೆ ಆರಂಭಿಸಿರುವ ನವೋದಯ ಶಾಲೆಗಳ ಬಗ್ಗೆಯೂ ಇಂಥದೇ ಕಥೆ ಹೇಳಬೇಕಾಗಿದೆ.

## ಬರಲಿದೆ ಹಿಂದೀ ಹೇರಿಕೆಯ ಹೊಸ ಅಸ್ತ್ರ!

ಭಾರತ ಸರ್ಕಾರದ ಮಾನವ ಸಂಪನ್ಮೂಲ ಸಚಿವರಾದ ಶ್ರೀ ಕಪಿಲ್ ಸಿಬಾಲ್‌ರವರು ಇಡೀ ಭಾರತದ ಮೂಲೆ ಮೂಲೆಯಲ್ಲಿರೋ ಎಲ್ಲಾ ಶಾಲೆಗಳಲ್ಲಿ ಹಿಂದೀಯನ್ನು ಕಡ್ಡಾಯವಾಗಿ ಕಲಿಸಬೇಕು ಎಂದಿದ್ದಾರೆಂದು ೨೦೦೯ರ ಆಗಸ್ಟ್ ೨೫ರ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯಲ್ಲಿ ಸುದ್ದಿ ಪ್ರಕಟವಾಗಿತ್ತು. ಭಾರತ ಸರ್ಕಾರದ ಕೇಂದ್ರ ಮಂತ್ರಿಯೊಬ್ಬರು ಇಡೀ ದೇಶದ ಎಲ್ಲಾ ಶಾಲೆಗಳಲ್ಲಿ ಯಾಕೆ ಹಿಂದೀ ಭಾಷೆಯನ್ನು ಕಲಿಸಬೇಕೆನ್ನುತ್ತಾರೆ ಎಂದು ನೋಡಿದರೆ ಅವರಿಗೆ ಇರುವ ಹಿಂದೀ ಸಾಮ್ರಾಜ್ಯ ಶಾಹಿ ಮನಸ್ಥಿತಿ ಕಾಣುತ್ತದೆ.

# Teach Hindi in all schools: Sibal




Manash Pratim Gohain, TNN Aug 25, 2009, 02.30am IST

NEW DELHI: Human resource development minister Kapil Sibal presented a proposal for a core curriculum for mathematics and science in all school boards on Monday at a two-day annual conference of Council of Boards of School Education in India (COBSE).

The minister also urged the boards to ensure fluency of three languages among students, and said the knowledge of Hindi would aid in national integration.

Stating that India should now be a producer of knowledge, rather than a recipient, Sibal said: "We should set up a system of core curriculum in respect of professional courses. There should a core curriculum for maths and science and a one-time exam to enter the university system for professional courses. This will ensure a level of uniform and equivalence of quality. Subjects relating to environment and others can be different according to the state and city. But why should science and maths be different?"

## ಏಕತೆಗೆ ಹಿಂದೀ ಬೇಕೆನ್ನುವ ಹುಸಿ ರಾಷ್ಟ್ರೀಯತೆ!

ಇವರು ಹೇಳಿದ್ದು 'ಸಾಂಸ್ಕೃತಿಕ ಏಕತೆಗೆ ತಾಯ್ನುಡಿಯಂತೆ, ರಾಷ್ಟ್ರೀಯ ಏಕತೆಗೆ ಹಿಂದೀಯಂತೆ, ಇಂಗ್ಲೀಷು ಜಾಗತಿಕವಾಗಿ ಅನುಕೂಲ ಮಾಡಲಿಕ್ಕಂತೆ! ಅಂದರೆ ಇವರ ಪ್ರಕಾರ ಕನ್ನಡದವರು ಹಿಂದೀ ಕಲಿಯದಿದ್ದಲ್ಲಿ ಭಾರತದ ಏಕತೆಗೆ ಧಕ್ಕೆ ತಗುಲುತ್ತದೆಯೇ? ಈಗಾಗಲೇ ಹಿಂದೀ ನಮ್ಮ ಕೆಲಸ ಬೊಗಸೆ ಬದುಕುಗಳನ್ನು ಮೂರಾಬಟ್ಟೆ ಮಾಡಲು ಮುಂದಾಗಿರುವುದನ್ನು ನೋಡಿದ್ದೇವೆ. ಇನ್ನು ಶಾಲೆಗಳಲ್ಲಿಯೂ ಹಿಂದೀಯನ್ನು ಕಡ್ಡಾಯ ಮಾಡಿಬಿಟ್ಟರೆ ಇದು ನಮ್ಮ ಮಕ್ಕಳಿಗೆ ಕಲಿಕೆಯನ್ನು ತೊಡಕು ಮಾಡುವಲ್ಲೊಂದು ಕಾಣಿಕೆ ಸಲ್ಲಿಸುತ್ತದೆ, ಅಷ್ಟೆ. ಅಷ್ಟಕ್ಕೂ ಯಾಕೆ ಬೆಂಗಾಲಿಗಳು, ಕನ್ನಡಿಗರು, ತಮಿಳರು, ಮರಾಠಿಗರು, ಗುಜರಾತಿಗಳು, ಸಿಂಧಿಗಳು, ಪಂಜಾಬಿಗಳು, ತೆಲುಗರು... ಸೇರಿದಂತೆ ಹಿಂದೀಯೇತರ ಭಾರತೀಯರೆಲ್ಲಾ ತಮ್ಮದಲ್ಲದ ಹಿಂದೀಯನ್ನು ಕಲಿಯಬೇಕು? ಒಂದು ಭಾಷೆ ಇದ್ದರೆ ಮಾತ್ರವೇ ಏಕತೆ ಎನ್ನುವ ಮನಸ್ಥಿತಿ ಭಾರತವನ್ನು ಒಗ್ಗೂಡಿಸದು, ಬದಲಾಗಿ ಒಡೆದೀತು. ಪ್ರತಿ ಪ್ರದೇಶದ ಅನನ್ಯತೆ ಕಾಪಾಡಲಿಕ್ಕೆ ಸಿದ್ಧವಿಲ್ಲದ ವ್ಯವಸ್ಥೆ ಬೇಗ ಕುಸಿಯುತ್ತದೆ! ಹಾಗಾಗಬಾರದು ಎನ್ನುವುದೇ ನಮ್ಮ ಕಳಕಳಿ. ಇದೇ ಭಾರತೀಯರೆಲ್ಲರ ಕಳಕಳಿ. ನಮ್ಮ ಮೇಲೆ ಯಾವ ತೆರನಾದ ಹೇರಿಕೆಯೂ ಇಲ್ಲದೇನೇ, ಬರೀ ನಮ್ಮತನವನ್ನೇ ಇಟ್ಟುಕೊಂಡು ನಾವೆಲ್ಲಾ ರಾಷ್ಟ್ರೀಯ ಏಕತೆ ಸಾಧಿಸಲು ಆಗುವುದಿಲ್ಲವೇನು? ಆಗುವುದಿಲ್ಲಾ ಎನ್ನುವುದಾದರೆ, ಹೇಗೆ ಹಿಂದೀ ಭಾಷೆಯನ್ನು ಕಡ್ಡಾಯ ಮಾಡುವ ಹೇರಿಕೆಯಿಂದ ಆದೀತಾ?

## ರಾಜ್ಯದಲ್ಲಿ CBSE ಶಾಲೆಗಳಿಗೆ ಅನುಮತಿ: ಹೇಗೆಂದು ಬಲ್ಲಿರಾ?

ಸೆಂಟ್ರಲ್ ಬೋರ್ಡ್ ಆಫ್ ಸೆಕೆಂಡರಿ ಎಜುಕೇಷನ್ (ಸಿ.ಬಿ.ಎಸ್.ಇ) ತನ್ನ ಪಠ್ಯಕ್ರಮವನ್ನು ಅನುಸರಿಸಲು ಸಿದ್ಧವಾಗಿರುವ ವಿದ್ಯಾಸಂಸ್ಥೆಗಳಿಗೆ ಆಯಾ ರಾಜ್ಯಸರ್ಕಾರಗಳಿಂದ ನಿರಪೇಕ್ಷಣಾ ಪತ್ರ (N.O.C) ಸಲ್ಲಿಸಬೇಕು ಎನ್ನುವ ನಿಯಮವನ್ನು ಹೊಂದಿದೆ. ಖಾಸಗಿ, ಅನುದಾನಿತ, ಸರ್ಕಾರಿ ಯಾವುದೇ ಶಾಲೆಯಿದ್ದರೂ ರಾಜ್ಯಸರ್ಕಾರದ ಅನುಮತಿಯಿಲ್ಲದೆ ಅವಕ್ಕೆ ಮಾನ್ಯತೆಯನ್ನು ನೀಡುವಂತೆ ಇಲ್ಲ.

## ನಿರಪೇಕ್ಷಣಾ ಪತ್ರ ಕೊಡಲು ಇರೋ ನಿಯಮಾ...

ಕರ್ನಾಟಕ ಸರ್ಕಾರವೂ ಕೂಡಾ ಸಿ.ಬಿ.ಎಸ್.ಇ ಶಾಲೆಗಳಿಗೆ ನಿರಪೇಕ್ಷಣಾ ಪತ್ರ ಕೊಡಲಿಕ್ಕೆಂದೇ ಒಂದು ನಿಯಮವನ್ನು, ೧೯೮೯ರಲ್ಲೇ ಮಾಡಿದೆ. ಅದಕ್ಕೆ ಆಗಿಂದಾಗ್ಗೆ ತಿದ್ದುಪಡಿಗಳನ್ನೂ ಮಾಡಿಕೊಂಡು ಬಂದಿದೆ. ಈ ನಿಯಮದಲ್ಲಿರೋ ಪ್ರಮುಖವಾದ ಅಂಶಗಳು ಹೀಗಿವೆ.

- ಒಂದರಿಂದ ಐದನೇ ತರಗತಿಯವರೆಗೆ ಕಡ್ಡಾಯವಾಗಿ ಮಾತೃಭಾಷೆ ಅಥವಾ ಕನ್ನಡ ಮಾಧ್ಯಮವನ್ನು ಹೊಂದಿರತಕ್ಕದ್ದು.

- ರಾಜ್ಯದಿಂದ ರಾಜ್ಯಕ್ಕೆ ವರ್ಗಾವಣೆಗೆ ಬದ್ಧರಾದ ಅಖಿಲ ಭಾರತ ಸೇವೆ, ಕೇಂದ್ರಸರ್ಕಾರದ ಸೇವೆ ಮತ್ತು ಕೇಂದ್ರಸರ್ಕಾರಿ ಉದ್ದಿಮೆಗಳಿಗೆ ಸೇರಿದ ಪೋಷಕರ ಮಕ್ಕಳಿದ್ದಲ್ಲಿ (ಇದನ್ನು ಪುಷ್ಟೀಕರಿಸಲು ಸಂಬಂಧಪಟ್ಟ ಇಲಾಖೆ/ ಸಂಸ್ಥೆಗಳಿಂದ ಧೃಡೀಕರಣ ಪತ್ರ ಸಲ್ಲಿಸುವುದು)

- ಒಂದಕ್ಕಿಂತ ಹೆಚ್ಚು ರಾಜ್ಯಗಳಲ್ಲಿ ಶಾಖೆಗಳನ್ನು ಹೊಂದಿದ ಹಾಗೂ ಅಂತರರಾಜ್ಯ ವರ್ಗಾವಣೆಗೆ ಒಳಪಡುವ ಬ್ಯಾಂಕ್‌ಗಳು, ಸಂಸ್ಥೆಗಳು (ಫರ್ಮುಗಳು) ಅಥವಾ ವಾಣಿಜ್ಯ ಸಂಸ್ಥೆಗಳಲ್ಲಿ ಕೆಲಸ ಮಾಡುವ ಪೋಷಕರ ಮಕ್ಕಳಿದ್ದಲ್ಲಿ (ಇದನ್ನು ಪುಷ್ಟೀಕರಿಸಲು ಸಂಬಂಧಪಟ್ಟ ಬ್ಯಾಂಕ್/ ಸಂಸ್ಥೆಗಳಿಂದ ಧೃಡೀಕರಣ ಪತ್ರ ಸಲ್ಲಿಸುವುದು)

– ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಸೂಚನೆಗಳನ್ನು ಪಾಲಿಸಿರಬೇಕು/ ಪಾಲಿಸಬೇಕು.

ಇದಕ್ಕೆ ೨೦೦೨ರಲ್ಲಿ ಒಂದು ತಿದ್ದುಪಡಿ ಮಾಡಿ, 'ಕರ್ನಾಟಕ ರಾಜ್ಯಸರ್ಕಾರದ ಭಾಷಾನೀತಿಯನ್ನು ಕಾಲಕಾಲಕ್ಕೆ ನಿಗದಿಪಡಿಸಿದಂತೆ ಪಾಲಿಸತಕ್ಕದ್ದು' ಎಂದು ಸೇರಿಸಿದ್ದಾರೆ.

**ಸರ್ಕಾರದ ನಿಲುವು ಸರಿಯೇ?**

ಹೊಸದಾಗಿ ಅನುಮತಿ ನೀಡುವ ಮುನ್ನ ರಾಜ್ಯಸರ್ಕಾರವು, ಕೇಂದ್ರಸರ್ಕಾರಿ ನೌಕರರ ಮಕ್ಕಳು, ವರ್ಗಾವಣೆಗೆ ಈಡಾಗಬಲ್ಲ ಮಕ್ಕಳು ಇರುವುದರ ಬಗ್ಗೆ ಎಲ್ಲಾ ನಿಯಮಗಳನ್ನು ಅನುಸರಿಸಲಾಗಿದೆಯೇ ಎಂದು ನೋಡಲಿ. ರಾಜ್ಯಸರ್ಕಾರ, ತಾನೇ ವಿಧಿಸಿರುವ ಭಾಷಾನೀತಿಯ ಬಗೆಗಿನ ನಿಯಮಗಳನ್ನು ಉಲ್ಲಂಘನೆ ಮಾಡುತ್ತಿದೆಯೇ? ಅಷ್ಟೇಕೆ ಇದುವರೆಗೂ ನಮ್ಮ ರಾಜ್ಯದಲ್ಲಿ ನಡೆಯುತ್ತಿರುವ ಸಿ.ಬಿ.ಎಸ್.ಇ ಶಾಲೆಗಳಲ್ಲೆಲ್ಲಾ ಒಂದರಿಂದ ಐದನೇ ತರಗತಿಯವರೆಗೆ ಮಾತೃಭಾಷೆಯಲ್ಲಿ/ ಕನ್ನಡದಲ್ಲಿ ಕಲಿಸುತ್ತಿದ್ದಾರೆಯೇ? ಅನ್ನೋದನ್ನೆಲ್ಲಾ ನೋಡಲಿ. ಆಗ ದಿಟ ಕಾಣುತ್ತದೆ.

## ನವೋದಯ ಶಾಲೆ: ಸಿಹಿ ಮೆತ್ತಿದ ಹಿಂದೀ ವಿಷ!

ಭಾರತ ಸರ್ಕಾರವು ೧೯೮೫ರಲ್ಲಿ ಶುರುಮಾಡಿದ ಒಂದು ಹೊಸ ಬಗೆಯ ವಿಶಿಷ್ಟವಾದ ಕಲಿಕಾ ಪದ್ದತಿಯ ಹೆಸರೇ "ನವೋದಯ ವಿದ್ಯಾಲಯ ವ್ಯವಸ್ಥೆ". ಇದರ ಅತ್ಯಾಕರ್ಷಕವಾದ ಅಂಶವೆಂದರೆ ಇದರ ಘೋಷಿತ ಉದ್ದೇಶ. "ಭಾರತದಲ್ಲಿರುವ ಪ್ರತಿಭಾವಂತರೂ, ಬಡವರೂ, ಹಳ್ಳಿಯವರೂ ಆಗಿರುವ ಮಕ್ಕಳಿಗೆ ಉತ್ಕೃಷ್ಟ ಗುಣಮಟ್ಟದ ಶಿಕ್ಷಣವನ್ನು ದೊರಕಿಸಿಕೊಡುವುದು." ಈ ನವೋದಯ ವಿದ್ಯಾಲಯ ಪದ್ದತಿಗಾಗೇ ಕೇಂದ್ರಸರ್ಕಾರ ಕೋಟಿಗಟ್ಟಲೆ ಹಣ ಮೀಸಲಿಟ್ಟಿದೆ. ಆದರೆ ಈ ಕಲಿಕಾ ಏರ್ಪಾಟಿನಲ್ಲಿ ನಮ್ಮ ತೆರಿಗೆ ಹಣ ಖರ್ಚಾಗುವುದು ಹಿಂದೀ ಹೇರಿಕೆಗಾಗಿ ಎಂಬುದೇ ದಿಟವಾಗಿದೆ.

**ಮೇಲೆ ಮೆತ್ತಿರುವ ಸಿಹಿ!**

ಇಡೀ ಭಾರತದಲ್ಲಿ ಇದನ್ನು ಸ್ಥಾಪಿಸುವಾಗ ಹೇಳಿದ ಉದ್ದೇಶಗಳು ಬಡಮಕ್ಕಳಿಗೆ ಅದರಲ್ಲೂ ಹಳ್ಳಿಗಾಡಿನ ಮಕ್ಕಳಿಗೆ ಗುಣಮಟ್ಟದ ಶಿಕ್ಷಣವನ್ನು ದೊರಕಿಸಿಕೊಡುವುದು. ನಿಜಕ್ಕೂ ಎಂತಹ ಅದ್ಭುತವಾದ ಕಾರ್ಯಕ್ರಮ ಇದು. ನಮ್ಮ ಹಳ್ಳಿಗಾಡುಗಳಲ್ಲಿರುವ ಪ್ರತಿಭಾವಂತ ಮಕ್ಕಳಿಗೆ, ಪಟ್ಟಣಿಗರಿಗೆ ಸಿಗುತ್ತಿರುವ ಕಲಿಕೆ ಸಿಗದಿರುವಂತಾಗಿರುವುದನ್ನು ಸರಿಪಡಿಸಲು ಈ ಕ್ರಮ ತೆಗೆದುಕೊಳ್ಳಲಾಗಿದೆ ಎನ್ನಿಸುವುದು ಸಹಜ. ಇಲ್ಲಿ ಉಚಿತವಾದ ವಸತಿ ನಿಲಯ, ಊಟ, ಬಟ್ಟೆಯ ವ್ಯವಸ್ಥೆಗಳಿವೆ. ಶುಲ್ಕ ತಿಂಗಳಿಗೆ ೨೦೦ ರೂಪಾಯಿ ಮಾತ್ರಾ. ಪರಿಶಿಷ್ಟ ಜಾತಿ, ವರ್ಗ, ಬಡವರು, ಹೆಣ್ಣುಮಕ್ಕಳಿಗಂತೂ ಸಂಪೂರ್ಣ ಉಚಿತ. ಇಲ್ಲಿನ ಶಾಲೆಗಳಲ್ಲಿ ಅದ್ಭುತವಾದ ಮೂಲಸೌಕರ್ಯಗಳಿವೆ. ಪ್ರತಿಶಾಲೆಯೂ ಹಳ್ಳಿಯ ಪರಿಸರದಲ್ಲಿದ್ದು ಸುಮಾರು ಐದು ಎಕರೆ ಪ್ರದೇಶವನ್ನು ಹೊಂದಿರುತ್ತದೆ. ಇಲ್ಲಿನ ಶಿಕ್ಷಕರೂ ಕೂಡಾ ಪ್ರತಿಭಾನ್ವಿತರಿಂದಲೇ ಕೂಡಿರುತ್ತಾರೆ. ಈ ಸಂಸ್ಥೆಯಲ್ಲಿ ಮಕ್ಕಳಿಗೆ ಎನ್.ಸಿ.ಸಿ, ಎನ್.ಎಸ್.ಎಸ್. ಸ್ಕೌಟ್ಸ್ ಮತ್ತು ಗೈಡ್ಸ್, ಕಲೆ, ಸಾಹಿತ್ಯ, ಆಟೋಟಗಳಲ್ಲಿ ಪಾಲ್ಗೊಳ್ಳಲು ಹೇರಳವಾದ ಅವಕಾಶಗಳಿವೆ. ಹೇಳಿ... ಇಷ್ಟೆಲ್ಲಾ ಅನುಕೂಲ ಮಾಡಿಕೊಟ್ಟರೆ ಯಾರಿಗೆ ತಾನೆ ಈ ವ್ಯವಸ್ಥೆ ಇಷ್ಟವಾಗೋಲ್ಲ? ದುರಂತವೆಂದರೆ ಇವೆಲ್ಲಾ ಮೇಲೆ ಮೆತ್ತಲಾಗಿರುವ ಸಿಹಿ ಮಾತ್ರಾ.

**ಒಳಗಿನ ಕಹಿ ವಿಷ!**

ಪ್ರತಿಜಿಲ್ಲೆಯ ಒಂದೊಂದು ಹಳ್ಳಿಯಲ್ಲಿ ತಲೆಯೆತ್ತಿರುವ ಈ ವಿದ್ಯಾಲಯಗಳಲ್ಲಿ ವಿಜ್ಞಾನ, ಗಣಿತಗಳನ್ನು ಮಾತ್ರಾ ಇಂಗ್ಲೀಷಿನಲ್ಲಿ ಕಲಿಸಲಾಗುತ್ತದೆ. ಉಳಿದದ್ದನ್ನೆಲ್ಲಾ ತಾಯ್ನುಡಿಯಲ್ಲಿ ಕಲಿಸುತ್ತಾರೆ ಎಂದುಕೊಳ್ಳುವಂತಿಲ್ಲ. ಇಲ್ಲಿ ಅವುಗಳನ್ನು ಹಿಂದೀ ಭಾಷೆಯಲ್ಲಿ ಕಲಿಸಬೇಕಾಗುತ್ತದೆ. ಇದರ ಉದ್ದೇಶದಲ್ಲಿನ ಈ ಸಾಲುಗಳು ಅದಕ್ಕೆ ತ್ರಿಭಾಷಾಸೂತ್ರದ ಅನ್ವಯವೆನ್ನುವ ನಿಯಮದತ್ತ ಕೈತೋರುತ್ತಾ ಹೀಗೆನ್ನುತ್ತಿವೆ.

> **Adherence to Three Language Formula**
> The Regional Language is generally the medium of instruction from Class-VI to VIII and from Class- IX onwards, it is English for Science and Mathematics and Hindi for Humanities subjects.

ಕರ್ನಾಟಕದ ನವೋದಯ ಶಾಲೆಗಳಲ್ಲಿ ಆರು, ಏಳು ಮತ್ತು ಎಂಟನೇ ತರಗತಿಗಳಲ್ಲಿ ಕಲಿಕಾ ಮಾಧ್ಯಮವು ಕನ್ನಡವಾಗಿರುತ್ತದೆ. ಒಂಬತ್ತನೇ ತರಗತಿಯಿಂದ ಗಣಿತ ಮತ್ತು ವಿಜ್ಞಾನಗಳನ್ನು ಇಂಗ್ಲೀಷಿನಲ್ಲೂ ಸಮಾಜಶಾಸ್ತ್ರದಂತಹ ಉಳಿದವುಗಳನ್ನು ಹಿಂದೀಯಲ್ಲಿಯೂ ಕಲಿಸಲಾಗುತ್ತದೆ.

ಒಂಬತ್ತನೇ ತರಗತಿಯ ಮಕ್ಕಳಲ್ಲಿ ಶೇಕಡಾ ಇಂರಷ್ಟು ಮಂದಿಯನ್ನು ಆರಿಸಿ ಹಿಂದೀ ಪ್ರದೇಶದಲ್ಲಿರುವ ಶಾಲೆಗೆ ವರ್ಗಾವಣೆ ಮಾಡಲಾಗುತ್ತದೆ. ಭವ್ಯ ಭಾರತದ ರಾಷ್ಟ್ರೀಯ ಏಕತೆಯನ್ನು ಆ ಮೂಲಕ ಗಟ್ಟಿಗೊಳಿಸಲಾಗುತ್ತದೆಯಂತೆ. ಹಿಂದೀ ಭಾಷಿಕ ಪ್ರದೇಶದ ಮಕ್ಕಳನ್ನು ಹಿಂದಿಯೇತರ ಪ್ರದೇಶದ ಶಾಲೆಗಳಿಗೆ ವರ್ಗಾಯಿಸುತ್ತಾರಂತೆ.

**Promotion of National Integration**
Navodaya Vidyalayas aim at inculcating values of national integration through migration scheme though which the inter regional exchange of students between Hindi and Non-Hindi speaking States and vice-versa takes place for one academic year. Efforts are made to promote better understanding of the unity in diversity and cultural heritage through various activities.

ರಾಷ್ಟ್ರೀಯ ಭಾವೈಕ್ಯತೆಯ ಉದ್ದೇಶ ಇದರಲ್ಲಿ ಕಂಡರೂ ಒಳಗಿನ ಮರ್ಮವೇ ಬೇರೆ. ಮೊದಲಿಗೆ ಇಲ್ಲಿ ಹಿಂದೀ ಮತ್ತು ಹಿಂದೀಯೇತರ ಎಂಬ ವಿಭಾಗಗಳೇ ಏಕೆ? ಇದು ಹಿಂದೀಯನ್ನೊಂದು ಕಡೆ, ಉಳಿದೆಲ್ಲಾ ಭಾಷೆಗಳನ್ನು ಇನ್ನೊಂದು ಕಡೆ ಮಾಡಿದಂತಲ್ಲವೇ? ಭಾವೈಕ್ಯತೆ ಬೆಸೆಯಲು ಅಂತರರಾಜ್ಯ ವರ್ಗಾವಣೆ ಅಂದಿದ್ದರೆ ಸಾಕಿರಲಿಲ್ಲವೇ?

ಇದರಂತೆ ಹಿಂದೀಭಾಷಿಕ ವಿದ್ಯಾರ್ಥಿ ಕನ್ನಡನಾಡಿಗೆ ವರ್ಗವಾಗಿ ಬಂದರೂ ಇಡೀ ಶಾಲೆಯಲ್ಲಿನ ಕಲಿಕಾ ಮಾಧ್ಯಮವೇ ಹಿಂದೀಯಾಗಿರುವಾಗ, ಶಾಲಾ ಆಡಳಿತವೆಲ್ಲಾ ಹಿಂದೀಯಲ್ಲಿ ನಡೆಯುವಾಗ ಹಿಂದೀಯೇತರ ನಾಡಿನ ಸೊಗಡನ್ನು ಅರಿಯಲು ಹೇಗೆ ಮತ್ತು ಎಷ್ಟರಮಟ್ಟಿಗೆ ಸಾಧ್ಯ? ಇನ್ನು ಇಂತಹ ವಿದ್ಯಾರ್ಥಿಗಳ ಜೊತೆ ಸಹಪಾಟಿಗಳೆಲ್ಲಾ ಹಿಂದೀಯಲ್ಲಿ ವ್ಯವಹರಿಸದೆ ಇರಲು ಸಾಧ್ಯವೇ? ಇಂತಹುದೇ ಪರಿಸ್ಥಿತಿ ಕನ್ನಡದ ವಿದ್ಯಾರ್ಥಿ ಹಿಂದೀ ಪ್ರದೇಶಕ್ಕೆ ಹೋದರೆ

ಇರುತ್ತದೆಯೇ? ಊಹೂಂ... ಆತ/ ಆಕೆ ಅರೆಹಿಂದೀ ವಾತಾವರಣದಿಂದ ಸಂಪೂರ್ಣ ಹಿಂದೀ ವಾತಾವರಣಕ್ಕೆ ತೆರೆದುಕೊಳ್ಳಬೇಕಾಗುತ್ತದೆ. ನವೋದಯ ಶಾಲೆಯ ಆಡಳಿತವೆಲ್ಲಾ ಹಿಂದೀಯಲ್ಲಿರುತ್ತದೆ ಎನ್ನಲು ಹಿಂದೀ ಜಾರಿಗೊಳಿಸುವಲ್ಲಿ ನವೋದಯ ಶಾಲೆಗಳದ್ದು ಮೊದಲ ಸಾಲಿನ ಸ್ಥಾನವಾಗಿದೆ ಅನ್ನುವ 'ಸಂಸತ್ ಸಮಿತಿ'ಯ ವರದಿಯೇ ಸಾಕು. ಒಟ್ಟಾರೆ ಈ ವರ್ಗಾವಣೆಗಳು ರಾಷ್ಟ್ರೀಯ ಏಕತೆಯನ್ನು ಪೊರೆಯುವುದಕ್ಕಿಂತಾ ಕನ್ನಡದ ಮಕ್ಕಳಿಗೆ ಹಿಂದೀನಾಡಿನ ಪ್ರಾಕ್ಟಿಕಲ್ ಅನುಭವ ನೀಡುವ ತರಗತಿಗಳಾಗುತ್ತವೆ ಅನ್ನುವುದೇ ಹೆಚ್ಚು ಸತ್ಯ.

## ನಿಜವಾದ ಉದ್ದೇಶ!

ವಾಸ್ತವವಾಗಿ ಈ ಶಾಲೆಗಳ ನಿಜವಾದ ಉದ್ದೇಶವೇ ಹಿಂದೀ ಹೇರಿಕೆಯಾಗಿದೆ. ಎಳವೆಯಲ್ಲೇ ತಲೆಯಲ್ಲಿ ಹಿಂದೀ ಭಾಷೆ ಭಾರತದ ಒಗ್ಗಟ್ಟಿಗೆ, ರಾಷ್ಟ್ರೀಯತೆಗೆ ಅಗತ್ಯ ಎನ್ನುವ ಪೊಳ್ಳನ್ನು ತುಂಬಲ್ಪಟ್ಟ ಮಕ್ಕಳಲ್ಲಿ ಇನ್ನಾವ ಭಾವನೆ ತಾನೇ ಹುಟ್ಟೀತು? ಇಷ್ಟಕ್ಕೂ ಈ ಇಡೀ ಯೋಜನೆಯ ಉದ್ದೇಶ ಹಿಂದೀ ಹೇರಿಕೆಯಲ್ಲದಿದ್ದರೆ, ಇದು ಭಾರತೀಯ ಆಡಳಿತ ಭಾಷಾ ಕಾಯ್ದೆಯ/ ನಿಯಮಗಳ ಅಡಿಯಲ್ಲಿ ಕಾರ್ಯನಿರ್ವಹಿಸದೆ ಇದ್ದಿದ್ದರೆ ಈ ಪದ್ದತಿ ತಮಿಳುನಾಡಿಗೆ ಮಾತ್ರಾ ಅನ್ವಯಿಸುವುದಿಲ್ಲ ಏಕೆ? ಒಟ್ಟಾರೆ ಕರ್ನಾಟಕದ ೨೭ ಶಾಲೆಗಳಲ್ಲಿ ಪ್ರತಿವರ್ಷ ಸೇರಿಸಿಕೊಳ್ಳುವ ೨೦೦೦ ಮಕ್ಕಳು ಈ ಪದ್ದತಿಯಲ್ಲಿ ಕಲಿತು ಹೊರಬರುವಾಗ ಹಿಂದೀ ದೇವತೆಯ ಪದತಲದಲ್ಲಿ ತಾಯ್ನುಡಿಯ ಬಲಿಕೊಟ್ಟೇ ಹೊರಬರುತ್ತಾರೆ ಎಂಬುದು ಆತಂಕಕಾರಿಯಾಗಿದೆ. ಈ ವಿಷಯ ಮನದಟ್ಟಾಗಲು ಇಲ್ಲೊಂದು ಸಣ್ಣ ಸ್ಯಾಂಪಲ್ ಮಾಹಿತಿ ಇದೆ . ನವೋದಯ ಶಾಲೆಯ ಮಾಜಿ ವಿದ್ಯಾರ್ಥಿಗಳ ಸ್ನೇಹಕೂಟವೊಂದರಲ್ಲಿ ಭಾರತಕ್ಕೆ ಸೂಕ್ತವಾದ ರಾಷ್ಟ್ರಭಾಷೆ ಯಾವುದು ಎನ್ನುವ ಸಮೀಕ್ಷೆ ಮಾಡಿದ್ದಾರೆ. ನೂರಕ್ಕೆ ಎಂಬತ್ತೇಳು ಜನರು ಹಿಂದೀ ಎಂದು ಬರೆದಿದ್ದರೆ ಹನ್ನೆರಡರಷ್ಟು ಜನ ಇಂಗ್ಲೀಷ್ ಎಂದಿದ್ದಾರೆ. ಅಂದರೆ ಎಂಟರಲ್ಲಿ ಏಳುಜನ ಹಿಂದೀಪರವಾಗಿ ಮತ ಚಲಾಯಿಸಿದ್ದಾರೆ. ಧನ್ಯ... ಭಾರತ... ಧನ್ಯ. ನಮ್ಮೆಲ್ಲರ ಕೋಟಿಗಟ್ಟಲೆ ತೆರಿಗೆ ಹಣ ಹಿಂದೀ ಪ್ರಚಾರಕ್ಕೆ ವ್ಯಯಿಸಿದ್ದಕ್ಕೂ ಸಾರ್ಥಕವಾಯಿತು ಅಲ್ಲವೇ?

## ನವೋದಯ ವಿದ್ಯಾಲಯ ಮತ್ತು ಕೇಂದ್ರದ ಆಶಯ

ಘನ ಭಾರತ ಸರ್ಕಾರದ ಭಾಷಾನೀತಿಯನ್ನು ಜಾರಿ ಮಾಡಲು ನಾನಾಸಂಸ್ಥೆಗಳ ಮೂಲಕ ಪ್ರಯತ್ನಗಳು ನಡೆಯುತ್ತಿದ್ದರೂ, ಅದರಲ್ಲಿ ಪ್ರಮುಖವಾದದ್ದು ಮಾನವ ಸಂಪನ್ಮೂಲ ಇಲಾಖೆಯ ಯೋಜನೆಗಳು. ಇವುಗಳಲ್ಲಿ ಒಂದು ಈ ನವೋದಯ ವಿದ್ಯಾಲಯ ಯೋಜನೆ.

**ಕೇಂದ್ರಸರ್ಕಾರದ ಭಾಷಾನೀತಿಯ ಜಾರಿಯ ವಿಧಾನ**

ಇದರಲ್ಲಿ ಆಮಿಶ, ಒತ್ತಾಯ ಮತ್ತು ವಿಶ್ವಾಸಗಳ ಮೂಲಕ ಹಿಂದೀಯನ್ನು ದೇಶದೆಲ್ಲೆಡೆ ಹರಡಬೇಕೆಂಬ ಭಾರತ ಸರ್ಕಾರದ ಆಶಯದಂತೆ ಕೇಂದ್ರಸರ್ಕಾರ ಹೇಗೆ ಶಿಕ್ಷಣ ಕ್ಷೇತ್ರದಲ್ಲಿ ಹಿಂದೀ ಹೇರಲು ಆಮಿಶವೆನ್ನುವ ಅಸ್ತ್ರವನ್ನು ಬಳಸುತ್ತಿದೆ ಎಂಬುದನ್ನು ನೋಡಿದೆವು. ಯಥೇಚ್ಛವಾಗಿ ಹಣ ಖರ್ಚುಮಾಡಿ ಅತ್ಯದ್ಭುತ ಸವಲತ್ತುಗಳನ್ನು ಏರ್ಪಡಿಸಿ, ಉಚಿತವಾಗಿ ಕಲಿಸುವ ವಿದ್ಯಾಲಯ ವ್ಯವಸ್ಥೆಯನ್ನು ರೂಪಿಸಿ ಅದರ ಮೂಲಕ ಹೇಗೆ ಹಿಂದೀ ಪ್ರಚಾರಕ್ಕೆ ಕೇಂದ್ರಸರ್ಕಾರ ಉದ್ದೇಶಿಸಿದೆ/ ತೊಡಗಿದೆ, ನಾಳಿನ ವಿದ್ಯಾರ್ಥಿಗಳಲ್ಲಿ ಅದರಲ್ಲೂ ವಿಶೇಷವಾಗಿ ಹಳ್ಳಿಗಾಡಿನ ವಿದ್ಯಾರ್ಥಿಗಳಲ್ಲಿ ಹಿಂದೀಯನ್ನು ಒಪ್ಪುವ, ಆರಾಧಿಸುವ ಮನಸ್ಥಿತಿಯನ್ನು ಹುಟ್ಟುಹಾಕಲಾಗುತ್ತಿದೆ ಎಂಬುದನ್ನು ನೋಡಿದೆವು.

**ನವೋದಯರ ಪ್ರತಿಕ್ರಿಯೆ!**

ಈ ಬರಹಕ್ಕೆ ನವೋದಯ ವಿದ್ಯಾಸಂಸ್ಥೆಯ ಹಲವಾರು ಮಾಜಿ ಮತ್ತು ಹಾಲಿ ವಿದ್ಯಾರ್ಥಿಗಳು ಪ್ರತಿಕ್ರಿಯೆ ನೀಡಿದ್ದಾರೆ. ನವೋದಯದಲ್ಲಿ ಹಿಂದೀ ಹೇರಿಕೆ ಇಲ್ಲವೆಂದೂ, ಹಿಂದೀ ಕಡ್ಡಾಯ ಇಲ್ಲವೆಂದೂ, ಇಂಗ್ಲೀಶಿನಲ್ಲಿರುವುದನ್ನೂ ಕನ್ನಡದಲ್ಲೇ ಹೇಳಿಕೊಡುತ್ತಿದ್ದರೆಂದೂ ಕೆಲವರು ತಿಳಿಸಿದರೆ ಮತ್ತೆ ಕೆಲವರು ತಮಗೆ ಆ ಸಂಸ್ಥೆಯಿಂದಾಗಿರುವ/ ಆಗುತ್ತಿರುವ ಉಪಕಾರ ಸ್ಮರಣೆಯನ್ನು ಮಾಡಿ, ಹಿಂದೀ ಹೇರಿಕೆ ಇತ್ಯಾದಿಗಳೆಲ್ಲಾ ಗೌಣವೆಂದೂ, ಅಂತಹ ಶಾಲೆಗಳಲ್ಲಿ ಸಿಗುತ್ತಿರುವ ಗುಣಮಟ್ಟದ ಕಲಿಕೆ ಮುಖ್ಯವೆಂದೂ ಪ್ರತಿಪಾದಿಸಿದ್ದಾರೆ. ಕೆಲವರಂತೂ ಹಿಂದೀ ಭಾರತದ ರಾಷ್ಟ್ರಭಾಷೆಯೆಂದೂ, ಭಾರತೀಯತೆ ಮೊದಲು, ಪ್ರಾದೇಶಿಕತೆ ನಂತರ ಎಂದೂ, ಕೇಂದ್ರದ ಉದ್ದೇಶ ಏನೇ ಇರಲಿ ಒಳ್ಳೆಯ ಶಾಲೆ ಕೊಟ್ಟು ಹಳ್ಳಿಗಾಡಿನ ಬಡ ಮಕ್ಕಳಿಗೆ ಅನುಕೂಲ ಮಾಡಿಕೊಡಲಾಗಿದೆ, ಅಷ್ಟು ಸಾಕು ಎಂದಿದ್ದಾರೆ. ಸದರಿ ಸಂಸ್ಥೆಯ ಅಂತರ್ಜಾಲ ತಾಣದಲ್ಲಿ ಇರುವ ಮಾಹಿತಿಯನ್ನೂ ಕೆಲವರು ನಂಬಲು, ಒಪ್ಪಲು ತಯಾರಿಲ್ಲ. ಕೆಲವರು ಬರಹ ಬರೆಯುವ ಮುನ್ನ ನವೋದಯ ಶಾಲೆಗೆ ಭೇಟಿ ನೀಡಬೇಕಿತ್ತೆಂದೂ ಬರೆದಿದ್ದಾರೆ.

ಈ ಎಲ್ಲಾ ಪ್ರತಿಕ್ರಿಯೆಗಳ ಒಟ್ಟು ಸಾರವೇನೆಂದರೆ ಸರ್ಕಾರವು, (ಕೇಂದ್ರವೋ ರಾಜ್ಯವೋ, ಯಾವುದೋ ಒಂದು) ಒಂದು ಶಿಸ್ತುಬದ್ಧವಾದ ಉತ್ತಮವಾದ ಶಾಲಾವ್ಯವಸ್ಥೆಯನ್ನು ಒದಗಿಸಿಕೊಟ್ಟು, ಆ ಮೂಲಕ ಸಾವಿರಾರು ಬಡ ಹಳ್ಳಿಗರಿಗೆ ಅನುಕೂಲ ಮಾಡಿಕೊಡುತ್ತಿರುವಾಗ ಅದಕ್ಕೆ ಪ್ರಾಮುಖ್ಯತೆ ಕೊಡದೆ ಮೊಸರಲ್ಲಿ ಕಲ್ಲು ಹುಡುಕುವುದು ಸರಿಯಲ್ಲ ಎಂಬುದು. ಇರಲಿ, ನವೋದಯರ ಅನಿಸಿಕೆಗಳಿಗೆ ಸಮಾಧಾನ ಹೇಳುವ ಹೊಣೆಗಾರಿಕೆ ಹೊತ್ತು ಈ ಪ್ರತಿಕ್ರಿಯೆಯನ್ನು ಬರೆಯಲಾಗುತ್ತಿದೆ.

## ಸಫಲವಾಗುತ್ತಿರುವ ಕೇಂದ್ರದ ಉದ್ದೇಶ

ನವೋದಯ ವಿದ್ಯಾಲಯಗಳ ಘೋಷಿತ ಉದ್ದೇಶವೇ ಭಾರತದ ಹಳ್ಳಿಗಾಡಿನ ಪ್ರತಿಭಾವಂತ ಮಕ್ಕಳಿಗೆ ಮೂರು ಭಾಷೆಯಲ್ಲಿ ಪ್ರಾವೀಣ್ಯತೆ ಒದಗಿಸಿ ಕೊಡುವುದು. ಅಂದರೆ ತಾಯ್ನುಡಿ, ಹಿಂದೀ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಪ್ರಾವೀಣ್ಯತೆ ಗಳಿಸಿಕೊಡುವುದು. ಇದರರ್ಥ, ಈಗಾಗಲೇ ತಾಯ್ನುಡಿಯಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಹಿಂದೀ ಮತ್ತು ಇಂಗ್ಲೀಷುಗಳಲ್ಲಿ ಪ್ರಾವೀಣ್ಯತೆ ತುಂಬುತ್ತೇವೆ ಎನ್ನುವುದೇ ಅಲ್ಲವೇ? ನಾವೇನೂ ಕನ್ನಡಿಗರು ಬೇರೇ ಭಾಷೆ ಕಲಿಯಬಾರದು ಎನ್ನುತ್ತಿಲ್ಲ. ಭಾರತ ಸರ್ಕಾರ ಯಾಕೆ ಹೀಗೆ ಹಿಂದೀ ಕಲಿಕೆಗೆ ಮಾತ್ರಾ ಒತ್ತು ನೀಡುತ್ತಿದೆ ಎನ್ನುವುದನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ. ಹಿಂದೀ ಭಾಷೆಯನ್ನು ಕಲಿಯುವ, ರಾಷ್ಟ್ರೀಯ ಏಕತೆಗಾಗಿ ಹಿಂದೀ ಬೇಕೆಂದು ನಂಬಿಸಲ್ಪಡುವ ನಮ್ಮ ಪ್ರತಿಭಾವಂತ ಮಕ್ಕಳು ಮುಂದೆ ಪ್ರತಿಷ್ಠಿತ ಸ್ಥಾನಗಳಲ್ಲಿ ದುಡಿಯುವಾಗ ಇದರಿಂದ ಅನುಕೂಲ ಆಗುವುದು ಹಿಂದೀ ತಾಯ್ನುಡಿಯ ಜನರ ವಲಸೆಗೆ ಎಂಬುದನ್ನು ಗಮನಿಸಬೇಕಾಗಿದೆ. ಭಾರತದ ಯಾವ ಮೂಲೆಗೇ ಹೋದರೂ ಹಿಂದೀಯೊಂದನ್ನೇ ಬಲ್ಲವನಿಗೆ ಯಾವ ತೊಡಕೂ ಆಗಬಾರದೆಂದು ಕೇಂದ್ರಸರ್ಕಾರ ಯೋಚಿಸಿ, ಯೋಜಿಸುತ್ತಿರುವುದು ಎದ್ದು ಕಾಣುತ್ತದೆ. ಅವರಿಗೆ ತೊಂದರೆ ಕೊಡಬೇಕು ಅನ್ನುವುದು ಇಲ್ಲಿನ ವಾದವಲ್ಲ, ನಮ್ಮೂರಿಗೆ ವಲಸೆ ಬರುವವರು ನಮ್ಮ ನುಡಿಯಲ್ಲಿ ವ್ಯವಹರಿಸದಿದ್ದರೆ ನಾಳೆ ನಮ್ಮ ಇಡೀ ಕನ್ನಡ ಜನಾಂಗವೇ, ಕರ್ನಾಟಕದಲ್ಲೇ ಹಿಂದೀ ಕಲಿಯದೆ ಬದುಕಲಾಗದ ಸ್ಥಿತಿಗೆ ಈಡಾಗಬೇಕಾಗುತ್ತದೆ. ಯಾಕೆಂದರೆ...

## ಕೇಂದ್ರಸರ್ಕಾರದ ಉದ್ದೇಶ ಮತ್ತು ಗುರಿಗಳು

ಇಡೀ ಭಾರತದ ಎಲ್ಲಾ ರಾಜ್ಯಗಳಲ್ಲಿ ಮೊದಲ ಕಲಿಕಾ ಮಾಧ್ಯಮ ಹಿಂದೀಯಾಗಬೇಕು. ಇದೀಗ ಹಿಂದೀ ಮತ್ತು ಇಂಗ್ಲೀಷಿನಲ್ಲಿರುವ ಆಡಳಿತ ವ್ಯವಸ್ಥೆಗಳು ಹಿಂದೀಯಲ್ಲಿ ಮಾತ್ರಾ ಆಗಬೇಕು. ಭಾರತದ ಎಲ್ಲಾ ಕಛೇರಿಗಳೂ ಹಿಂದೀಯಲ್ಲಿ ಕಾರ್ಯನಿರ್ವಹಿಸಬೇಕು, ಆ ಕಾರಣದಿಂದ ಹೆಚ್ಚು ಹೆಚ್ಚು ಮಕ್ಕಳು ಹಿಂದೀ ಕಲಿಯಬೇಕು. (ಹೀಗಾದರೆ ಜನಸಂಖ್ಯಾ ಸ್ಫೋಟದಿಂದ ನರಳುತ್ತಿರುವ ಉತ್ತರ ಭಾರತೀಯರಿಗೆ ದಕ್ಷಿಣಕ್ಕೆ ವಲಸೆ ಹೋಗಲು ಅನುಕೂಲವಾಗುತ್ತದೆ.) ಇಂಗ್ಲೇಂಡಿನಲ್ಲಿ ಇಂಗ್ಲೀಶ್ ಹೇಗೋ, ಜಪಾನಿನಲ್ಲಿ ಜಪಾನೀಸ್ ಹೇಗೋ, ಹಾಗೆ ಭಾರತದಲ್ಲಿ ಹಿಂದೀ ಆಗಬೇಕು. ಎಲ್ಲಾ ಭಾರತೀಯರ ಕಲಿಕೆ, ದುಡಿಮೆ, ಸಂಶೋಧನೆ, ಬದುಕು, ಆಡಳಿತ... ಪ್ರತಿಯೊಂದೂ ಹಿಂದೀಯಲ್ಲಾಗಬೇಕು. ಇಂತಹ ಗುರಿಯ ಬಗ್ಗೆ ಕೇಂದ್ರಸರ್ಕಾರಿ ಒಡೆತನದ **www.rajbhasha.nic.in** ಅಂತರ್ಜಾಲ ತಾಣದಲ್ಲಿ ವಿವರವಾಗಿ ನೋಡಬಹುದು.

ಇಂತಹ ಗುರಿ ಈಡೇರಿಕೆಗಾಗೇ ನವೋದಯ ಸಂಸ್ಥೆಯಂತಹುದನ್ನು ಕಟ್ಟಿರುವುದು. ಇದನ್ನು ಸಾಧಿಸಲು ರಾಷ್ಟ್ರೀಯ ಏಕತೆ, ದೇಶಭಕ್ತಿ ಎಂಬವುಗಳನ್ನು ಉದ್ದೀಪಿಸುವುದು. ಆದರೆ ನಿಜ ಉದ್ದೇಶ ಹಿಂದೀ ವಸಾಹತು ಸ್ಥಾಪನೆ. ಇದುವರೆವಿಗೂ ಪ್ರತಿಜಿಲ್ಲೆಯಿಂದ ಸುಮಾರು ಎಂಬತ್ತು ಮಕ್ಕಳು, ಪ್ರತಿವರ್ಷ ಈ ಹಿಂದೀಯನ್ನು ಒಪ್ಪಿಕೊಳ್ಳುವ ಮನಸ್ಥಿತಿಯನ್ನು ತಲೆಯಲ್ಲಿ ತುಂಬಿಕೊಂಡು ಹೊರಬರುತ್ತಿದ್ದಾರೆ. ಅಂದರೆ ಪ್ರತಿವರ್ಷ ಎರಡು ಸಾವಿರಕ್ಕೂ ಹೆಚ್ಚು ಅಚ್ಚಕನ್ನಡಿಗರು, ಬುದ್ಧಿವಂತರು, ಒಳ್ಳೆಯ ಉದ್ಯೋಗಗಳಲ್ಲಿ ಕೆಲಸ ಮಾಡುವ ಅವಕಾಶವಿರುವವರು, ಸಮಾಜದಲ್ಲಿ ಪ್ರಭಾವ ಹೊಂದಲಿರುವ ಪ್ರತಿಭಾಶಾಲಿಗಳನ್ನು ಈ ಸಂಸ್ಥೆ ಹೊರತರುತ್ತಿದೆ. ಇವರಲ್ಲಿ ಯಾರಿಗೂ ಕನ್ನಡದ ಬಗ್ಗೆ ಈ ಸಂಸ್ಥೆ ಕೆಟ್ಟದ್ದೇನನ್ನೂ ಹೇಳಿಕೊಟ್ಟಿಲ್ಲ ಅನ್ನುವುದು ನಿಜವಿರಬಹುದು, ಆದರೆ ಆಳದಲ್ಲಿ ಹಿಂದೀ ಭಾಷೆಯ ಬಗ್ಗೆ ಸ್ವೀಕಾರಾರ್ಹತೆಯನ್ನು ತುಂಬಲಾಗಿದೆ. ಇಷ್ಟು ಸಾಕಲ್ಲವೇ? ಭಾರತದ ವೈವಿಧ್ಯತೆಯ ಬಗ್ಗೆ ಪಾಠ ಮಾಡುವ ಇವರು ಎಲ್ಲಾ ಭಾಷೆಗಳೂ ಸಮಾನವೆಂದು ಬಾಯಲ್ಲಿ ಹೇಳಿಕೊಡಬಹುದೇನೋ, ಆದರೆ ಜತೆಯಲ್ಲಿ ಭಾರತದಲ್ಲಿ ಹಿಂದೀಗೆ ಆಡಳಿತ ಭಾಷಾ ಸ್ಥಾನ ಇರುವುದೇ ಸರಿಯೆಂದು ನಂಬಿಸಿರುತ್ತಾರೆ.

## ಕೇಂದ್ರದ ನಿಜ ಉದ್ದೇಶ

ಕರ್ನಾಟಕದ ನವೋದಯ ಶಾಲೆಗಳಲ್ಲಿ ಕನ್ನಡದಲ್ಲೇ ಹೇಳಿಕೊಡುತ್ತಾರೆ, ಹಿಂದೀ ಹೇರಿಕೆಯಿಲ್ಲಾ ಅನ್ನುವ ಗೆಳೆಯರು ತಿಳಿಯಬೇಕಾದ್ದು ಏನೆಂದರೆ ಈ ಬದಲಾವಣೆಗಳನ್ನು ಒಂದೇ ಬಾರಿಗೆ ಮಾಡಿ ವಿಫಲರಾಗುವ ದಡ್ಡತನ ಕೇಂದ್ರ ಮಾಡುವುದಿಲ್ಲ. ಅವರದ್ದೇನಿದ್ದರೂ ನಿಧಾನವಾಗಿ ಹೆಜ್ಜೆಹೆಜ್ಜೆಯಾಗಿ ನಮ್ಮ ತಾಯ್ನುಡಿಯನ್ನು ನಮ್ಮ ಕೈಗಳಿಂದಲೇ ಅಲ್ಲಿಂದ ಬಡಿದೋಡಿಸುವ ತಂತ್ರಗಾರಿಕೆ. ಇಲ್ಲದಿದ್ದರೆ ನವೋದಯ ಶಾಲೆಗಳ ಆಡಳಿತದಲ್ಲಿ ಎಷ್ಟರಮಟ್ಟಿಗೆ ಹಿಂದೀಯನ್ನು ಜಾರಿಗೊಳಿಸಲಾಗುತ್ತದೆ ಎಂದು ಅಧ್ಯಯನ ಮಾಡಲು ಸಂಸತ್ತಿನ ಸಮಿತಿಯನ್ನು ನೇಮಿಸುವ ಅಗತ್ಯವಿರಲಿಲ್ಲ ಅಲ್ಲವೇ? ಈ ಸಮಿತಿಯು ಹಿಂದೀ ಭಾರತದ ಎಲ್ಲಾ ರಾಜ್ಯಗಳ ಎಲ್ಲಾ ಹಂತಗಳ ಕಲಿಕಾ ಮಾಧ್ಯಮವಾಗಲಿ ಎಂದು ಶಿಫಾರಸ್ಸು ಮಾಡುತ್ತಿರಲಿಲ್ಲ ಅಲ್ಲವೇ? ಕೇಂದ್ರಕ್ಕೆ ಹಿಂದೀ ಹೇರಿಕೆಯ ಗುರಿ ಇಲ್ಲದಿದ್ದರೆ ನವೋದಯ ಶಾಲೆಗಳಲ್ಲಿ ವಿಜ್ಞಾನ ಗಣಿತಗಳನ್ನು ಬಿಟ್ಟು ಉಳಿದದ್ದನ್ನೆಲ್ಲಾ ಹಿಂದೀಯಲ್ಲಿ ಕಲಿಸುತ್ತೇವೆ ಎಂದು ಘೋಷಿಸಿಕೊಳ್ಳುವ ಬದಲು ಆಯಾರಾಜ್ಯದ ಭಾಷೆಯಲ್ಲಿ ಕಲಿಸುತ್ತೇವೆ ಎಂದು ಬರೆದುಕೊಳ್ಳುತ್ತಿದ್ದರಲ್ಲವೇ?

ಒಟ್ಟಾರೆ ನವೋದಯದಂತಹ ಉತ್ತಮ ಗುಣಮಟ್ಟದ ಶಾಲೆಗಳನ್ನು ಕಟ್ಟಿ, ಅದರ ಮೂಲಕ ಹಳ್ಳಿಗಾಡಿನ ಮಕ್ಕಳಿಗೆ ಕಲಿಕೆ, ಬದುಕುಗಳ ಆಮಿಶ ಒಡ್ಡಿ, ಇಡೀ ಕನ್ನಡನಾಡನ್ನು ನಾಳಿನ ಹಿಂದೀ ವಸಾಹತಾಗಿಸುವ ಹುನ್ನಾರ ಕೇಂದ್ರಕ್ಕಿರುವುದನ್ನು ಅರಿಯುವುದು ಮುಖ್ಯವಾಗಿದೆ. ಕೇಂದ್ರಸರ್ಕಾರ ಈ ಶಾಲೆಗಳಿಗೆ ಖರ್ಚು ಮಾಡುತ್ತಿರುವ ಹಣ ನಮ್ಮ ರಾಜ್ಯ ಕೇಂದ್ರಕ್ಕೆ ಕಟ್ಟುವ ತೆರಿಗೆಯಲ್ಲಿನ ಒಂದು ಸಣ್ಣಭಾಗವೇ ಹೊರತು ಕೇಂದ್ರ ನಮಗಾಗಿ ನೀಡುತ್ತಿರುವ ದಯಾಭಿಕ್ಷೆ ಏನಲ್ಲ.

ಕಲಿಕೆಯೆನ್ನುವುದನ್ನು ರಾಜ್ಯಪಟ್ಟಿಯಿಂದ ಜಂಟಿ ಪಟ್ಟಿಗೆ ಹಾಕಿಕೊಂಡು, ಕೇಂದ್ರಸರ್ಕಾರವು ತಾನೇ ಶಾಲೆಗಳನ್ನು ಕಟ್ಟುವ/ ನಡೆಸುವ ಚಾಳಿಯನ್ನು ಕೈಬಿಡಬೇಕಾಗಿದೆ. ತನ್ನ ನಾಡಿನ ಮಕ್ಕಳ ಕಲಿಕೆಯು ರಾಜ್ಯಗಳ ಹೊಣೆಯಾಗಿರುತ್ತದೆ ಮತ್ತು ಕಲಿಕೆ ಅತ್ಯುತ್ತಮವಾಗಲು ವಿಕೇಂದ್ರೀಕರಣವೇ ಸರಿಯಾದುದಾಗಿದೆ. ಈಗ ನಮ್ಮ ರಾಜ್ಯಸರ್ಕಾರ ಸರಿಯಾದ ವ್ಯವಸ್ಥೆ ಕಟ್ಟಿಕೊಡಲಿ ಎನ್ನುವುದು ನಮ್ಮ ದನಿಯಾಗಬೇಕೇ ಹೊರತು, ಇವರು ಸರಿಯಿಲ್ಲ... ಅದಕ್ಕೆ ಕೇಂದ್ರಸರ್ಕಾರವೇ ಶಾಲೆ ನಡೆಸಲಿ ಅನ್ನುವುದಲ್ಲ. ಕರ್ನಾಟಕ ರಾಜ್ಯಸರ್ಕಾರವು ತ್ರಿಭಾಷಾ ಸೂತ್ರಕ್ಕೆ ಕೊನೆ ಹೇಳಿ, ಸದರಿ ಶಾಲೆಗಳನ್ನು ತಾನೇ ವಹಿಸಿಕೊಂಡು ನಡೆಸುವ ಮೂಲಕವೂ, ಇಂತಹುದೇ ಸೌಕರ್ಯ ಮತ್ತು ಗುಣಮಟ್ಟಗಳಿರುವ

ಕಲಿಕೆಯನ್ನು ತಾನೇ ನೀಡುವ ಮೂಲಕವೂ ಭಾರತ ಸರ್ಕಾರದ ಹಿಂದೀ ಹೇರಿಕೆಯ ಹುನ್ನಾರವನ್ನು ವಿಫಲಗೊಳಿಸಬೇಕಾಗಿದೆ.

ನವೋದಯದ ಕೆಲಗೆಳೆಯರು, ಇಡೀ ಬರಹವನ್ನು ತಮಗೆ ಸಂಸ್ಥೆಯಿಂದಾಗಿರುವ ಲಾಭದ ಹಿನ್ನೆಲೆಯಲ್ಲಿ, ತಮಗಾಗಿರುವ ಅನುಭವದ ನೆಲೆಯಲ್ಲಿ, ಪ್ರತಿಕ್ರಿಯೆ ನೀಡಿರುವಂತಿದೆ. ಇಡೀ ಬರಹವನ್ನು ಭಾರತ ದೇಶದ ಭಾಷಾನೀತಿ, ಆಡಳಿತ ನೀತಿ, ಕೇಂದ್ರಸರ್ಕಾರಕ್ಕಿರುವ 'ಇಡೀ ಭಾರತಕ್ಕೆ ಹಿಂದೀ ಕಲಿಸುವ ಉತ್ಸಾಹ', ಅದಕ್ಕಾಗಿ ಮಾಡಿಕೊಂಡಿರುವ ಹತ್ತಾರು ರಾಜಮಾರ್ಗಗಳು, ಒಳಸುಳಿಗಳು, ಇವುಗಳ ಹಿನ್ನೆಲೆಯಲ್ಲಿ ನೋಡಿ, ಓದಿ ಅರ್ಥ ಮಾಡಿಕೊಳ್ಳುವರೆಂಬ ಆಶಯ ನಮ್ಮದು.

## ಆಡಳಿತದಲ್ಲಿ ಹಿಂದೀ ಹೇರಿಕೆ

ಆಡಳಿತದಲ್ಲಿ ಹಿಂದೀ ಹೇರಿಕೆಯೆನ್ನುವುದು ಸಾಮಾನ್ಯವಾಗಿ ನಾವು ಕೇಂದ್ರಸರ್ಕಾರಿ ಕಛೇರಿಗಳೊಂದಿಗೆ ವ್ಯವಹರಿಸಿದಾಗ ನಮ್ಮ ಅನುಭವಕ್ಕೆ ಬರುತ್ತದೆ. ರೈಲ್ವೇ, ವಿಮಾನ ನಿಲ್ದಾಣಗಳು, ಬ್ಯಾಂಕು, ವಿಮಾಸಂಸ್ಥೆಗಳು, ಅಡುಗೆ ಅನಿಲ, ಪೆಟ್ರೋಲ್ ಬಂಕ್ ಮೊದಲಾದವುಗಳು, ಇವುಗಳಲ್ಲಿ ಪ್ರಮುಖವಾದವು. ಇಲ್ಲೆಲ್ಲಾ ಕನ್ನಡದಲ್ಲಿ ಸೇವೆ ಸಿಗುವ ಬಗ್ಗೆ ಕಣ್ಣು ಹಾಯಿಸೋಣ. ಇನ್ನು ಕೇಂದ್ರಸರ್ಕಾರಿ ಸ್ವಾಮ್ಯದ ಉದ್ದಿಮೆಗಳು ಹೇಗೆ ಆಡಳಿತವನ್ನು ಹಿಂದೀಯಲ್ಲೇ ನಡೆಸುತ್ತಿವೆ ಎನ್ನುವುದೂ ನಮಗೆ ಕಾಣುತ್ತದೆ. ಇಷ್ಟಲ್ಲದೆ ಸರ್ಕಾರದ ನೀತಿಯಿಂದಾಗಿ ಇಂದು ಭಾರತದ ಔಷಧಿ ಉದ್ಯಮವೂ ಸೇರಿದಂತೆ ಅನೇಕ ಖಾಸಗಿ ಸಂಸ್ಥೆಗಳು ತಮ್ಮ ಉತ್ಪನ್ನಗಳ ಮೂಲಕ ನಮ್ಮ ಮೇಲೆ ಹಿಂದೀ ಹೇರುತ್ತಿರುವುದನ್ನೂ ಕಾಣಬಹುದಾಗಿದೆ.

### ಬ್ಯಾಂಕುಗಳ ಭಾಷೆ ಹಿಂದೀ!




ಇದು ನಾವು ಹುಟ್ಟಿದಾಗಿಂದ ಕರ್ನಾಟಕದಲ್ಲಿ ಕೆಲಸ ಮಾಡುತ್ತಿರುವ ಭಾರತೀಯ ಸ್ಟೇಟ್ ಬ್ಯಾಂಕಿನದು.

ಎಸ್.ಬಿ.ಐ.ನ ಈ ಜಾಹೀರಾತು ಕನ್ನಡದಲ್ಲಿದೆ. ಆದರೆ ಇದರ ಭಾಷೆ ನೋಡಿದರೆ ಅದು ಹಿಂದೀಯದು. "ನಿಮ್ಮ ಜೊತೆ – ಸದಾ ಸರ್ವದಾ" ಅಂತ ಇದೆ ಇದರಲ್ಲಿ. "ಸದಾ" ಅನ್ನೋದನ್ನ ಕನ್ನಡದಲ್ಲಿ ಕೇಳಿದೀವಿ, ಆದರೆ "ಸದಾ–ಸರ್ವದಾ" ಎಂದರೇನು? ಹಿಂದೀಯಲ್ಲಿದ್ದ ಜಾಹೀರಾತನ್ನು ಕನ್ನಡಕ್ಕೆ ಇಷ್ಟು ಕೆಟ್ಟದಾಗಿ ಅನುವಾದ ಮಾಡಿರುವುದನ್ನು

ನೋಡಿದರೆ ನಗಬೇಕೋ ಅಳಬೇಕೋ ಗೊತ್ತಿಲ್ಲ! ಸರಳವಾಗಿ "ನಿಮ್ಮ ಜೊತೆ – ಎಂದೆಂದಿಗೂ" ಅನ್ನಬಹುದಿತ್ತವೇ? ಅಥವಾ ಕನ್ನಡ ಲಿಪಿಯಿಂದ ಹಿಂದೀ ಕಲಿಸುವ ಉದ್ದೇಶ ಬ್ಯಾಂಕಿಗಿದೆಯೋ ಹೇಗೆ?

ಇನ್ನೊಂದು ಬ್ಯಾಂಕು ಬೆಂಗಳೂರಿನ ಮಹಾರಾಷ್ಟ್ರ ಬ್ಯಾಂಕ್. ಇದರ ನಾಮಫಲಕದಲ್ಲಿ ಇಂಗ್ಲೀಶಿನಲ್ಲಿ ಬರೆದಿರುವ ಹಿಂದೀಯನ್ನು ನೋಡಿದರೆ ಇಂಗ್ಲೀಶ್ ಮೂಲಕ ಹಿಂದೀಯನ್ನು ಕಲಿಸೋ ಪ್ರಯತ್ನವು ಕಾಣುತ್ತದೆ.




ಕೆಲದಿನಗಳ ಹಿಂದೆ ಬ್ಯಾಂಕ್ ಆಫ್ ಮಹಾರಾಷ್ಟ್ರ ಬೆಂಗಳೂರಿನ ಜಯನಗರದಲ್ಲಿ ಹೊಸ ಶಾಖೆಯನ್ನು ತೆರೆಯಿತು. ಬೆಂಗಳೂರಿನ ಎಲ್ಲಾ ಪತ್ರಿಕೆಗಳಲ್ಲಿ ಜಾಹೀರಾತು ನೀಡುತ್ತಾ ಇಲ್ಲಿ ಶಾಖೆ ತೆರೆಯುತ್ತಿರುವುದಕ್ಕೆ ಏನು ಕಾರಣವೆಂದು ಪ್ರಕಟಿಸಿದರು: "ಸಮ್ಜೆ ಆಪ್ಕೆ ದಿಲ್ ಕಿ ಬಾತ್". ಇವರು ಯಾಕೆ "ನಿಮ್ಮ ಮನಸ್ಸು ನಮಗೆ ಅರ್ಥ ಆಗಿದೆ" ಎಂದು ಕನ್ನಡದಲ್ಲಿ ಬರೆಸಲಿಲ್ಲ? ಈ ರೀತಿ ಹಿಂದೀಯನ್ನು ಇಂಗ್ಲೀಶಿನಲ್ಲಿ ಬರೆಸೋ ಬದಲು ಕನ್ನಡದಲ್ಲಿ ಬರೆದು ಕನ್ನಡಿಗರನ್ನು ತಮ್ಮತ್ತ ಸೆಳೆದುಕೊಳ್ಳಬಹುದು ಎಂಬುದೇಕೆ ಇವರಿಗೆ ತಿಳಿಯದೇ ಹೋಯಿತು?

**ಪೆಟ್ರೋಲ್ ಬಂಕುಗಳಲ್ಲಿ ಹಿಂದೀ**




ಬೆಂಗಳೂರಿನ ಅಚ್ಚ ಕನ್ನಡದ ಪ್ರದೇಶಗಳಲ್ಲೊಂದೆಂಬ ಖ್ಯಾತಿಯ, ಕನ್ನಡ ಚಳವಳಿ ಪಿತಾಮಹ ಅನಕೃ ರಸ್ತೆಯ ಪ್ರಾರಂಭದಲ್ಲಿ (ಬಸವನಗುಡಿ ದೇಶೀಯ ವಿದ್ಯಾಶಾಲೆ ಸಮೀಪ) ಇರುವ ರಾಜೀವ್ ಫಿಲ್ಲಿಂಗ್ ಸ್ಟೇಶನ್ ಎಂಬ ಹೆಸರಿನ ಈ ಇಂಡಿಯನ್ ಆಯಿಲ್ ಕಾರ್ಪೋರೇಷನ್ನಿನ ಪೆಟ್ರೋಲ್ ಬಂಕಿನಲ್ಲಿ ಹಾಕಿದ್ದ ಈ ಫಲಕ ನೋಡಿ. ಇಲ್ಲಿಗೆ ಬಂದು ಗಾಡಿಗೆ ಪೆಟ್ರೋಲ್ ತುಂಬಿಸಿಕೊಳ್ಳುವ ಗ್ರಾಹಕ ಕನ್ನಡಿಗ, ಅಂಗಡಿಯ ಯಜಮಾನ ಕನ್ನಡಿಗ, ಆದರೆ ಈ ಹಿಂಗ್ಲೀಶ್ ಫಲಕ ನೇತು ಹಾಕಿರೊದು ಯಾರಿಗಾಗಿ? ಕನ್ನಡಿಗರು `ಹಿಂದೀ ಅರ್ಥ ಮತ್ತು ಸಂದೇಶ ಹೊಂದಿರೋ ಈ ಜಾಹೀರಾತನ್ನು ಇಂಗ್ಲೀಶಿನಲ್ಲಿ ಓದಬೇಕಾದ' ಪರಿಸ್ಥಿತಿಗೆ ಯಾರು ಕಾರಣ? ಇದಕ್ಕೆ ಕಾರಣ ಭಾರತದ ಭಾಷಾನೀತಿ. ಯಾಕೆಂದರೆ ಭಾರತದ ಆಡಳಿತ ಭಾಷೆ ಹಿಂದೀ ಮತ್ತು ಇಂಗ್ಲೀಶ್. ಇಂಡಿಯನ್ ಆಯಲ್ ಸಂಸ್ಥೆ ಕೇಂದ್ರಸರ್ಕಾರಿ ಉದ್ದಿಮೆಯಾದ್ದರಿಂದ ಇದು ಹೀಗಿದೆ!

ಇದೇ ರೀತಿ ಇಂಡೇನ್, ಭಾರತ್ ಮತ್ತು ಹಿಂದುಸ್ತಾನ್ ಪೆಟ್ರೋಲಿಯಂ ಸಂಸ್ಥೆಗಳು ಮನೆಗಳಿಗೆ ಸರಬರಾಜು ಮಾಡುವ ಅನಿಲ ಸಿಲಿಂಡರ್‌ಗಳನ್ನು ನೋಡಿದರೂ ನಮಗೆ ಕೇಂದ್ರಸರ್ಕಾರಕ್ಕೆ ಜನರ ಸುರಕ್ಷತೆಗಿಂತಲೂ ಹಿಂದೀ ಹೇರಿಕೆಯೇ ಮುಖ್ಯ ಎನ್ನಿಸುತ್ತದೆ.




ಈ ಚಿತ್ರ ಬೆಂಗಳೂರಿನಲ್ಲಿ ಪೂರೈಕೆಯಾದ ಅನಿಲ ಸಿಲಿಂಡರ್‌ದು. ಪ್ರಪಂಚದಲ್ಲಿ ಎಲ್ಲೆಡೆ ಸುರಕ್ಷತೆ ಅನ್ನುವುದಕ್ಕೆ ಅದೆಷ್ಟು ಮಹತ್ವ ನೀಡುತ್ತಾರೆ ಎಂದರೆ ಓದು ಬರಹ ಬಾರದವರೂ ಕೂಡಾ ಅರ್ಥ ಮಾಡಿಕೊಳ್ಳಲೆಂದು ಚಿತ್ರಗಳನ್ನು ಕೊಟ್ಟಿರುತ್ತಾರೆ. ಆದರೆ ಇಲ್ಲಿ ನಮ್ಮೂರಿನಲ್ಲೇ, ನಮ್ಮ ಮನೆಗಳಿಗೇ ಸರಬರಾಜು ಆಗುವ ಅಡಿಗೆ ಸಿಲಿಂಡರುಗಳ ಮೇಲೆ ಚಿತ್ರವೂ ಇಲ್ಲಾ.. ಒಂದಕ್ಷರ ಕನ್ನಡವೂ ಇಲ್ಲ. ಈ ದೇಶದಲ್ಲಿ ಇರುವವರಿಗೆಲ್ಲಾ ಹಿಂದೀ/ ಇಂಗ್ಲೀಶ್ ಬರುತ್ತದೆ ಎಂದು ಈ ಎಚ್‌ಪಿ, ಇಂಡೇನು, ಭಾರತ್ ಗ್ಯಾಸು ಕಂಪನಿಗಳಿಗೆ ಅದ್ಯಾರು ಹೇಳಿದ್ದಾರೆ ಎಂದರೆ ಅದೇ ಭಾರತದ ಭಾಷಾನೀತಿ ಹಾಗೆ ಹೇಳುತ್ತಿದೆ. ಕೇಂದ್ರಸರ್ಕಾರದ ಉದ್ದಿಮೆಗಳಲ್ಲಿ ಹಿಂದೀ ಮತ್ತು ಇಂಗ್ಲೀಶುಗಳನ್ನು ಬಳಸುವುದು ಕಡ್ಡಾಯವೆಂದು ಹೇಳುವ ಭಾರತದ ಭಾಷಾನೀತಿಯೇ ಇದಕ್ಕೆ ಕಾರಣವಾಗಿದೆ.

## ಬೆಂಗಳೂರು ಮೆಟ್ರೋದಲ್ಲಿ ಹಿಂದೀ ಯಾಕೆ?

ಬೆಂಗಳೂರಿನಲ್ಲಿ ಇನ್ನೇನು ಆರಂಭವಾಗಲಿರುವ ಮೆಟ್ರೋ ರೈಲು ಸೇವೆಗೆ 'ನಮ್ಮ ಮೆಟ್ರೋ' ಎನ್ನುವ ಹೆಸರನ್ನು ಕೊಟ್ಟಿದ್ದಾರೆ. ಅಲ್ಲಿ ಕನ್ನಡಕ್ಕೆ ಜಾಗವೇನೋ ಇದೆ. ಸಮಸ್ಯೆ ಏನೆಂದರೆ ಕನ್ನಡ ನಾಡಲ್ಲಿ, ಕನ್ನಡಿಗರ ನಾಡಲ್ಲಿ ಪರಭಾಷೆಯ ಫಲಕಗಳಿಗೂ ಕನ್ನಡಕ್ಕಿರುವಷ್ಟೇ ಸ್ಥಾನಮಾನ, ಪ್ರಾಮುಖ್ಯತೆ ಕೊಡಲಿಕ್ಕೆ ಮೆಟ್ರೋ ಮುಂದಾಗಿದೆ ಅನ್ನೋದು. ಹೌದು, ಈ ಫೋಟೋ ನೋಡಿ. ಇದು ನಮ್ಮ ಬೆಂಗಳೂರಿನ ಮಹಾತ್ಮಗಾಂಧಿ ರಸ್ತೆಯಲ್ಲಿ ಕಟ್ಟಿರುವ ನಮ್ಮ ಮೆಟ್ರೋ ರೈಲು ನಿಲ್ದಾಣ.



## ಕನ್ನಡದಲ್ಲೇಕೆ ಇಷ್ಟು ಚಿಕ್ಕದಾಗಿದೆ?

ಇಲ್ಲಿ ಯಾಕೆ ಕನ್ನಡವನ್ನು ಇಷ್ಟು ಚಿಕ್ಕದಾಗಿ ಹಾಕಿದ್ದಾರೆ? ತ್ರಿಭಾಷಾಸೂತ್ರದಲ್ಲಿ ಎಲ್ಲಾ ಭಾಷೆಗಳಿಗೂ ಸಮಾನವಾದ ಸೈಜು ಎಂದೇ? ನೂರಕ್ಕೆ ತೊಂಬತ್ತೈದು ಜನರಿಗೆ ಅನುಕೂಲವಾಗಬೇಕು ಅನ್ನುವ ಉದ್ದೇಶವಿದ್ದರೆ ಕನ್ನಡದಲ್ಲಿ ದೊಡ್ಡದಾಗಿ ಫಲಕಗಳನ್ನು ಹಾಕಬೇಡವೇ? ನಮ್ಮೂರಿನ ರೈಲು ಸಂಪರ್ಕ ನಮ್ಮ ಜನಕ್ಕೆ ಅನುಕೂಲ ಮಾಡಿ ಕೊಡಬೇಕು ಎಂಬುದಕ್ಕಿಂತಲೂ ಹಿಂದೀಯವರಿಗೆ ತೊಂದರೆಯಾಗಬಾರದು ಅನ್ನುವ ಮನಸ್ಥಿತಿ ಯಾಕೆ ನಮ್ಮ ಸರ್ಕಾರಕ್ಕೆ? ಇಷ್ಟಕ್ಕೂ

ತಮಿಳು, ತೆಲುಗು, ಮಲಯಾಳಂ, ಉರ್ದು, ಮರಾಠಿ, ಕೊಂಕಣಿ ಮೊದಲಾದ ನುಡಿಗಳಿಗೆ ಇಲ್ಲದ ಯಾವ ಕೋಡು ಹಿಂದೀಗೆ ಇದೆ?

ಯಾಕೆ ಹೀಗೆ ಹಾಕಿದ್ದೀರಾ? ಎಂಬ ಆಕ್ಷೇಪಕ್ಕೆ ತ್ರಿಭಾಷಾಸೂತ್ರದತ್ತ ಬೊಟ್ಟು ಮಾಡಿ ತೋರುವುದಾದರೆ ಅಂತಹ ತ್ರಿಭಾಷಾಸೂತ್ರವಾದರೂ ಏಕೆ ಬೇಕು? "ಅಲ್ರೀ, ಕನ್ನಡದಲ್ಲಿ ಹಾಕಿದ್ದಾರಲ್ಲಾ? ಸಾಲ್ದಾ? ನಿಮಗ್ಯಾಕೆ ಬೇರೆದ್ರು ಮೇಲೆ ಕಣ್ಣು" ಅಂತೀರಾ?

### ಸಮಸ್ಯೆ ಮೇಲೆ ಕಾಣುವಷ್ಟು ಚಿಕ್ಕದಲ್ಲ!

ಇದು ಯಾವುದೋ ಒಂದು ಕೇಂದ್ರಸರ್ಕಾರಿ ಕಛೇರಿಯಲ್ಲ... ಇಡೀ ಬೆಂಗಳೂರಿನ ತುಂಬಾ ಹರಿದಾಡೋ ಮೆಟ್ರೋ ರೈಲುಗಳು ಅನ್ನೋ ಕಾರಣದಿಂದ ಕನ್ನಡಿಗರಿಗೆ ಎಚ್ಚರಿಕೆಯ ಗಂಟೆಯಾಗಿದೆ. ಇಷ್ಟು ದಿನ ಹಿಂದೀ ಕೇಂದ್ರಸರ್ಕಾರದ ಅಧಿಕೃತ ಸಂಪರ್ಕ ಭಾಷೆ, ಭಾರತದ official languageಗಳಲ್ಲೊಂದು ಎನ್ನುವ ನೆಪ ಹೇಳಿ ಕೇಂದ್ರಸರ್ಕಾರಿ ಕಛೇರಿಗಳಲ್ಲಿ, ರೈಲ್ವೇಯಲ್ಲಿ ಇದ್ದ ಹಿಂದೀ ದೇವತೆ ಈಗ ಮೆಟ್ರೋಗೂ ಕಾಲಿಡುತ್ತಿರುವುದು ಇರುವುದನ್ನು ನೋಡಿದರೆ ಆತಂಕ ಆಗುತ್ತದೆ. ಕರ್ನಾಟಕ ಸರ್ಕಾರವೇ ಹೆಚ್ಚು ಪಾಲು ಹೂಡಿಕೆ ಮಾಡಿರುವ "ನಮ್ಮ ಮೆಟ್ರೋ"ಲಿ ಈಗ ತ್ರಿಭಾಷಾಸೂತ್ರವನ್ನು ಜಾರಿ ಮಾಡೋ ನೆಪದಲ್ಲಿ ಅನಿಯಂತ್ರಿತ ವಲಸೆಗೆ ಉತ್ತೇಜನ ಕೊಡುತ್ತಿದ್ದಾರೆ. ಭಾರತದ ಕೇಂದ್ರಸರ್ಕಾರದ ಅಂದಾಜು ೧೫% ಪಾಲಿದೆಯೆನ್ನುವ ಒಂದೇ ಕಾರಣಕ್ಕೆ ಇಡೀ ಬೆಂಗಳೂರಿನ ಮುಖಚರ್ಯೆಯನ್ನು, ಬೆಂಗಳೂರಿನ ಮತ್ತು ಆ ಮೂಲಕ ಕರ್ನಾಟಕದ ಮುಖಚರ್ಯೆಯನ್ನೇ ಬದಲಿಸಲು ಕಾರಣವಾಗಬಲ್ಲ ಈ ನಡೆಯ ಬಗ್ಗೆ ಎಚ್ಚೆತ್ತುಕೊಳ್ಳಬೇಕಾದ ತುರ್ತು ನಮ್ಮ ಮುಂದಿದೆ.

### ವಲಸೆ ಯಾಕೆ ಹೆಚ್ಚುತ್ತೆ ಅಂದ್ರೇ...

ಸುಮ್ಮನೆ ಯೋಚಿಸಿರಿ. ನೀವು ದೆಹಲಿ ನಗರಕ್ಕೆ ಹೋದರೆ ಅಲ್ಲಿನ ರೈಲು, ಬಸ್ಸು, ಬೀದಿಗಳಲ್ಲಿ ನಡೆಯುವಾಗ ನಿಮ್ಮ ಮನಸ್ಥಿತಿ ಹೇಗಿರುತ್ತದೆ ಎಂದು. ಈಗ ಮತ್ತೊಮ್ಮೆ ಯೋಚಿಸಿರಿ, ಅದೇ ದೆಹಲಿಯ ರೈಲು, ಬಸ್ಸು, ಕಛೇರಿ ಹಾಗೂ ಬೀದಿಗಳಲ್ಲಿ ಕನ್ನಡದಲ್ಲೂ ನಾಮಫಲಕಗಳು... ಕನ್ನಡದಲ್ಲಿ ವ್ಯವಹರಿಸುವ ಪಾಲಿಸಿ, ಕನ್ನಡದಲ್ಲೂ ವ್ಯವಹಾರ ಸಾಧ್ಯವಾಗುತ್ತದೆ ಎಂಬ ನಿಯಮವಿದ್ದರೆ ನಿಮ್ಮ ಮನಸ್ಥಿತಿ ಹೇಗಿರುತ್ತದೆ ಎಂದು. ಆಹಾ... ಇಡೀ ದಿಲ್ಲಿಯೇ ನಮ್ಮದೆನ್ನಿಸದೇ?

ನಮ್ಮ ಮಕ್ಕಳು-ಮರಿ, ಕೋಳಿ-ಕುರಿ, ಚಿಳ್ಳೆ-ಪಿಳ್ಳೆಗಳಿಗೂ "ದಿಲ್ಲಿಗೆ ಹೋಗು ಮಾರಾಯಾ, ನೋ ಪ್ರಾಬ್ಲಮ್, ಅಲ್ಲಿ ಕನ್ನಡ ನಡ್ಯುತ್ತೆ" ಎಂದು ವಲಸೆ ಮಾಡಿಸುವುದಿಲ್ಲವೇನು? ಈಗ ಮೆಟ್ರೋ ಪಾಲನೆ ಮಾಡಲು ಮುಂದಾಗಿರುವ ಭಾಷಾನೀತಿಯಿಂದಲೂ ಇಂಥದೇ ಪರಿಣಾಮ ಆಗದೆ?

**ಈಗೇಳದಿದ್ದರೆ ಮುಂದೆ ಮಲಗಬೇಕಾದೀತು!**

ಕನ್ನಡನಾಡಲ್ಲಿ ಕನ್ನಡದೋರಿಗಾಗಿ ಕನ್ನಡದಲ್ಲಿ ವ್ಯವಹಾರ ನಡ್ಸುದ್ರೆ ಸಾಲ್ದಾ? ಇಷ್ಟಕ್ಕೂ ಹಿಂದೀಗೆ ಇಲ್ಲಿ ಜಾಗ ಕೊಡೋದಾದ್ರೆ ತಮಿಳು, ಉರ್ದು, ಮಲಯಾಳಂ, ಒಡಿಯಾ, ಪಂಜಾಬಿ, ರಾಜಾಸ್ಥಾನಿ, ತೆಲುಗುಗಳಿಗೂ ಕೊಡಬೋದು ಅಲ್ವಾ? ಊಹೂಂ... ಕೇಂದ್ರಸರ್ಕಾರಕ್ಕೆ ಇರೋ ಗುರೀನೇ ಇವೆಲ್ಲಾ ವೈವಿಧ್ಯತೆಗಳನ್ನು ಅಳಿಸಿ ಹಿಂದೀನ ಇಡೀ ಭಾರತದ ತುಂಬಾ ಪ್ರತಿಷ್ಠಾಪಿಸೋ ಉಮ್ಮೇದಿ. ಇಲ್ಲೇ ಇರೋ ಕನ್ನಡಿಗನ ಹಿತ ಕಡೆಗಾಣಿಸಲ್ಪಟ್ಟರೂ ಸರಿಯೇ, ಹಿಂದೀಯವರಿಗೆ ಭಾರತದ ಯಾವ ಮೂಲೆಯಲ್ಲೂ ತೊಡಕಾಗಬಾರದು ಅನ್ನೋ ಮನಸ್ಥಿತಿ. ಒಟ್ಟಿನಲ್ಲಿ ಹಿಂದೀ ವಸಾಹತುಶಾಹಿ ಮನಸ್ಥಿತಿಯನ್ನು ಕನ್ನಡಿಗರು ಗುರುತಿಸಿ ಮೊಳಕೆಯಲ್ಲೇ ಚಿವುಟದಿದ್ದರೆ ನಾಳೆ ನಮ್ಮ ಬದುಕು ಮತ್ತೊಮ್ಮೆ ಗುಲಾಮಗಿರಿಗೆ ಒಳಗಾಗಬೇಕಾದೀತು! ಆದರೆ ಈ ಬಾರಿ ಅದು ಎಂದಿಗೂ ಮುಗಿಯದ ಹಿಂದೀ ಗುಲಾಮಗಿರಿಯಾದೀತು!!

**ಆಗಲೇ ಬೇಕೆಂದರೆ ಹೀಗಾಗಲಿ..**

ನಿಜಕ್ಕೂ ಹಾಗೆ ಪರಭಾಷಿಕರೂ ಭಾರತೀಯರೇ, ಅವರಿಗೂ ತೊಂದರೆಯಾಗಬಾರದು ಅನ್ನುವ ಕಾಳಜಿ ಇದ್ದಲ್ಲಿ ನಮ್ಮ ಮೆಟ್ರೋದಲ್ಲಿ ಭಾರತದ ಎಲ್ಲಾ ಪ್ರಮುಖ ಭಾಷೆಗಳಲ್ಲೂ ಸೂಚನಾ ಫಲಕಗಳನ್ನು ಹಾಕಬೇಕು. ಆದರೆ ಇದು ಮೊದಲಿಗೆ ದಿಲ್ಲಿಯಿಂದ ಆರಂಭವಾಗಬೇಕು. ಭಾರತದ ಎಲ್ಲಾ ಕಡೆ ಎಲ್ಲಾ ಭಾಷೆಯ ಫಲಕ ಹಾಕುವ ನೀತಿ ಜಾರಿಯಾಗುವುದಾದಲ್ಲಿ ಪ್ಪಬಹುದು. ಇಲ್ಲದಿದ್ದರೆ ಕನ್ನಡದವರು ದಿಲ್ಲಿಗೆ ಹೋಗಬೇಕೆಂದರೂ ಹಿಂದೀ ಕಲಿಯಬೇಕು, ಹಾಗೂ ದಿಲ್ಲಿಯವರು ಕರ್ನಾಟಕಕ್ಕೆ ಬರಬೇಕೆಂದರೂ ಇಲ್ಲಿನ ಕನ್ನಡಿಗರೇ ಹಿಂದೀ ಕಲಿಯಬೇಕು ಎನ್ನುವುದು ದೇಶದ ಒಗ್ಗಟ್ಟು ಉಳಿಸುವ ನೀತಿಯಾದೀತಾ?

**ಯುವಜನೋತ್ಸವ**

ಘನ ಕರ್ನಾಟಕ ರಾಜ್ಯಸರ್ಕಾರವೇ ಹಾಕಿರುವ ಯುವಜನೋತ್ಸವದ ಈ ಜಾಹೀರಾತನ್ನು ನೋಡಿ. ೧೦.೧೧.೨೦೧೦ರ ವಿಜಯಕರ್ನಾಟಕದಲ್ಲಿ ಇದು ಪ್ರಕಟವಾಗಿತ್ತು. ಇದರಲ್ಲಿ ಯುವಜನೋತ್ಸವದಲ್ಲಿ ಪಾಲ್ಗೊಳ್ಳಲು ನಾಡಿನ ಯುವಕರಿಗೆ ಕರೆಕೊಡಲಾಗಿದೆ.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ

ಯುವಜನೋತ್ಸವ

ಯುವ ಪ್ರತಿಭೆಯ ಅಭಿವ್ಯಕ್ತಿಗೆ ವೇದಿಕೆ

- 15 ರಿಂದ 35 ವರ್ಷದೊಳಗಿನ ಯುವಜನತೆಗೆ ವಿವಿಧ ಸ್ಪರ್ಧೆಗಳು (01.01.1977ರ ನಂತರ ಮತ್ತು 31.12.1996ರೊಳಗೆ ಹುಟ್ಟಿದವರು ಜನ್ಮ ದಿನಾಂಕದ ದಾಖಲೆಯೊಂದಿಗೆ ಭಾಗವಹಿಸಬಹುದು)
- ದಿನಾಂಕ 19.11.2010 ಮತ್ತು 20.11.2010ರಂದು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಮಟ್ಟದ ಯುವಜನೋತ್ಸವ. ಜಿಲ್ಲಾ ಮಟ್ಟದ ಸ್ಪರ್ಧೆಗಳಲ್ಲಿ ವಿಜೇತರಿಗೆ ರಾಜ್ಯ ಮಟ್ಟದ ಯುವಜನೋತ್ಸವದಲ್ಲಿ ಭಾಗವಹಿಸಲು ಅವಕಾಶ. ರಾಜ್ಯಮಟ್ಟದ ಸ್ಪರ್ಧೆಗಳಲ್ಲಿ ವಿಜೇತರಿಗೆ ಆಕರ್ಷಕ ನಗದು ಬಹುಮಾನ ಮತ್ತು ರಾಜಸ್ಥಾನದ ಉದಯಪುರದಲ್ಲಿ ಜನವರಿ - 2011ರಲ್ಲಿ ನಡೆಯುವ ರಾಷ್ಟ್ರೀಯ ಯುವಜನೋತ್ಸವದಲ್ಲಿ ಭಾಗವಹಿಸುವ ಅವಕಾಶ. ಅತ್ಯುತ್ತಮ ಪ್ರತಿಭೆಗಳಿಗೆ ಅಂತರಾಷ್ಟ್ರೀಯ ಯುವವಿನಿಮಯ ಕಾರ್ಯಕ್ರಮದ ಅಂಗವಾಗಿ ವಿದೇಶಕ್ಕೆ ತೆರಳುವ ಅವಕಾಶ.

ಶ್ರೀ ಬಿ. ಎಸ್. ಯಡಿಯೂರಪ್ಪ

ಸ್ಪರ್ಧಾ ವಿಭಾಗಗಳು

- ಹಿಂದಿ / ಇಂಗ್ಲಿಷ್ ಏಕಾಂಕ ನಾಟಕ
- ಹಿಂದಿ / ಇಂಗ್ಲಿಷ್ ಭಾಷಣ
- ಜಾನಪದ ನೃತ್ಯ (ತಂಡ)
- ಜಾನಪದ ಗೀತೆ (ತಂಡ)
- ಶಾಸ್ತ್ರೀಯ ಗಾಯನ ಹಿಂದೂಸ್ತಾನಿ (ಸೋಲೋ)
- ಶಾಸ್ತ್ರೀಯ ಗಾಯನ ಕರ್ನಾಟಕ (ಸೋಲೋ)
- ಶಾಸ್ತ್ರೀಯ ತಬಲಾ ವಾದನ (ಸೋಲೋ)
- ಶಾಸ್ತ್ರೀಯ ಕೊಳಲು ವಾದನ (ಸೋಲೋ)
- ಶಾಸ್ತ್ರೀಯ ವೀಣಾ ವಾದನ (ಸೋಲೋ)
- ಶಾಸ್ತ್ರೀಯ ಮೃದಂಗ ವಾದನ (ಸೋಲೋ)
- ಹಾರ್ಮೋನಿಯಂ (ಲೈಟ್)
- ಗಿಟಾರ್
- ಮಣಿಪುರಿ ನೃತ್ಯ
- ಭರತನಾಟ್ಯ
- ಒಡಿಸ್ಸಿ ನೃತ್ಯ
- ಕಥಕ್ ನೃತ್ಯ
- ಕೂಚಿಪುಡಿ ನೃತ್ಯ

ಯುವ ಪ್ರತಿಭೆಗಳೇ ಬನ್ನಿ, ಜಿಲ್ಲಾ ಯುವಜನೋತ್ಸವದಲ್ಲಿ ಭಾಗವಹಿಸಿ

ಪ್ರವೇಶಕ್ಕೆ ನಿಮ್ಮ ಜಿಲ್ಲೆಯ ಸಹಾಯಕ ನಿರ್ದೇಶಕರು,
ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರನ್ನು ಸಂಪರ್ಕಿಸಲು ಕೋರಿದೆ.

ಶಿವನಂಜಯ್ಯ, ಕ.ಆ.ಸೇ.

ಐ.ಆರ್. ಪೆರುಮಾಳ್, ಭಾ.ಆ.ಸೇ.

ಈ ಯುವಜನೋತ್ಸವದಲ್ಲಿ ಭಾಷಣ ಸ್ಪರ್ಧೆ ಮತ್ತು ಏಕಾಂಕ ನಾಟಕ ಸ್ಪರ್ಧೆಗಳು ಹಿಂದೀ/ ಇಂಗ್ಲೀಶಿನಲ್ಲಿರಬೇಕಂತೆ! ಇಲ್ಲಿ ಬೇರೆ ಬೇರೆ ಹಂತಗಳಲ್ಲಿ ಗೆದ್ದು ಮುಂದೆ ರಾಷ್ಟ್ರೀಯ ಯುವಜನೋತ್ಸವದಲ್ಲಿ ಭಾಗವಹಿಸಿ, ಅಲ್ಲೂ ಬಹುಮಾನ ಗೆಲ್ಲಿ, ಹೊರದೇಶದಲ್ಲಿ ನಿಮ್ಮ ಪ್ರತಿಭೆ ತೋರಿಸೋ ಅವಕಾಶ ಗಳಿಸಿಕೊಳ್ಳಿ ಎಂದು ನಮ್ಮ ಹಳ್ಳಿ ಹಳ್ಳಿಯಲ್ಲಿ ಕರೆಕೊಟ್ಟಿದ್ದಾರೆ. ಇದು ಹೇಗೆ ಸಾಧ್ಯ? ಏಕೆಂದರೆ ನಮ್ಮ ಯುವಕರು ನಾಟಕ ಮಾಡಬೇಕಾದ್ದು ಹಿಂದೀ/ ಇಂಗ್ಲಿಶಿನಲ್ಲಿ ಎನ್ನುತ್ತಿದೆ ಈ ಜಾಹೀರಾತು. ಇದನ್ನು ಹೊರಡಿಸಿರೋದು ನಮ್ಮ ಕನ್ನಡ ನಾಡಿನ, ಕನ್ನಡಿಗರನ್ನು ಮುನ್ನಡೆಸುವ, ಜಗತ್ತಿನ ಕೆಡುಕುಗಳಿಂದ ಕನ್ನಡಿಗರನ್ನು ಕಾಯಬೇಕಾದ ಘನ ಕರ್ನಾಟಕ ರಾಜ್ಯಸರ್ಕಾರ!

**ರಾಷ್ಟ್ರೀಯ ಅಂತಂದ್ರೆ ಹಿಂದೀ/ ಇಂಗ್ಲೀಶ್ ಮಾತ್ರಾನಾ?**

ಹೌದೂ, ಭಾರತದ ಮೂಲೆಮೂಲೆಗಳ ಪ್ರತಿಭೆಗಳನ್ನು ಬೆಳಕಿಗೆ ತರಲು ಹೊರಟವರಿಗೆ ಭಾಷೆಯ ಮಿತಿ ಹಾಕುವಂತಹ ಈ ಕಟ್ಟಳೆಯಾದ್ರೂ ಯಾಕೆ ಬೇಕಿತ್ತು? ಇಲ್ಲಿ ಭಾರತದ ಎಲ್ಲಾ ನುಡಿಗಳಿಗೂ ಸ್ಥಾನ ಕೊಡಬೇಕಲ್ಲವೇ? ಇಲ್ಲಿ ಯಾಕೆ ಕನ್ನಡದಲ್ಲಿ ನಾಟಕ ಮಾಡುವುದು, ಭಾಷಣ ಮಾಡುವುದು ತಪ್ಪಾಗುತ್ತದೆ? ವೈವಿಧ್ಯತೆ, ನಾನಾ ಭಾಗಗಳ ನಾನಾ ಸಂಸ್ಕೃತಿಯ ಜನರನ್ನು ಪರಸ್ಪರ ಪರಿಚಯಿಸಿ ರಾಷ್ಟ್ರೀಯ ಏಕತೆಯನ್ನು ಹೆಚ್ಚಿಸಲು ಈ ಯುವಜನೋತ್ಸವ ನಡೆಸಲಾಗುತ್ತದೆ ಅನ್ನುವ ಕೇಂದ್ರಸರ್ಕಾರದ ಮೂಲೋದ್ದೇಶವೇ, ಈ ಸ್ಪರ್ಧೆಗಳಲ್ಲಿ ಕೇವಲ ಇಂಗ್ಲೀಶ್/ ಹಿಂದೀ ಮಾತ್ರಾ ಬಳಸಿ ಅನ್ನುವ ನಿಲುವಿನಿಂದಾಗಿ ಅರ್ಥಹೀನವಾಗುವುದಿಲ್ಲವೇ? ಎಲ್ಲಾ ಭಾಷೆಗಳಿಗೆ ಸಮಾನ ಗೌರವ ಕೊಡುತ್ತೇವೆ, ವೈವಿಧ್ಯತೆಯಲ್ಲಿ ಏಕತೆ ಸಾಧಿಸುತ್ತೇವೆ ಎನ್ನುವ ನಾಡಿನಲ್ಲಿ ಹೀಗಿರುವುದು ಸರಿಯೇ? ಇದು ಏಕತೆಗೆ ಪೂರಕವೇ? ಹಿಂದೀ/ ಇಂಗ್ಲೀಶ್ ಅರಿಯದ ಭಾರತೀಯರಿಗೆ ಈ ಸ್ಪರ್ಧೆಗಳಲ್ಲಿ ಭಾಗವಹಿಸುವ ಹಕ್ಕೇ ಇಲ್ಲವೇ? ಆ ಪ್ರತಿಭೆಗಳು ಪ್ರತಿಭೆಗಳಲ್ಲವೇ?

## ಮಿನಿಸ್ಟ್ರಿ ಆಫ್ ಓವರ್‌ಸೀಸ್ ಇಂಡಿಯನ್ ಅಫೇರ್ಸ್‌ನ ಈ ಜಾಹೀರಾತು ಯಾರಿಗಾಗಿ?

ಇದು ದಿನಾಂಕ ೦೪.೦೩.೨೦೧೦ರ ಕನ್ನಡಪ್ರಭದಲ್ಲಿ ಬಂದಿದ್ದ ಜಾಹೀರಾತು. ಮಿನಿಸ್ಟ್ರಿ ಆಫ್ ಓವರ್ಸೀಸ್ ಇಂಡಿಯನ್ ಅಫೇರ್ಸ್ ಎನ್ನುವ ಕೇಂದ್ರಸರ್ಕಾರಿ ಇಲಾಖೆಯವರು ತನ್ನ ಪ್ರಜೆಗಳಿಗೆ ಉಪಕಾರ ಮಾಡಲಿಕ್ಕೆಂದು ಈ ಜಾಹಿರಾತನ್ನು ಹಾಕಿಸಿದ್ದಾರೆ!






ಇದನ್ನು ಓದಲಿಕ್ಕೆ ಕನ್ನಡ ಓದಲು ಬರುವ ಎಲ್ಲರಿಗೂ ಸಾಧ್ಯ... ಅದೇ ತಾನೆ ಒಂದು ಪತ್ರಿಕೆಯಲ್ಲಿ ಪ್ರಕಟಿಸುವುದರ ಗುರಿ! ಆದರೆ, ಜನರು ಓದಿದ್ದನ್ನು ಅರ್ಥ ಮಾಡಿಕೊಳ್ಳಬೇಕು ಎನ್ನುವುದು ಈ ಸಚಿವಾಲಯದ ಗುರಿಯಲ್ಲ ಎಂದು ಮಾತ್ರಾ ಖಚಿತವಾಗಿ ಹೇಳಬಹುದು. ಯಾಕೆಂದರೆ ಇದನ್ನು ಓದಿದ ಯಾವೊಬ್ಬ ಕನ್ನಡಿಗನಾದರೂ ಇದನ್ನು ಪೂರ್ತಿಯಾಗಿ ಸರಿಯಾಗಿ ಅರ್ಥ ಮಾಡಿಕೊಂಡುಬಿಟ್ಟರೆ... ಕನ್ನಡದ ಕುಲದೈವ ಮಧುಕೇಶ್ವರನ ಮೇಲಾಣೆ.

## ವಿ.ಐ.ಎಸ್.ಎಲ್ – ಕನ್ನಡಕ್ಕೆ ಕವಡೆ ಕಿಮ್ಮತ್ತೂ ಕೊಡದ ’ಸರ್ ಎಂ.ವಿ ಕೈಗೂಸು’!




**ಭದ್ರಾವತಿ ಉಕ್ಕು ಕಾರ್ಖಾನೆ :** ಸರ್ ಎಂ.ವಿಯವರು ಕಟ್ಟಿದ ಒಂದು ಮಹತ್ವದ ಕಾರ್ಖಾನೆ ಅಂದಿನ ಮೈಸೂರು ಕಬ್ಬಿಣ ಕಾರ್ಖಾನೆ. ಮುಂದಿನ ದಿನಗಳಲ್ಲಿ ಇದನ್ನು ಭಾರತ ಸರ್ಕಾರಕ್ಕೆ ವಹಿಸಿಕೊಡಲಾಯಿತು. ಮುಂದೆ ಭದ್ರಾವತಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯಾಗಿ ಬೆಳೆದ ಈ ಸಂಸ್ಥೆಗೆ ಇದೀಗ ಅದರ ಸ್ಥಾಪಕರಾದ ಸರ್ ಎಂ.ವಿಯವರ ಹೆಸರನ್ನು ಇಡಲಾಗಿದೆ. ಕನ್ನಡದಲ್ಲಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಅಂತ ಇರೋದನ್ನು ದೇವನಾಗರಿ ಲಿಪಿಯಲ್ಲಿ ಐರನ್ ಅಂಡ್ ಸ್ಟೀಲ್ ಪ್ಲಾಂಟ್ ಅಂತಾ ಬರೆದಿರುವ ಉದ್ದೇಶವಾದರೂ ಏನು? ಕನ್ನಡದೋರಿಗೆ ಹಿಂದೀ ಲಿಪಿ ಕಲಿಸುವುದಾ?

## ಹೆಸರಷ್ಟೇ ಅಲ್ಲ! ಆಡಳಿತವೂ ಹೀಗೇ ಇರೋದು

ಇದು ಈಗ ಭಾರತ ಸರ್ಕಾರದ ಒಂದು ಉದ್ದಿಮೆಯಾಗಿದೆ. ಅಂದ್ರೆ ಇದರಲ್ಲಿ ಕೆಲಸಗಾರರು ಕನ್ನಡಿಗರೇ ಆಗಿದ್ರೂ ಇದರ ಉನ್ನತ ಅಧಿಕಾರಿಗಳು ಹೊರಗಿನವರೇ. ಹಾಗಾಗಿ ಇಲ್ಲಿ ಬಳಸೋ ಪ್ರತಿ ಹಾಳೆಯ ಮೇಲೂ ಇಂಗ್ಲಿಷು ಮತ್ತು ಹಿಂದೀಲಿ ಮುದ್ರಣ ಮಾಡಿದ್ದಾರೆ. ಈ ಸಂಸ್ಥೆಯ ಕಡತದ ಒಳಕವಚಗಳನ್ನು ನೋಡಿದರೆ ಒಂದರಲ್ಲಿ standard draft ಅನ್ನುವ

ಪಟ್ಟಿಯನ್ನೂ, ಮತ್ತೊಂದರಲ್ಲಿ commonly used phrases ಅನ್ನುವ ಪಟ್ಟಿಯನ್ನೂ ಕಾಣಬಹುದು.

## नेमी पत्राचारों का मानक रूप
## STANDARD DRAFTS OF ROUTINE CORRESPONDENCE

| | |
|---|---|
| • उपरोक्त विषय पर मांगी गई सूचना / रिपोर्ट "शून्य" है। | • The information / report called for in the above matter is NIL. |
| • उपरोक्त पत्र की पावती भेजी जाती है। | • Receipt of the letter cited is hereby acknowledged. |
| • उपरोक्त संदर्भ में मांगी गई रिपोर्ट / सूचना निर्धारित प्रोफार्मा में संलग्न है। | • The report / information called for in the reference cited is enclosed in the |

ಎರಡರಲ್ಲೂ ಹಿಂದೀ ಕಲಿಸುವ ಪ್ರಯತ್ನವೇ ಕಾಣುವುದು. ಈ ಸಂಸ್ಥೆಯ ಅಧಿಕಾರಿಗಳು ಸಾಮಾನ್ಯವಾಗಿ ಬಳಸುವ ವಾಕ್ಯಗಳೆಂದು ಹಿಂದೀ/ ಇಂಗ್ಲಿಷ್ ಮಾತ್ರಾ ಹಾಕುವುದರ ಅರ್ಥ, ಹಿಂದೀ ಬರದೆ ಇರುವವರು ಅಧಿಕಾರಿಯಾಗಲಿಕ್ಕೆ

## अधिकारियों द्वारा आम तौर पर प्रयुक्त वाक्यांश
## PHRASES COMMONLY USED BY THE OFFICERS

| | |
|---|---|
| 01 I agree | मैं सहमत हूँ |
| 02 Not Agreed | असहमत |
| 03 Approved | अनुमोदित |
| 04 Granted | स्वीकृत |
| 05 Seen, thanks | देखा, धन्यवाद |
| 06 Seen & returned | देखकर वापिस किया |
| 07 Please discuss | कृपया चर्चा करें |
| 08 Please Speak | कृपया बात करें |
| 09 Please Put up previous paper | कृपया पहले के कागजात प्रस्तुत करें |

ನಾಲಾಯಕ್ಕು ಎಂದೇ ಅಲ್ಲವೇ? ಈ ಸಂಸ್ಥೆಯಲ್ಲಿ ಉನ್ನತ ಹುದ್ದೆಗೆ ಏರಬೇಕೆಂದರೆ ಹಿಂದೀ ಕಲಿತಿರಲೇಬೇಕೆಂಬ ರೀತಿಯಲ್ಲಿ ನಡೆದುಕೊಳ್ಳುತ್ತಿರುವುದು ಸರಿಯೇನು? ಇಲ್ಲಿ ಹಿಂದೀಯಲ್ಲೇ ಕಡತಗಳಿದ್ದರೆ ಈ ಸಂಸ್ಥೆಯ ಅಟೆಂಡರ್ ಹುದ್ದೆಗೂ ಹಿಂದೀ ಕಲಿತಿರಬೇಕೆನ್ನುವ ನಿಯಮ ಹುಟ್ಟಿಕೊಳ್ಳಲಾರದೆ? ಈ ಸಂಸ್ಥೆಯನ್ನು ಕಟ್ಟಿದವರು ಕನ್ನಡಿಗರು. ಇಲ್ಲಿ ಉಕ್ಕಾಗಿ ಬದಲಾಗೋ ಅದಿರು

ಕನ್ನಡನಾಡಿನದು, ಹಾಗೆ ಬದಲಾಯಿಸೋರೂ ಕನ್ನಡಿಗರು(?). ಇಲ್ಲಿ ಆಡಳಿತ ಮಾತ್ರಾ ಇಂಗ್ಲಿಷ್ ಮತ್ತು ಹಿಂದೀಲಿ.

**ಹಣಕಾಸು ವ್ಯವಸ್ಥೆಯಲ್ಲಿ ಒಳಗೊಳ್ಳುವಿಕೆಯ ಯಶಸ್ಸು?**

ವಿಶ್ವಸಂಸ್ಥೆಯು ೨೦೦೫ರಲ್ಲಿ ಈ ಬಗ್ಗೆ ಮಾತಾಡಿತ್ತು. ಅಂದಿನ ಮುಖಂಡರಾಗಿದ್ದ ಕೋಫಿ ಅನ್ನನ್ ಅವರು ಇಡೀ ವಿಶ್ವದಲ್ಲಿ ಹಣಕಾಸು ವ್ಯವಸ್ಥೆಗಳ ಬಳಕೆಯನ್ನು ಎಲ್ಲಾ ಜನರಿಗೂ ತಲುಪಿಸುವಂತಾಗಬೇಕೆಂಬ ಕರೆಯನ್ನು ಕೊಟ್ಟಿದ್ದರು. ಇದನ್ನು Financial Inclusion ಎಂಬ ಹೆಸರಿಂದಲೇ ಇಂದು ಕರೀತಾ ಇದೀವಿ. ಭಾರತ ಕೂಡಾ ಈ ಯೋಜನೆಯನ್ನು ರೂಪಿಸಿದೆ. ಇದರ ಮೂಲ ಉದ್ದೇಶವೇ ನಾಡಿನ ಆರುಲಕ್ಷ ಹಳ್ಳಿಗಳ ಜನರಿಗೆ ಹಣಕಾಸು ವ್ಯವಸ್ಥೆಯನ್ನು ಪರಿಚಯಿಸಿ ಅದನ್ನು ಬಳಸಲು ಶುರು ಮಾಡಿಸುವುದು.

**ಏನಿದು (Financial Inclusion) ಹಣಕಾಸು ವ್ಯವಸ್ಥೆಯಲ್ಲಿ ಒಳಗೊಳ್ಳುವಿಕೆ?**

ಭಾರತದಂತಹ ದೇಶದಲ್ಲಿ ಇಂದಿಗೂ ಬ್ಯಾಂಕಿಂಗ್, ವಿಮೆ ಮೊದಲಾದ ಹಣಕಾಸು ಸಂಬಂಧಿತ ವ್ಯವಸ್ಥೆಯ ಪರಿಚಯವೇ ಇಲ್ಲದ ಜನರಿದ್ದಾರೆ ಅನ್ನುವುದು ವಾಸ್ತವ ಸಂಗತಿ. ಬ್ಯಾಂಕಿನ ಖಾತೆ, ಇನ್ಶ್ಯೂರನ್ಸ್, ಡೆಬಿಟ್ ಕಾರ್ಡು ಇಂತಹ ಸೌಲಭ್ಯಗಳನ್ನು ನಾಡಿನಲ್ಲಿ ಹೆಚ್ಚು ಹೆಚ್ಚು ಜನರು ಬಳಸುವಂತಾದರೆ ಒಟ್ಟೂ ದೇಶದ ಅಭಿವೃದ್ಧಿಗೆ ಇದು ವೇಗವನ್ನು ತಂದುಕೊಡಲಿದೆಯಂತೆ.

**ಏನಾಗಿದೆ? ಏನಾಗಬೇಕು?**

ಭಾರತ ದೇಶದಲ್ಲಿ ಬ್ಯಾಂಕುಗಳು, ವಿಮಾ ವಿಭಾಗಗಳು ಹೆಚ್ಚಾಗಿ ಕೇಂದ್ರಸರ್ಕಾರ ಹಾಕಿರೋ ನೀತಿ ನಿಯಮಗಳನ್ನು ಅನುಸರಿಸುತ್ತವೆ. ಬ್ಯಾಂಕುಗಳೂ ಕೂಡಾ ಭಾರತದ ಭಾಷಾನೀತಿಯ ಒಳಗೇ ಕೆಲಸ ಮಾಡುತ್ತವೆ. ಹೀಗಾಗಿ ಎಂದಿನಂತೆ ಭಾರತದ ಯಾವ ಮೂಲೆಯ ಬ್ಯಾಂಕಿಗೆ ಹೋದರೂ ಹಿಂದೀ/ ಇಂಗ್ಲೀಷಿಗೆ ಮಣೆ. ಬ್ಯಾಂಕುಗಳಲ್ಲಿ ಹಿಂದೀ ಬಳಕೆಯನ್ನು ಹೀಗೆ ಹೀಗೆ ಹೆಚ್ಚಿಸಬೇಕು ಅನ್ನೋ ನೀತಿಯನ್ನು ಭಾರತ ಹೊಂದಿದೆ ಅನ್ನೋದೇ ನಮ್ಮ ಕಾಳಜಿಗೆ ಕಾರಣ. ಯಾಕೆ ಕನ್ನಡನಾಡಲ್ಲಿ ಕನ್ನಡದಲ್ಲಿ ವ್ಯವಹರಿಸದೇ ಇರುವುದು ಅಪರಾಧ ಅನ್ನುವ ನಿಯಮವನ್ನು ಮಾಡಿಲ್ಲಾ ಅನ್ನುವುದೇ ನಮ್ಮ ಕಳಕಳಿ. ಕನ್ನಡ ಮಾತ್ರಾ ಬಲ್ಲವನಿಗೆ ಬ್ಯಾಂಕಿನ ಒಂದು ಚೆಕ್ ಬರೆಯಲಿಕ್ಕೆ ಆಗುವುದಿಲ್ಲ.

ವಿಮೆ ಮಾಡಿಸಲು ಅರ್ಜಿ ತುಂಬಲಿಕ್ಕೆ ಆಗುವುದಿಲ್ಲಾ ಅನ್ನುವ ಪರಿಸ್ಥಿತಿಯನ್ನು ಕೇಂದ್ರಸರ್ಕಾರವೇ ಹುಟ್ಟುಹಾಕಿರುವಾಗ ಹೇಗೆ ಈ ಯೋಜನೆ ಯಶಸ್ವಿಯಾದೀತು ಅನ್ನೋದು ಯಕ್ಷಪ್ರಶ್ನೆ. ನಿಜಕ್ಕೂ ನೋಡಿದರೆ ಹಣಕಾಸು ವ್ಯವಹಾರದಲ್ಲಿ ನಂಬಿಕೆಯೇ ಅತಿಮುಖ್ಯ. ಹಾಗಾಗಿ ವ್ಯವಹಾರದ ಪ್ರತಿಯೊಂದು ಹೆಜ್ಜೆಯಲ್ಲೂ ಜನರ ಭಾಷೆ ಅಳವಡಿಕೆಯಾಗಬೇಕು. ಆಗ ಮಾತ್ರ Financial Inclusion ಎಂಬ ಕನಸು ನನಸಾಗಲು ಸಾಧ್ಯ!

## ರೈಲ್ವೇ ಇಲಾಖೆಯಲ್ಲಿ ಸುರಕ್ಷತಾ ಸೂಚನೆಗಳು

ಇದು ಯಾವುದೋ ಉತ್ತರ ಭಾರತಕ್ಕೆ ಸಂಬಂಧಿಸಿದ ಚಿತ್ರವಲ್ಲ. ಭಾರತೀಯ ರೈಲ್ವೇಯ ಅಂಗವಾಗಿ ನೈಋತ್ಯ ರೈಲ್ವೇ ಎನ್ನುವ ಹೆಸರಿನಲ್ಲಿ ಹುಬ್ಬಳ್ಳಿಯಲ್ಲಿ

ಕೇಂದ್ರ ಕಛೇರಿಯನ್ನು ಹೊಂದಿದ್ದು, ಕರ್ನಾಟಕದಲ್ಲೇ ಹೆಚ್ಚಿನ ವ್ಯಾಪ್ತಿಯನ್ನು ಹೊಂದಿರುವ ರೈಲ್ವೇ ವಿಭಾಗಕ್ಕೆ ಸಂಬಂಧಿಸಿರುವುದು.

**ಸುರಕ್ಷತೆಗೆ ಆದ್ಯತೆ ಎಂಬುದಿಲ್ಲಿ ಕಡೆಗಣನೆ!**

ರೈಲು ಪ್ರಯಾಣ ಮಾಡುವಾಗ ಎಚ್ಚರದಿಂದಿರಿ, ಯಾರಾದರೂ ಜೊತೆಯಲ್ಲಿ ಪಯಣಿಸುವ ಅಪರಿಚಿತರು ಏನಾದರೂ ತಿನ್ನಲು ಕೊಟ್ಟರೆ ತಿನ್ನಬೇಡಿ ಎಂದು ಈ ರೈಲುಗಳಲ್ಲಿ ಓಡಾಡುವ ನಾಗರೀಕರಿಗೆ ಎಚ್ಚರ ನೀಡುವ ಜಾಹೀರಾತೊಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಈ ಕೆಳಗಿನಂತೆ ಪ್ರಕಟವಾಗಿತ್ತು.

ಮೊದಲಿಗೆ ಈ ಜಾಹೀರಾತನ್ನು ಓದಲು ಆಗುವವರ ಸಂಖ್ಯೆಯೆಷ್ಟು? ಯಾರು ಇದನ್ನು ಅರ್ಥಮಾಡಿಕೊಳ್ಳಬಲ್ಲರು? ಎಂದು ನೋಡಿದರೆ ನಿರಾಶೆಯಾಗುತ್ತದೆ. ಯಾಕೆ ಹೀಗೆ ಕನ್ನಡ ನೆಲದಲ್ಲಿ ಹಿಂದೀಯಲ್ಲಿ ಜನರನ್ನು ಎಚ್ಚರಿಸುವ ಜಾಹೀರಾತು ಕೊಟ್ಟಿದ್ದಾರೆ ಎಂದರೆ ಭಾರತದ ಭಾಷಾನೀತಿಯ ಆಧಾರದಂತೆ ಕೇಂದ್ರಸರ್ಕಾರಿ ಉದ್ದಿಮೆಯಾದ ರೈಲ್ವೇಯ ಆಡಳಿತ ಭಾಷೆ ಹಿಂದೀ/ ಇಂಗ್ಲೀಶ್ ಆಗಿದೆ.

“ನಿಮಗೆ ಸುರಕ್ಷತೆ ಬೇಕಾ? ಹಿಂದೀ ಕಲಿತುಕೊಳ್ಳಿ” ಎನ್ನುವ ಸಂದೇಶವನ್ನು ಈ ಜಾಹೀರಾತಿನ ಮೂಲಕ ಭಾರತ ಸರ್ಕಾರ ತನ್ನ ಹಿಂದೀಯೇತರ ಪ್ರಜೆಗಳಿಗೆ ನೀಡುತ್ತಿದೆ... ಅಲ್ವಾ?

ಇನ್ನು ನಮ್ಮೂರಿನ ರೈಲುಗಳ ಮೇಲೆ ಎಲ್ಲಿಂದ ಎಲ್ಲಿಗೆ ಹೋಗುತ್ತಿದೆ ಅನ್ನುವ ಫಲಕ ಹಾಕಿರುವುದನ್ನು ಗಮನಿಸಿ ನೋಡಿದರೆ ಅಲ್ಲಿಯೂ ಹೆಚ್ಚಿನ ಕಡೆ ಕಾಣುವುದು ಹಿಂದೀ ಮತ್ತು ಇಂಗ್ಲೀಶ್ ಮಾತ್ರಾ. ಹಾಗಾದರೆ ತ್ರಿಭಾಷಾಸೂತ್ರಾ ಎಲ್ಲಿಗೆ ಹೋಯಿತು? ಬೆಂಗಳೂರು–ಮೈಸೂರು ನಡುವಿನ ರೈಲಿನಲ್ಲಿ ಹಿಂದೀಯಲ್ಲಿ ನಾಮಫಲಕವಿದ್ದರೆ ಯಾರಿಗೆ ಅನುಕೂಲ? ಇದು ಸ್ಪಷ್ಟವಾಗಿ ಹಿಂದೀ ಭಾಷಿಕರಿಗೆ ದೇಶದ ಯಾವ ಮೂಲೆಗೇ ಹೋಗಿ ಬದುಕಲೂ ತೊಡಕಾಗಬಾರದು ಎಂದು ಭಾರತ ಸರ್ಕಾರ ತೆಗೆದುಕೊಂಡಿರುವ ಕ್ರಮವಾಗಿ ಕಾಣುವುದಿಲ್ಲವೇ? ಭಾರತದ ಪ್ರಜೆಗಳೆಲ್ಲಾ ಸಮಾನರು, ಸಮಾನ ಹಕ್ಕುಗಳನ್ನು ಹೊಂದಿದ್ದಾರೆ ಎನ್ನುವುದಾದರೆ ಕನ್ನಡಿಗರಿಗೆ ಇದೇ ಸೌಕರ್ಯವನ್ನು ದೆಹಲಿಯಲ್ಲಿ ಒದಗಿಸಿಕೊಡುವರೇನು? ಇಲ್ಲವೆನ್ನುವುದಾದರೆ ಹಿಂದೀಯವರಿಗೂ ಹಿಂದೀಯೇತರರಿಗೂ ನಡುವೆ ಭಾರತಸರ್ಕಾರವೇ ತಾರತಮ್ಯ ಮಾಡುತ್ತಿದೆ ಎಂದಾಗಲಿಲ್ಲವೇ? ಮತ್ತೆ ಸಮಾನ ಹಕ್ಕುಗಳೆಲ್ಲಿ ಬಂತು?




ಈ ಚಿತ್ರ ರೈಲುಗಳ ಒಳಗೆ ಹಾಕಿರುವುದು. ತುರ್ತು ಸನ್ನಿವೇಶಗಳಲ್ಲಿ ಹೇಗೆ ಗಾಜು ಒಡೆದು ಕಿಟಕಿಯಿಂದ ಪಾರಾಗಬೇಕು ಅನ್ನುವುದರ ಬಗ್ಗೆ ನೀಡಿರುವ ಸುರಕ್ಷತೆಯ ಸೂಚನೆ. ಈ ಸೂಚನೆಯೂ ಕೂಡಾ ಹಿಂದೀ/ ಇಂಗ್ಲೀಶ್ ಭಾಷೆಗಳಲ್ಲಿ ಮಾತ್ರವಿದೆ. ಅಂದರೇನರ್ಥ? ಕನ್ನಡವೊಂದನ್ನೇ ಬಲ್ಲ, ಕನ್ನಡನಾಡಿನಲ್ಲಿ ನಮ್ಮ ಪಾಡಿಗೆ ನಾವು ಬದುಕುತ್ತೇವೆಂದರೂ ಹಿಂದೀ ಕಲಿಯದಿದ್ದರೆ ನಿಮಗೆ ಯಾವುದೇ

ಸೌಕರ್ಯಗಳಿಲ್ಲಾ ಎಂದು ಸಾರುವ ಪ್ರಯತ್ನವೇ? ಈಗ ಹೇಳಿ, ಹಿಂದೀ ಪ್ರಸಾರ ಒಪ್ಪಿಸುವಿಕೆಯಿಂದಾಗುತ್ತಿದೆಯೋ? ಒತ್ತಾಯದಿಂದಲೋ? ಇಂದಿನ ಭಾರತದ ಭಾಷಾನೀತಿಯು ಹುಳುಕಿನದ್ದು ಮತ್ತು ಬದಲಾವಣೆಗೆ ಅರ್ಹ ಎನ್ನುವುದಕ್ಕೆ ಇದಕ್ಕಿಂತಲೂ ಪುರಾವೆ ಬೇಕಾ?

## ರಸ್ತೆ ಬದಿಯ ಮೈಲಿಗಲ್ಲೂ ಹಿಂದೀಯಲ್ಲಿ!

ಈ ಚಿತ್ರದಲ್ಲಿರೋ ಮೈಲಿಗಲ್ಲು ನೋಡಿ. ಇದ್ಯಾವುದೋ ಉತ್ತರಭಾರತದಲ್ಲಿ ತೆಗೆದಿರುವ ಚಿತ್ರವಲ್ಲ. ದಕ್ಷಿಣ ಭಾರತದ ತಮಿಳುನಾಡಿನ ಗುಡಲೂರಿಗೆ ಹದಿನಾಲ್ಕು ಕಿಮೀ ದೂರವಿದೆ ಎನ್ನುತ್ತಿರುವ ಈ ಮೈಲಿಗಲ್ಲು ಹಿಂದೀಯಲ್ಲಿದೆ.




ಇದು ಅತ್ಯಂತ ಸ್ಪಷ್ಟವಾಗಿ ಹೇಳುವುದೇನೆಂದರೆ ಭಾರತದಲ್ಲಿ ಹಿಂದೀ ಭಾಷಿಕರಿಗೆ ಯಾವ ಮೂಲೆಗೇ ಹೋಗಲೂ ಕೂಡಾ ತೊಡಕಾಗಬಾರದು ಎಂದಲ್ಲವೇ? ಹಿಂದೀ ವಸಾಹತುಶಾಹಿಯ ಸ್ಥಾಪನೆಯ ಕ್ರಮ ಇದಲ್ಲವೇ? ಇಂಥಾ ಮೈಲಿಗಲ್ಲುಗಳು, ಹಿಂದೀ ಜಾಹೀರಾತುಗಳು, ಹಿಂದೀ ಮನರಂಜನೆಗಳು... ಎಲ್ಲವೂ ಹಿಂದೀಯೇತರರ ಕಣ್ಣಿಗೆ ನಿರಂತರವಾಗಿ ಹಿಂದೀಯನ್ನು ಕಾಣಿಸಲು, ಕಿವಿಗೆ ಕೇಳಿಸಲು... ಮಾಡುತ್ತಿರುವುದಲ್ಲವೇ? ಹೀಗೆ ಮಾಡುವುದರಿಂದ ಯಾರಿಗೆ ಅನುಕೂಲ? ಹಿಂದೀಯೇತರರಲ್ಲಿ ಸಲ್ಲದ ಕೀಳರಿಮೆಗೆ ಇದು ಕಾರಣವಾಗದೇ? ಇದಕ್ಕೆಲ್ಲಾ ಕಾರಣವೇ ಭಾರತ ಒಪ್ಪಿರುವ ಬಾಷಾನೀತಿ! ಬದಲಾಗದಿದ್ದರೆ ಹಿಂದೀಯೇತರ ಭಾಷೆಗಳಿಗೆ, ಭಾಷಾ ಜನಾಂಗಗಳಿಗೆ ಉಳಿಗಾಲವಿದೆಯೇ?

## ಹಿಂದೀಹೇರಿಕೆಯ ಹೀನಾಸ್ತ್ರ! ವಿಷವಾಗುತ್ತಿರುವ ಔಷಧ

ಶತಾಯ ಗತಾಯ ಹಿಂದೀನಾ ಜಾರಿಮಾಡಲು ಪಣ ತೊಟ್ಟಿರುವ ಭಾರತ ಸರ್ಕಾರ ಹಿಂದೀಯೇತರರ ಮೇಲೆ ಬಳಸಿರುವ ಅತಿಹೀನವಾದ ಅಸ್ತ್ರವೆಂದರೆ ಬಹುಶಃ ಇದೇ ಇರಬೇಕು. ಇತ್ತೀಚಿನ ವರ್ಷಗಳಲ್ಲಿ ಕ್ರೋಸಿನ್‌ನಿಂದ ಹಿಡಿದು

ಪ್ರತಿಯೊಂದು ಔಷಧದ ಮೇಲೂ ಹಿಂದೀ ಭಾಷೆಯಲ್ಲಿ ಹೆಸರು, ವಿವರ ಅಚ್ಚುಮಾಡಲು ಶುರುಮಾಡಿದ್ದಾರೆ.




ಇದುವರೆಗೂ ಕೂಡಾ ಇದು ಕನ್ನಡದಲ್ಲೇನು ಇರಲಿಲ್ಲ, ಆಗ ಇಂಗ್ಲೀಶಲ್ಲಿ ಇರುತ್ತಿತ್ತು, ಈಗ ಅದರ ಜೊತೆಯಲ್ಲಿ ಹಿಂದೀಲಿ ಬರೆದರೆ ಏನು ತಪ್ಪು? ಎಂದು ಅನ್ನಿಸುವ ಹಂತಕ್ಕೆ ಈಗಾಗಲೇ ನಮ್ಮಲ್ಲಿ ಕೀಳರಿಮೆಯನ್ನು ಬೇರೂರಿಸಲಾಗಿದೆ ಬಿಡಿ. ಆದರೂ ಒಮ್ಮೆ ಯೋಚಿಸಿ ನೋಡಿ. ನಾವು ಬಳಸುವ ಪ್ರತಿಯೊಂದು ವಸ್ತುವಿನ ಬಗ್ಗೆ, ಅದರಲ್ಲಿ ಇರುವುದೇನು? ಹೇಗೆ ಬಳಸಬೇಕು? ಯಾವ ಎಚ್ಚರಿಕೆ ತೆಗೆದುಕೊಳ್ಳಬೇಕು? ಎಂಬೆಲ್ಲಾ ವಿಷಯಗಳ ಬಗ್ಗೆ ಗ್ರಾಹಕರಾಗಿ ತಿಳಿದುಕೊಳ್ಳುವ ಹಕ್ಕು ನಮಗಿಲ್ಲವೇ? ನಮಗಿಂತಾ ಕಡಿಮೆ ಜನಸಂಖ್ಯೆಯ ನಾಡುಗಳಲ್ಲಿ ಅವರವರ ನುಡಿಯಲ್ಲಿಯೇ ಔಷಧಗಳ ವಿವರ ಸಿಗುತ್ತಿರುವುದನ್ನು ನಾವು ನೆನಪಿಸಿಕೊಳ್ಳೋಣ. ಆಗ ಇಂಥಾ ನಿರೀಕ್ಷೆ ಎಷ್ಟು ಸರಿಯಾಗಿದೆ ಎನ್ನುವುದು ಮನವರಿಕೆಯಾಗುತ್ತದೆ.

## ಹಿಂದೀ ದಿನಾಚರಣೆ ಎಂಬ ಆಮಿಶದ ಹಬ್ಬ

ಸೆಪ್ಟೆಂಬರ್ ೧೪, ೧೯೪೯ರಂದು ಹಿಂದೀ ಬಾಷೆಗೆ ಭಾರತದ ಆಡಳಿತ ಭಾಷೆಯ ಸ್ಥಾನಮಾನ ನೀಡಬೇಕೆಂದು ತೀರ್ಮಾನವಾದ ದಿನ. ಹಾಗಾಗಿ ಪ್ರತಿವರ್ಷ

ಸೆಪ್ಟೆಂಬರ್ ಹದಿನಾಲ್ಕನ್ನು ಭಾರತದ ಎಲ್ಲಾ ಕೇಂದ್ರಸರ್ಕಾರಿ ಕಛೇರಿಗಳಲ್ಲಿ "ಹಿಂದೀ ದಿನ"ವನ್ನಾಗಿ ಆಚರಿಸಲಾಗುತ್ತದೆ.

ಈ ಕಾರ್ಯಕ್ರಮದ ಸಲುವಾಗಿ ಪ್ರತಿಯೊಂದು ಕಛೇರಿಯಲ್ಲೂ ನಾನಾ ಬಗೆಯ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ಕೊಡುತ್ತಾರೆ. ಆಡಳಿತದಲ್ಲಿ ಬಳಸುವ ಇಂಗ್ಲೀಶ್ ಪದಗಳಿಗೆ ಹಿಂದೀ ಪದಗಳನ್ನು ಬರೆಯುವ, ಹಿಂದೀ ಸಿನಿಮಾ ಹಾಡು, ಹಿಂದೀ ಹಾಡುಗಳ ಅಂತ್ಯಾಕ್ಷರಿ, ಹಿಂದೀ ಹಾಡಿಗೆ ನೃತ್ಯ, ಹಿಂದೀ ಪ್ರಹಸನ/ ನಾಟಕ, ಹಿಂದೀ ಪ್ರಬಂಧ ಸ್ಪರ್ಧೆಯೇ ಮುಂತಾದವುಗಳನ್ನು ಏರ್ಪಡಿಸಲಾಗುತ್ತದೆ. ಈ ಸ್ಪರ್ಧೆಗಳಲ್ಲಿ ಸಂಸ್ಥೆಯ ಉದ್ಯೋಗಿಗಳು ಮಾತ್ರವಲ್ಲದೆ ಅವರ ಮಕ್ಕಳೂ ಪಾಲ್ಗೊಳ್ಳಬಹುದಾಗಿದೆ. ಹಿಂದೀ ಪಂಡಿತರನ್ನು ಕರೆಸಿ ಒಂದು ಭಾಷಣ ಏರ್ಪಡಿಸಿ ಹಿಂದೀ ಭಾಷೆ, ರಾಷ್ಟ್ರಪ್ರೇಮ ಮುಂತಾದ ಉದಾತ್ತ ವಿಷಯಗಳನ್ನು ಮಾತಾಡಿಸಿ ಕೇಳುಗರ ಮನದಲ್ಲಿ ಹಿಂದೀಯ ಪಾವಿತ್ರ್ಯವನ್ನು ಹೆಚ್ಚಿಸುವ ಕೆಲಸ ಮಾಡಿಸುತ್ತಾರೆ. ಗೆದ್ದವರಿಗಷ್ಟೇ ಅಲ್ಲದೆ ಭಾಗವಹಿಸಿದವರಿಗೆಲ್ಲಾ ನೂರಾರು ರೂಪಾಯಿಗಳ ಬಹುಮಾನವನ್ನು ಕೊಡುತ್ತಾರೆ. ಒಟ್ಟಿನಲ್ಲಿ ಹಿಂದೀ ದೇವಿಯ ಪ್ರತಿಷ್ಠಾಪನೆ ಮನಮನಗಳಲ್ಲಿ ಆಗಬೇಕು ಅಷ್ಟೆ.

ಹಿಂದೀ ದಿನಾಚರಣೆಯು ಇತ್ತೀಚಿಗೆ ಹಿಂದೀ ವಾರವಾಗಿಯೂ, ಹಿಂದೀ ಪಕ್ಷವಾಗಿಯೂ ಆಚರಣೆಯಾಗುತ್ತಿದೆ. ಕಛೇರಿಯಲ್ಲಿನ ನೌಕರರಿಗೆ ಹೆಚ್ಚು ಹೆಚ್ಚು ಹಿಂದೀ ಬಳಕೆ ಮಾಡಲು ಪ್ರೇರೇಪಿಸುವ ಉದ್ದೇಶವನ್ನು ಈ ಆಚರಣೆಗಳು ಹೊಂದಿವೆ.

ಇದರ ಪರಿಣಾಮವಾದರೂ ಏನು ಯೋಚಿಸಬಲ್ಲಿರಾ? ಸಂಸ್ಥೆಯ ನೌಕರರಲ್ಲಿ ಹಿಂದೀ ಕಲಿಯುವ ಉತ್ಸಾಹ, ಸ್ಪರ್ಧೆಗಾಗಿ ಹಿಂದೀ ಹಾಡುಗಳನ್ನು ಕೇಳುವ ಉತ್ಸಾಹ, ಅಷ್ಟೇ ಅಲ್ಲದೆ ಮನೆಯ ಎಳೆಯ ಕಂದಮ್ಮಗಳಿಗೂ ಹಿಂದೀ ಕಲಿತರೆ ಬಹುಮಾನ ಸಿಗುತ್ತದೆಂಬ ಪಾಠ... ಇಷ್ಟು ಸಾಲದೇ, ಹಿಂದೀ ಭಾಷೆಯ ನಿರಂತರ ಪ್ರಸಾರವನ್ನು ಆಮಿಶದ ಮೂಲಕ ಹೇಗೆ ಮಾಡಲಾಗುತ್ತದೆ ಎಂಬುದನ್ನು ತಿಳಿಯಲು.

## ಹಿಂದೀ ಒಪ್ಪುವುದರಿಂದ ಆಗುವ ಕೆಟ್ಟ ಪರಿಣಾಮಗಳು

ಹಿಂದೀ ಭಾಷೆಯನ್ನು ಒಪ್ಪುವುದರಿಂದ ಏನಾಗುತ್ತದೆ ಎನ್ನುವ ಪ್ರಶ್ನೆಗೆ ಇಡೀ ಹೊತ್ತಗೆಯ ತುಂಬಾ ಇರುವ ಒಂದೊಂದೂ ಪುಟವೂ ಉತ್ತರ ನೀಡುತ್ತಿದೆ. ಹಿಂದೀ ಭಾಷೆಯನ್ನು ಹರಡಲು ಕೋಟ್ಯಾಂತರ ರೂಪಾಯಿಗಳ ಹಣವನ್ನು ಪ್ರತಿವರ್ಷ ಖರ್ಚು ಮಾಡುತ್ತಿರುವ ಕೇಂದ್ರಸರ್ಕಾರ ತನ್ನೆಲ್ಲಾ ಕೃತ್ಯಕ್ಕೂ ಭಾರತದ ಸಂವಿಧಾನದತ್ತ ಬೊಟ್ಟು ಮಾಡುತ್ತದೆ. ಸಂವಿಧಾನ, ಕಾಯ್ದೆ ಕಾನೂನು, ಅಧಿಕಾರ, ವ್ಯವಸ್ಥೆಯೆಲ್ಲವನ್ನೂ ಸಂಪೂರ್ಣವಾಗಿ ಬಳಸಿಯೂ ಹಿಂದೀ ನಮ್ಮ ನಾಡಿನಲ್ಲಿನ್ನೂ ಸಾರ್ವಭೌಮತ್ವ ಸಾಧಿಸಲು ಆಗಿಲ್ಲ ಎಂದು ನಿಟ್ಟುಸಿರು ಬಿಡುವಂತಿಲ್ಲ. ನಾವು ಹಿಂದೀ ಸಾರ್ವಭೌಮತ್ವವನ್ನು ಒಪ್ಪುವವರೆಗೂ ಒತ್ತಾಯ, ಆಮಿಶ, ವಿಶ್ವಾಸದ ಪ್ರಯೋಗಗಳು ಆಗುತ್ತಲೇ ಇರುತ್ತವೆ.

ಇದರ ಪರಿಣಾಮವಾಗಿ ಮುಂದಿನ ದಿನಗಳಲ್ಲಿ ನಮ್ಮೂರಿನ ಎಲ್ಲಾ ವ್ಯವಸ್ಥೆಗಳಲ್ಲಿ ಮೊದಲಿಗೆ ಕನ್ನಡ, ಇಂಗ್ಲೀಶುಗಳ ಜೊತೆಯಲ್ಲಿ ಜಾಗ ಮಾಡಿಕೊಳ್ಳುವ ಹಿಂದೀ ನಂತರದ ದಿನಗಳಲ್ಲಿ ಉಳಿದವನ್ನು ಬದಿಗೆ ದೂಡುತ್ತದೆ. ನಮ್ಮ ನಾಡಿಗೆ ಹಿಂದೀ ಭಾಷಿಕರ ತಡೆಯಿರದ ವಲಸೆಯಾಗಿ ಮುಂದೊಮ್ಮೆ ಇಲ್ಲಿ ಕನ್ನಡಿಗರೇ ಅಲ್ಪಸಂಖ್ಯಾತರಾಗುತ್ತಾರೆ. ವಲಸಿಗನ ಧರ್ಮವೆನ್ನುವುದು ಈ ನಾಡಿನಲ್ಲಿ ಇನ್ನೂ ಉಸಿರಾಡುತ್ತಿಲ್ಲವಾದ್ದರಿಂದ ವಲಸಿಗ ಹಿಂದೀ ಭಾಷೆಯಲ್ಲಿ ಸೇವೆ ಪಡೆದುಕೊಳ್ಳುವುದು ತನ್ನ ಹಕ್ಕೆನ್ನಲಿದ್ದಾನೆ. ಇದನ್ನು ನಾವೀಗಾಗಲೇ ಮುಂಬೈ ವಿಷಯದಲ್ಲಿ ನೋಡಬಹುದು. ಮುಂಬೈ ನಗರಪಾಲಿಕೆಯು ಹಿಂದೀಯಲ್ಲಿ ಕೆಲಸ ಮಾಡಬೇಕೆಂಬ ಬೇಡಿಕೆ ಅಲ್ಲಿನ ವಲಸಿಗರದ್ದು ಎಂಬ ಸುದ್ದಿ ಕೆಲದಿನಗಳ ಹಿಂದೆ ಮಾಧ್ಯಮಗಳಲ್ಲಿ ಬಂದಿತ್ತು. ಇದು ಹೀಗೇ ಆದರೆ ಮುಂದೊಮ್ಮೆ ನಮ್ಮ ನಾಡಿನಲ್ಲೇ ಹಿಂದೀಯಲ್ಲಿ ಸೇವೆ ಕೊಡದಿದ್ದರೆ ಅಪರಾಧವೆನ್ನಲಿದೆ ಕೇಂದ್ರಸರ್ಕಾರ. ಕನ್ನಡ ಜನಾಂಗವೇ ಮೊದಲು ಕೀಳರಿಮೆಯಿಂದ, ನಂತರ ಕೆಲಸದ ಅವಕಾಶಗಳಿಲ್ಲದ್ದರಿಂದ ನಿಧಾನವಾಗಿ ಕುಗ್ಗಿ ಹೋಗಲಿದೆ. ಇದು ಬರೀ ಕನ್ನಡನಾಡಿಗಷ್ಟೇ ಅನ್ವಯವಾಗುವುದಿಲ್ಲ. ಇಡೀ ಭಾರತದಲ್ಲಿ ಹಿಂದೀಯೇತರ ಜನಾಂಗಗಳ ಪಾಡು ಇದೇ ಆಗಲಿದೆ. ಇಂಥಾ ದಿನಗಳು ಬರಬಾರದೆಂದರೆ, ನಾವು ಈಗಲೇ ಎಚ್ಚೆತ್ತುಕೊಳ್ಳಬೇಕಾಗಿದೆ. ಎಲ್ಲಾ ರೀತಿಯ ಹಿಂದೀ ಹೇರಿಕೆಯನ್ನು ವಿರೋಧಿಸೋಣ. ಸರ್ಕಾರಿ, ಖಾಸಗಿ ಅಥವಾ ಇನ್ನಾವ ರೂಪದಲ್ಲೂ ಹಿಂದೀ ಹೇರಿಕೆ ನಡೆಯುವುದನ್ನು ಇಲ್ಲವಾಗಿಸೋಣ. ಭಾರತದಲ್ಲಿ ಎಂತಹ ಭಾಷಾನೀತಿಯಿರಬೇಕೆನ್ನುವುದರತ್ತ ಗಂಭೀರ ಚಿಂತನೆ ನಡೆಸೋಣ. ಅಂತಹ ನೀತಿಯೊಂದು ರೂಪುಗೊಂಡು ಜಾರಿಯಾಗುವತ್ತ ಶ್ರಮಿಸೋಣ.

# ಅಧ್ಯಾಯ – ೪

# ಪ್ರಪಂಚದ ಇತರೆಡೆಗಳಲ್ಲಿ...

ಭಾರತದ ಭಾಷಾನೀತಿ ಮತ್ತು ಅದರಿಂದಾಗುತ್ತಿರುವ ಪರಿಣಾಮಗಳನ್ನು ನೋಡಿದ ಮೇಲೆ ಭಾರತದಂತಹ ಬಹುಭಾಷಾ ಜನಾಂಗಗಳ ದೇಶದಲ್ಲಿ ಇನ್ನೆಂತಹ ಭಾಷಾನೀತಿ ಇರಬೇಕಿತ್ತು ಎನ್ನಿಸದಿರದು. ಇದಕ್ಕೂ ಮುನ್ನ ವಿಶ್ವದ ಇತರೆಡೆ ಎಂತಹ ಭಾಷಾನೀತಿಗಳಿವೆ? ವಿಶ್ವಸಂಸ್ಥೆಯು ಈ ಬಗ್ಗೆ ಏನನ್ನುತ್ತದೆ ನೋಡಿ ನಂತರ ಭಾರತಕ್ಕೊಪ್ಪೋ ಭಾಷಾನೀತಿ ಹೇಗಿದ್ದರೆ ಚೆನ್ನ ಎಂದು ನೋಡೋಣ.

# ವಿಶ್ವಸಂಸ್ಥೆಯ ಭಾಷಾನೀತಿ

**ವಿಶ್ವಸಂಸ್ಥೆಯು ಭಾಷೆಗೆ ನೀಡಿರುವ ಮಹತ್ವ**

ವಿಶ್ವಸಂಸ್ಥೆಯು ವಿಶೇಷವಾಗಿ ಗಮನ ಹರಿಸಿರುವ ಕ್ಷೇತ್ರಗಳಲ್ಲಿ ಪ್ರಮುಖವಾದ ಒಂದು ಕ್ಷೇತ್ರ ಮಾನವ ಹಕ್ಕುಗಳು. ಇದರೊಳಗೇ ಭಾಷಾ ಸಮುದಾಯದ ಹಕ್ಕುಗಳನ್ನು ಅಡಕಗೊಳಿಸಿದ್ದಾರೆ. ಇದರ ಮೂಲ ಉದ್ದೇಶ ಪ್ರಪಂಚದ ಎಲ್ಲಾ ಭಾಷಿಕ ಸಮುದಾಯಗಳೂ ಕೂಡಾ ಉಳಿಯಬೇಕು. ಪ್ರತಿಯೊಂದು ಸಮುದಾಯವೂ ಕೂಡಾ ಮನುಕುಲದ ಪ್ರಗತಿಯಲ್ಲಿ ತಾನೂ ಭಾಗವಾಗಿರುವುದರ ಜೊತೆಯಲ್ಲೇ, ಇದಕ್ಕಾಗಿ ಕೊಡುಗೆ ನೀಡುತ್ತಾ ತನ್ನನ್ನು ತೊಡಗಿಸಿಕೊಳ್ಳಬೇಕು. ಇಂತಹ ಪಾಲುದಾರಿಕೆ ಸಾಧ್ಯವಾಗುವುದು ಪ್ರತಿಯೊಂದು ಸಮುದಾಯದ ಭಾಷೆ ಉಳಿದಾಗ, ಬೆಳೆದಾಗ ಮಾತ್ರಾ. ಕೆಲವು ಸಮುದಾಯಗಳ ಭಾಷೆಗಳು ಹಲವಾರು ಕಾರಣಗಳಿಂದಾಗಿ ಇಂದು ಆತಂಕ ಎದುರಿಸುತ್ತಿದೆ. ಹಾಗಾಗಿ ಇಂತಹ ಆತಂಕಗಳನ್ನು ನಿವಾರಿಸುವ ನಿಟ್ಟಿನಲ್ಲಿ, ಒಟ್ಟಾರೆ ಮನುಕುಲದ ಅಭಿವೃದ್ಧಿಯ ದೃಷ್ಟಿಯಿಂದ ಈ ಭಾಷಾಹಕ್ಕುಗಳನ್ನು ಗುರುತಿಸಿ ಘೋಷಿಸಲಾಗಿದೆ. ಇದು ಇಡೀ ಜಗತ್ತಿಗೆ ಅನ್ವಯಿಸುವಂತದ್ದು.

ಭಾರತದೇಶದಲ್ಲಿ ಇದೀಗ ಅನುಸರಿಸಲಾಗುತ್ತಿರುವ ಭಾಷಾನೀತಿಯು, ಹೇಗೆ ಇಂತಹ ಒಂದು ಸದುದ್ದೇಶಕ್ಕೆ ವಿರುದ್ಧವಾಗಿದೆ ಎಂಬುದನ್ನು ತಿಳಿದುಕೊಳ್ಳೋಣ. ವಿಶ್ವಸಂಸ್ಥೆಯ ಅಂಗ ಸಂಸ್ಥೆಗಳಲ್ಲೊಂದಾದ UNESCO, ಜಗತ್ತಿನ ಭಾಷಾ

ಸಮುದಾಯಗಳ ಕುರಿತು ಹೊರಡಿಸಿರೋ ಬಾರ್ಸಿಲೋನಾ ಭಾಷಾಹಕ್ಕುಗಳ ಘೋಷಣೆಯಲ್ಲಿ ಪ್ರತಿಯೊಂದು ಭಾಷಾ ಸಮುದಾಯದ ಹಕ್ಕುಗಳ ಬಗ್ಗೆ ಹೀಗೆ ಹೇಳಿದೆ :

**ಭಾಷಾಹಕ್ಕು ಘೋಷಣೆಯ ಉದ್ದೇಶ**

ಯುನೆಸ್ಕೋ ಹೊರತಂದಿರುವ ಈ **ಭಾಷಾಹಕ್ಕುಗಳು: ಬಾರ್ಸಿಲೋನಾ ಘೋಷಣೆ**ಯ ಉದ್ದೇಶ ಇಂತಿದೆ :

ಸ್ವಯಂ ಆಡಳಿತದ ಕೊರತೆ, ಜನಸಂಖ್ಯೆಯ ಕೊರತೆ, ಸಮುದಾಯದ ಕೆಲ ಭಾಗ ಅಥವಾ ಇಡೀ ಸಮುದಾಯವೇ ಚದರಿ ಹೋಗಿರುವುದು, ಬಲಹೀನ ಆರ್ಥಿಕಮಟ್ಟ, ಸುಧಾರಿಸಿಲ್ಲದ ಭಾಷಾಮಟ್ಟ, ಬಲಶಾಲಿ ಸಮೂಹದ ನಂಬಿಕೆ/ ಸಂಸ್ಕೃತಿಗಳಿಗೆ ಮುಖಾಮುಖಿಯಾಗಿರುವಿಕೆಗಳು ಒಂದು ಭಾಷಾ ಸಮುದಾಯದ ಉಳಿವಿಗೆ ಎದುರಾಗಿರುವ ಆತಂಕಗಳಾಗಿದ್ದು ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಆಯಾಮಗಳ ಗುರಿಗಳನ್ನು ಪರಿಗಣನೆಗೆ ತೆಗೆದುಕೊಳ್ಳದೆ ಸವಾಲುಗಳನ್ನೆದುರಿಸುವುದು ಅಸಾಧ್ಯವೆನ್ನುವ ಪರಿಸ್ಥಿತಿ ಉಂಟಾಗಿದೆ.

ರಾಜಕೀಯ ಗುರಿಗಳು : ಏಳಿಗೆಯ ದಿಕ್ಕಿನೆಡೆಗಿನ ಪ್ರಗತಿಯ ಪಯಣದಲ್ಲಿ ಎಲ್ಲಾ ಸಮುದಾಯಗಳೂ ಒಂದಾಗಿ ಸಾಗಲು ಪೂರಕವಾಗುವಂತಹ, ಭಾಷಾ ವೈವಿಧ್ಯಗೆ ಧಕ್ಕೆ ತರದಂತಹ ವ್ಯವಸ್ಥೆಯನ್ನು ರೂಪಿಸುವುದು.

ಸಾಂಸ್ಕೃತಿಕ ಗುರಿಗಳು : ಪ್ರಗತಿಯ ಹಾದಿಯಲ್ಲಿ ಜಗತ್ತಿನಾದ್ಯಂತ ಸಂಪರ್ಕ ಸಂವಹನ ಸಾಧಿಸಲು ಪೂರಕವಾಗಿರುವ, ಪ್ರತಿಯೊಂದು ಭಾಷಾ ಸಮುದಾಯವೂ, ವ್ಯಕ್ತಿಯೂ, ಜನಗಳೂ ಪಾಲುಗೊಳ್ಳಲು ಅನುಕೂಲಕರವಾದ ವ್ಯವಸ್ಥೆಯನ್ನು ರೂಪಿಸುವುದು.

ಆರ್ಥಿಕ ಗುರಿಗಳು : ಪ್ರಗತಿಗೆ ಪೂರಕವಾಗುವಂತಹ, ಎಲ್ಲಾ ಭಾಷಿಕ ಸಮುದಾಯಗಳ ಸರ್ವತೋಮುಖ ಏಳಿಗೆಗೆ, ಪರಿಸರಕ್ಕೆ, ಸಂಸ್ಕೃತಿಗೆ ಪೂರಕವಾಗುವಂತೆ ಪ್ರತಿಯೊಂದು ಭಾಷಾಸಮೂಹವೂ ತೊಡಗಿಸಿಕೊಳ್ಳಲು ಸಾಧ್ಯವಾಗುವಂತಹ ಮಾದರಿಯನ್ನು ರೂಪಿಸುವುದು.

ಈ ಮೂರು ಗುರಿಗಳ ಕಾರಣದಿಂದಾಗಿ ಇಲ್ಲಿ ಯಾವೊಂದು ರಾಷ್ಟ್ರವನ್ನಾಗಲೀ, ರಾಜಕೀಯ ಸಾರ್ವಭೌಮತ್ವವನ್ನಾಗಲೀ ಮಾನದಂಡವಾಗಿ ಪರಿಗಣಿಸದೆ ಭಾಷಿಕ ಸಮುದಾಯವನ್ನು ಪರಿಗಣಿಸಿ, ಸಮುದಾಯಗಳ ಭಾಷಿಕ ಹಕ್ಕಿನ ಬಗ್ಗೆ ಪ್ರತಿಪಾದಿಸಲಾಗಿದೆ. ಇಡೀ ಮನುಕುಲ ತನ್ನ ಭಾಷಾವೈವಿಧ್ಯತೆ ಮತ್ತು ಸಾಂಸ್ಕೃತಿಕ ವೈವಿಧ್ಯತೆಗಳನ್ನು ಉಳಿಸಿಕೊಂಡು ಸೌಹಾರ್ದಯುತವಾದ ಸಹಬಾಳ್ವೆಯನ್ನು ನಡೆಸುತ್ತಾ, ಇಡೀ ಮನುಕುಲವು ಏಳಿಗೆಯತ್ತ ಸಾಗಲು ಇದು ಅತ್ಯಗತ್ಯವೆಂದು ಭಾವಿಸಲಾಗಿದೆ.

**ಇದರಲ್ಲಿರೋ ಮಹತ್ವದ ಅಂಶಗಳು**

ವೈಯುಕ್ತಿಕ ಮಟ್ಟದಲ್ಲಿ ವ್ಯಕ್ತಿಯೊಬ್ಬನಿಗೆ ತನ್ನತನವನ್ನು ಉಳಿಸಿಕೊಳ್ಳಲು ಇರುವ ಹಕ್ಕಿನ ಬಗ್ಗೆ ತಿಳಿಸುತ್ತಾ, ತಾನಿರುವ ನೆಲದ ಮುಖ್ಯವಾಹಿನಿಗೆ ಪೂರಕವಾಗಿರಬೇಕೆಂಬ ಸಣ್ಣ ಎಚ್ಚರಿಕೆಯನ್ನೂ ಇದು ನೀಡುತ್ತದೆ. ಇದರೊಟ್ಟಿಗೆ ಒಂದು ಭಾಷಾ ಸಮುದಾಯಕ್ಕೆ ತನ್ನದೇ ನೆಲದಲ್ಲಿ ಇರುವ ಹಕ್ಕುಗಳ ಬಗ್ಗೆ ತಿಳಿಸಲಾಗಿದೆ. ಅಂದರೆ ಕರ್ನಾಟಕದಲ್ಲಿ ಕನ್ನಡಿಗರಿಗೆ ಕನ್ನಡವನ್ನು ಎಷ್ಟರಮಟ್ಟಿಗೆ ಬಳಸುವ ಹಕ್ಕು ಇದೆ ಎಂಬುದನ್ನು ಇದು ತಿಳಿಸಿಕೊಡುತ್ತದೆ. ಇಡೀ ವರದಿಯು ಇಂಗ್ಲೀಶ್ ಭಾಷೆಯಲ್ಲಿ ಅಂತರ್ಜಾಲದಲ್ಲಿರುವ
(http://www.unesco.org/cpp/uk/declarations/linguistic.pdf)
ಕೊಂಡಿಯಲ್ಲಿ ಸಿಗುತ್ತದೆ. ಈ ವರದಿಯ ಪ್ರಮುಖವಾದ ಕೆಲವು ಮಾಹಿತಿಗಳನ್ನು ಈ ಕೆಳಗೆ ಕೊಡಲಾಗಿದೆ.

ಪರಿಚ್ಛೇದ ೮.೨ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನುಡಿಯನ್ನು ಮುಂದಿನ ಪೀಳಿಗೆಗೆ ದಾಟಿಸಲು ಬೇಕಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳುವ ಹಕ್ಕು ಇರುತ್ತದೆ.

ಪರಿಚ್ಛೇದ ೧೧ : ಎಲ್ಲಾ ಭಾಷಾ ಸಮುದಾಯಗಳಿಗೂ ಈ ಘೋಷಣೆಯ ಪ್ರತಿಯೊಂದು ಹಕ್ಕನ್ನೂ ಸಾಧಿಸಿಕೊಳ್ಳುವ ಅಧಿಕಾರವಿರುತ್ತದೆ.

ಪರಿಚ್ಛೇದ ೧೪ : ಈ ಹಕ್ಕುಗಳನ್ನು ತನ್ನ ವ್ಯಾಪ್ತಿಯ ಪ್ರದೇಶದಲ್ಲಿನ ನುಡಿಯ ಸ್ವಾಭಾವಿಕವಾದ ಹಕ್ಕುಗಳಿಗೆ ಧಕ್ಕೆ ತರುವಂತೆ ಅರ್ಥೈಸಲಾಗದು. (ಎಂದರೆ

ಕರ್ನಾಟಕದಲ್ಲಿ ಕನ್ನಡಕ್ಕೆ ಕುತ್ತಾಗುವಂತೆ ಈ ಹಕ್ಕುಗಳನ್ನು ಇತರೆ ಭಾಷೆಗೆ ಅನ್ವಯಿಸಿ ಅರ್ಥೈಸಿಕೊಳ್ಳಲು ಬಾರದು.)

ಪರಿಚ್ಛೇದ ೧೬ : ಎಲ್ಲಾ ಭಾಷಿಕ ಸಮುದಾಯಕ್ಕೂ ತನ್ನ ಪರಿಧಿಯೊಳಗಿನ ಎಲ್ಲಾ ಸ್ಥಳೀಯ ಹಾಗೂ ಕೇಂದ್ರಗಳ ಸಾರ್ವಜನಿಕ ಕಛೇರಿಯಲ್ಲಿ ತನ್ನದೇ ನುಡಿಯಲ್ಲಿ ಸೇವೆಯನ್ನು ಪಡೆಯುವ ಹಕ್ಕಿರುತ್ತದೆ.

ಪರಿಚ್ಛೇದ ೧೮ : ಎಲ್ಲಾ ಭಾಷಾ ಸಮುದಾಯಗಳಿಗೂ ತಮ್ಮದೇ ನುಡಿಯಲ್ಲಿ ನೆಲದ ಕಾನೂನು, ನೀತಿ ನಿಯಮಗಳನ್ನು ಆಯಾಪ್ರದೇಶದ ಭಾಷೆಯಲ್ಲೇ ದೊರಕಿಸಿಕೊಡಬೇಕು.

ಪರಿಚ್ಛೇದ ೨೨ : ಎಲ್ಲಾ ಭಾಷಾ ಸಮುದಾಯಗಳಿಗೆ ಪ್ರಮಾಣ ಪತ್ರಗಳನ್ನು ನೋಟರಿಯಿಂದಾಗಲೀ, ಇನ್ಯಾವುದೇ ಅಧಿಕೃತ ಸಂಸ್ಥೆಗಳಿಂದ ಪಡೆಯುವಾಗಲಾಗಲೀ, ಆಯಾ ಪ್ರದೇಶದ ಭಾಷೆಯಲ್ಲಿ ಪಡೆಯುವ ಹಕ್ಕಿರುತ್ತದೆ. ಇದನ್ನು ಮಾನ್ಯ ಮಾಡದೇ ಇರುವ ಹಾಗಿಲ್ಲ.

ಪರಿಚ್ಛೇದ ೨೪ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನಾಡಿನ ಕಲಿಕೆಯ ವ್ಯವಸ್ಥೆಯಲ್ಲಿ ಯಾವ ಹಂತದವರೆಗೂ ತಾಯ್ನುಡಿಯಿರಬೇಕೆಂದು ನಿರ್ಣಯಿಸುವ ಹಕ್ಕಿರುತ್ತದೆ.

ಪರಿಚ್ಛೇದ ೨೮ : ತನ್ನ ನೆಲದ ಇತಿಹಾಸ, ಸಂಸ್ಕೃತಿಗಳನ್ನು ಕಲಿಕೆಯಲ್ಲಿ ತಮಗೆ ಬೇಕಾದ ಪ್ರಮಾಣದಲ್ಲಿ ಅಳವಡಿಸುವ ಹಕ್ಕು ಪ್ರತಿಯೊಂದು ಭಾಷಾ ಸಮೂಹಕ್ಕೂ ಇರುತ್ತದೆ.

ಪರಿಚ್ಛೇದ ೩೨ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನೆಲದ, ಊರಿನ, ಜಾಗದ ಹೆಸರನ್ನು ತನಗೆ ಬೇಕಾದಂತೆ ಉಚ್ಚರಿಸುವ, ಬಳಸುವ ಹಾಗೂ ಬದಲಾಯಿಸುವ ಅಧಿಕಾರವಿರುತ್ತದೆ.

ಪರಿಚ್ಛೇದ ೩೫ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನೆಲದಲ್ಲಿನ ಮಾಧ್ಯಮಗಳಲ್ಲಿ ಆ ನೆಲದ ಭಾಷೆ ಯಾವ ಪ್ರಮಾಣದಲ್ಲಿರಬೇಕು ಎಂದು ನಿರ್ಣಯಿಸಿಕೊಳ್ಳುವ ಹಕ್ಕಿರುತ್ತದೆ.

ಪರಿಚ್ಛೇದ ೪೫ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನೆಲದಲ್ಲಿ ಗ್ರಂಥಾಲಯ, ಚಲನಚಿತ್ರ, ರಂಗಭೂಮಿ, ಮ್ಯೂಸಿಯಂಗಳೂ ಸೇರಿದಂತೆ ಎಲ್ಲಾ ತೆರನಾದ ಸಾಂಸ್ಕೃತಿಕ ಪ್ರಾಕಾರಗಳಲ್ಲಿ ಆ ನೆಲದ ಭಾಷೆಗಿರಬೇಕಾದ ಪ್ರಮುಖವಾದ ಸ್ಥಾನವನ್ನು (ಸಾರ್ವಭೌಮತ್ವವನ್ನು) ಕಾಪಾಡಿಕೊಳ್ಳುವ ಹಕ್ಕಿರುತ್ತದೆ.

ಪರಿಚ್ಛೇದ ೪೮.೧ : ಪ್ರತಿಯೊಂದು ಭಾಷಾ ಸಮುದಾಯಕ್ಕೂ ತನ್ನ ನೆಲದಲ್ಲಿ, ತನ್ನ ನುಡಿಯಲ್ಲೇ ಎಲ್ಲಾ ತೆರನಾದ ಗ್ರಾಹಕಸೇವೆಯನ್ನು ಪಡೆಯುವ ಹಕ್ಕಿರುತ್ತದೆ. ಬ್ಯಾಂಕಿಂಗ್, ವಿಮೆ, ಸರಕು, ಸಾಮಾನು ಸರಂಜಾಮುಗಳು ಇತ್ಯಾದಿ ಎಲ್ಲವನ್ನೂ ಆ ಪ್ರದೇಶದ ಭಾಷೆಯಲ್ಲಿ ಪಡೆದುಕೊಳ್ಳುವ ಹಕ್ಕಿರುತ್ತದೆ.

ಪರಿಚ್ಛೇದ ೪೮.೨ : ಯಾವುದೇ ಸಂಸ್ಥೆ ಆಂತರಿಕವಾಗಿ ಹೊಂದಿರುವ ಅಥವಾ ಹೊಂದಿಲ್ಲದ, ಯಾವುದೇ ಕಾನೂನು ಈ ಚೌಕಟ್ಟನ್ನು ಮೀರಲಾಗುವುದಿಲ್ಲ.

ಪರಿಚ್ಛೇದ ೫೧ : ಪ್ರತಿಯೊಂದು ಭಾಷಿಕ ಸಮುದಾಯಕ್ಕೂ ತನ್ನ ನೆಲದಲ್ಲಿನ ಎಲ್ಲಾ ವ್ಯಾಪಾರಿ ವಹಿವಾಟಿನ ಜಾಹೀರಾತುಗಳು, ಸೈನ್‌ಬೋರ್ಡುಗಳು ಇತ್ಯಾದಿಗಳಲ್ಲಿ ಆ ನೆಲದ ಭಾಷೆಗೆ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವ ಹಕ್ಕಿರುತ್ತದೆ.

ಎಷ್ಟೊಂದು ವಿಸ್ತಾರವಾಗಿ ನಮ್ಮ ಹಕ್ಕುಗಳ ಬಗ್ಗೆ **UNESCO** ತಿಳಿಸಿಕೊಟ್ಟಿದೆ. ವಿಶ್ವಸಂಸ್ಥೆಯು ಎಲ್ಲಾ ದೇಶಗಳಿಗೂ ಅನ್ವಯವಾಗುವಂತೆ, ಭಾಷಾ ಸಮುದಾಯಗಳ ಹಕ್ಕಿಗೆ ಸಂಬಂಧಿಸಿದಂತೆ ಘೋಷಣೆ ಹೊರಡಿಸಿದೆಯಲ್ಲವೇ? ಆದರೆ ಭಾರತದೇಶವು ತನ್ನ ನೆಲದಲ್ಲಿ ಎಂತಹ ಭಾಷಾನೀತಿಯನ್ನು ಅಳವಡಿಸಿಕೊಂಡಿದೆ? ಭಾರತದ ಸಂವಿಧಾನ, ಸಂಸತ್ತು, ಆಡಳಿತ ವ್ಯವಸ್ಥೆ ಈ ನಾಡಿನಲ್ಲಿರುವ ಭಾಷಾ ವೈವಿಧ್ಯತೆಯನ್ನು ಉಳಿಸಿಕೊಳ್ಳಲು ಅಗತ್ಯವಿರುವ ನಿಯಮಾವಳಿಗಳನ್ನು ಹೊಂದಿವೆಯೇ? ಬಹುಭಾಷಿಕ ಭಾರತದ ವೈವಿಧ್ಯತೆಯನ್ನು,

ಭಾರತದೇಶವು ಶಾಪವೆಂದು ಪರಿಗಣಿಸಿದೆಯೇ? ಎಂದು ನೋಡಿದರೆ ನಿರಾಶೆಯಾಗುತ್ತದೆ.

ಬಾರ್ಸಿಲೋನಾ ಘೋಷಣೆಯಂತೆ ಕನ್ನಡನಾಡಿನಲ್ಲಿ ಎಷ್ಟನೇ ತರಗತಿಯವರೆಗೆ ಕನ್ನಡ ಮಾಧ್ಯಮವಿರಬೇಕು ಎಂದು ತೀರ್ಮಾನಿಸುವ ಹಕ್ಕು ನಮಗಿದೆ. ನಮ್ಮ ನೆಲದಲ್ಲಿ ಇರುವ ರೈಲು, ಬಸ್ಸು, ವಿಮಾನ ನಿಲ್ದಾಣಗಳಲ್ಲಿ, ಅಂಗಡಿ ಮುಂಗಟ್ಟು ಮಾಲುಗಳಲ್ಲಿ, ಆಸ್ಪತ್ರೆ, ಹೋಟೆಲ್‌ಗಳಲ್ಲಿ ಕನ್ನಡದಲ್ಲಿ ಸೇವೆ ಪಡೆಯುವ ಹಕ್ಕು ನಮಗಿದೆ. ನಮ್ಮ ನಾಡಿನಲ್ಲಿ ಪರಭಾಷಾ ಚಿತ್ರಗಳು ನಮಗೆ ಬೇಕಾದಷ್ಟೇ ಬಿಟ್ಟುಕೊಳ್ಳಬಹುದಾಗಿದೆ. ನಮ್ಮ ನೆಲದಲ್ಲಿನ ಎಫ್.ಎಂ ವಾಹಿನಿಗಳಲ್ಲಿ ಕನ್ನಡದ ಹಾಡುಗಳನ್ನಷ್ಟೇ ಪ್ರಸಾರ ಮಾಡುವಂತೆ, ಜಾಹೀರಾತುಗಳಲ್ಲಿ ನಾಮಫಲಕಗಳಲ್ಲಿ ಕನ್ನಡವೇ ಇರುವಂತೆ ಒತ್ತಾಯಿಸುವುದು ನಮ್ಮ ಹಕ್ಕಾಗಿದೆ. ಆದರೆ ಯಾವುದೆಲ್ಲಾ ಇಲ್ಲಿ ಸಹಜವಾಗಿ ಆಗಿರಬೇಕಾಗಿತ್ತೋ, ಅದೆಲ್ಲಕ್ಕೂ ನಾವು ಹೋರಾಡಬೇಕಾದ ದುಃಸ್ಥಿತಿಯಿದೆ. ಪರಭಾಷಾ ಸಿನಿಮಾಗಳ ಮೇಲೆ ನಿಯಂತ್ರಣವಿಲ್ಲ, ಎಫ್.ಎಂಗಳು ಏನು ಪ್ರಸಾರ ಮಾಡಬೇಕು ಎನ್ನುವುದರ ಬಗ್ಗೆ ನಿಯಂತ್ರಣವಿಲ್ಲ. ವಿಮಾನ ನಿಲ್ದಾಣದಲ್ಲಿ ಕನ್ನಡದಲ್ಲಿ ಘೋಷಣೆಗಳು, ಬೋರ್ಡುಗಳು ಇರಬೇಕು ಎನ್ನುವಂತಿಲ್ಲ, ಕನ್ನಡ ಮಾಧ್ಯಮ ಕಡ್ಡಾಯ ಮಾಡುವಂತಿಲ್ಲ (ಕಡ್ಡಾಯ ಕನ್ನಡ ಕಲಿಕಾ ಮಾಧ್ಯಮದ ಚರ್ಚೆಯೇ ಭಿನ್ನವಾದ್ದರಿಂದ ಅದು ಸರಿಯಾ ತಪ್ಪಾ ಅನ್ನುವುದು ಇಲ್ಲಿನ ಮಾತಲ್ಲ!). ಇವು ಏನನ್ನೇ ಮಾಡಿದರೂ ವಿಶ್ವಸಂಸ್ಥೆಯ ಭಾಷಾ ಹಕ್ಕು ಘೋಷಣೆಗೆ ಮೀರಿ ಭಾರತದ ಸಂವಿಧಾನ, ನೆಲದ ಕಾನೂನುಗಳಿಗೆ ಬದ್ಧರಾಗಿ ಇವೆಲ್ಲಾ ಆಗಿಲ್ಲದಿರುವಿಕೆಯನ್ನು ಒಪ್ಪಬೇಕಾದ ಪರಿಸ್ಥಿತಿ ನಮ್ಮಲ್ಲಿದೆ. ಈ ಎಲ್ಲಾ ಹಕ್ಕುಗಳು ಭಾರತದ ಎಲ್ಲಾ ಭಾಷಿಕ ಸಮುದಾಯಗಳಿಗೆ ದಕ್ಕಬೇಕಾದರೆ ಇಂದಿನ ಭಾರತದ ಭಾಷಾನೀತಿ ಬದಲಾಗಲೇ ಬೇಕಾಗಿದೆ.

(4) The names of the Central Government offices, the staff whereof have acquired a working knowledge of Hindi, shall be notified in the Official Gazette:

Provided that the Central Government may if it is of opinion that the percentage of the staff working in a notified office and having a working knowledge of Hindi has gone below the percentage specified in sub-rule (2) from any date, it may, by notification in the Official Gazette, declare that the said office shall cease to be a notified office from that date.

11. Manuals, Codes, other procedural literature, articles of Stationery, etc.-

(1) All manuals, codes and other procedural literature relating to Central Government offices shall be printed or cyclostyled, as the case may be, and published both in Hindi and English in diglot form.

(2) The forms and headings of registers used in any Central Government office shall be in Hindi and in English.

(3) All name-plates, sign-boards, letter-heads and inscriptions on envelopes and other items of stationery written, printed or inscribed for use in any Central Government office, shall be in Hindi and in English:

Provided that the Central Government may, if it is considered necessary to do by general or special order

exempt any Central Government office from all or any of the provisions of this rule.

12. Responsibility for compliance-

(1) It shall be the responsibility of the administrative head of each Central Government office-

(i) to ensure that the provisions of the Act and these rules and directions issued under 545-rule 2 are properly complied with ; and

(ii) to devise suitable and effective check-point for this purpose.

(2) The Central Government may from time to time issue such directions to its employees and offices as may be necessary for the due compliance of the provisions of the Act and these rules.

# [TO BE PUBLISHED IN THE GAZETTE OF INDIA, PART-II, SECTION 3, SUB-SECTION (i) ]

Government of India

Ministry of Home Affairs

Department of Official Language

***

New Delhi, Date:   August, 2007

**NOTIFICATION**

G. S. R. __________ In exercise of the powers conferred by section 8, read with sub-section (4) of section 3 of the Official Languages Act, 1963 (19 of 1963) , the Central Government hereby make the following rules further to amend the Official Languages (Use for Official Purposes of the Union) Rules, 1976, namely:-

1. (1) These rules may be called the Official Languages (Use for Official Purposes of the Union) Amendment Rules, 2007.

(2) They shall come into force on the date of their publication in the Official Gazette.

2. In the Official Languages (Use for Official Purposes of the Union) Rules 1976, for clause (f) of rule 2, the following clause shall be substituted, namely:-

> (f) "Region A" means the States of Bihar, Chhattisgarh, Haryana, Himachal Pradesh, Jharkhand, Madhya Pradesh, Rajasthan, Uttar Pradesh, Uttrakhand and National Capital Territory of Delhi, and the Union Territory of Andaman and Nicobar Islands;'

(File No. I/14034/02/2007-O.L. (Policy-1)

(P.V. Valsala G. Kutty)
JOINT SECRETARY TO THE GOVERNMENT OF INDIA

Note: The principal rules were published in the Gazette of India vide number G.S.R. 1052, dated the 17th July, 1976 and subsequently were amended vide number G.S.R. 790, dated the 24th October, 1987.

# OFFICIAL LANGUAGE POLICY OF THE UNION

Hindi in Devanagari script is the official language of the Union . The form of numerals to be used for official purposes of the Union is the international form of Indian numerals {}.In addition to Hindi language English language may also be used for official purposes.

Business in Parliament may be transacted in English or in Hindi. However, the Hon'ble Chairman of the Rajya Sabha or the Hon'ble Speaker of the Lok Sabha may permit any Member to address the House in his / her mother tongue under special circumstances.

The purposes for which Hindi alone is to be used, the purposes for which both Hindi and English are to be used and the purposes for

which English language is to be used, have been specified in the , the  and the directions issued under them from time to time by the Department of Official Language, Ministry of Home Affairs.

**It has been the policy of the Government of India that progressive use of Hindi in the official work may be ensured through persuasion, incentive and goodwill.**

# ಅನುಬಂಧ – ೨

## ಭಾರತದ ಆಡಳಿತ ಭಾಷಾ ಇಲಾಖೆಯ ಸಂಸತ್ ಸಮಿತಿಯ ವರದಿ

(ಪ್ರಮುಖವಾದ ವಿಷಯಗಳ ಕನ್ನಡ ಅನುವಾದ)

**ಸೂಚನೆ:** ಈ ಅಧ್ಯಾಯದಲ್ಲಿ www.rajbhasha.nicನಲ್ಲಿರುವ ಪಿಡಿಎಫ಼್ ಕಡತಗಳನ್ನು ಅನುವಾದಿಸಿ ಕೊಡಲಾಗಿದೆ. ಇದು ಕೇವಲ ನಮ್ಮ ತಿಳಿವಿಗೆ ತಕ್ಕಷ್ಟು ಮಾತ್ರವೇ ನಿಖರವಾಗಿದೆ. ಅನೇಕ ಕಾನೂನಿನ ಪಾರಿಭಾಷಿಕ ಪದಗಳು ನಮ್ಮ ಅಳವಿಗೆ ಮೀರಿಯೂ ಇದ್ದಿರಬಹುದಾದ ಸಾಧ್ಯತೆಯಿದ್ದು ಅಧಿಕೃತ ಮಾಹಿತಿಗೆ ಅಂತರ್ಜಾಲತಾಣದಲ್ಲಿರುವ ಮೂಲಪ್ರತಿಯನ್ನು ಮಾತ್ರಾ ಬಳಸತಕ್ಕದ್ದು.

# ಭಾರತ ಸಂವಿಧಾನದ ಪುಟಗಳಲ್ಲಿ ಭಾಷಾನೀತಿ

## ಭಾಗ XVII : ಆಡಳಿತ ಭಾಷೆ

ಭಾರತ ಸಂವಿಧಾನದ **XVII**ನೇ ಭಾಗದ ೧ನೇ ಅಧ್ಯಾಯದಲ್ಲಿ ೩೪೩ನೇ ವಿಧಿಯಿಂದ ೩೫೧ನೇ ವಿಧಿಯವರೆಗೆ ಭಾರತದ ಆಡಳಿತ ಭಾಷೆಯ ಬಗ್ಗೆ ಬರೆಯಲಾಗಿದೆ. ಅದರ ಕನ್ನಡ ಅನುವಾದ ಇಂತಿದೆ:

### ಅಧ್ಯಾಯ ೧: ಒಕ್ಕೂಟದ ಭಾಷೆ

**ಭಾರತ ಸಂವಿಧಾನ : ಭಾಗ XVII : ಅಧ್ಯಾಯ ೧: ವಿಧಿ ೩೪೩**

೧. ದೇವನಾಗರಿ ಲಿಪಿಯಲ್ಲಿ ಬರೆಯಲಾಗುವ ಹಿಂದೀಭಾಷೆಯು ಭಾರತ ಒಕ್ಕೂಟದ ಆಡಳಿತ ಭಾಷೆಯಾಗಿರತಕ್ಕದ್ದು. ಆಡಳಿತದ ಉದ್ದೇಶಕ್ಕಾಗಿ ಬಳಸುವ ಅಂಕೆಗಳು ಭಾರತೀಯ ಅಂಕೆಗಳ ಅಂತರ್‌ರಾಷ್ಟ್ರೀಯ ರೂಪವಾಗಿರತಕ್ಕದ್ದು.

೨. ಅಧಿನಿಯಮ (೧)ರಲ್ಲಿ ಹೇಳಿದ್ದನ್ನು ಹೊರತು ಪಡಿಸಿ, ಸಂವಿಧಾನ ಅಸ್ತಿತ್ವಕ್ಕೆ ಬಂದ ಹದಿನೈದು ವರ್ಷಗಳ ತನಕ ಭಾರತದ ಆಡಳಿತದ ಉದ್ದೇಶಕ್ಕಾಗಿ ಇಂಗ್ಲೀಶನ್ನು ಸಂವಿಧಾನ ಜಾರಿಯಾಗುವ ಮುನ್ನ ಯಾವ ಉದ್ದೇಶಗಳಿಗಾಗಿ ಉಪಯೋಗಿಸಲಾಗುತ್ತಿತ್ತೋ ಆ ಉದ್ದೇಶಗಳಿಗಾಗಿ ಬಳಸುವುದನ್ನು ಮುಂದುವರಿಸತಕ್ಕದ್ದು: ಮೇಲೆ ತಿಳಿಸಿದ ಅವಧಿಯಲ್ಲಿ ಇಂಗ್ಲೀಶಿನ ಜೊತೆ ಹಿಂದೀ ಭಾಷೆಯನ್ನು ಹಾಗೂ ಅಂತರ್‌ರಾಷ್ಟ್ರೀಯ ಮಟ್ಟದ ಭಾರತೀಯ ಅಂಕೆಗಳ ಜೊತೆ ದೇವನಾಗರಿ ಲಿಪಿಯ ಅಂಕೆಗಳನ್ನು ಯಾವುದೇ ಆಡಳಿತದ ಉದ್ದೇಶಕ್ಕಾಗಿ ಬಳಸಲು ರಾಷ್ಟ್ರಪತಿಗಳು ಅದೇಶ ನೀಡಬಹುದು.

೩. ಅಧಿನಿಯಮ (೧)ರಲ್ಲಿ ಹೇಳಿದ್ದನ್ನು ಹೊರತುಪಡಿಸಿ, ಹದಿನೈದು ವರ್ಷಗಳ ಬಳಿಕ ಸಂಸತ್ತು ಕಾಯ್ದೆಯ ಮೂಲಕ ಕೆಳಗೆ ಹೇಳಿರುವುದನ್ನು ಉಪಯೋಗಕ್ಕೆ ತರಬಹುದು: ಇಂಗ್ಲೀಶ್ ಭಾಷೆ ಅಥವಾ ದೇವನಾಗರಿ ಲಿಪಿಯಲ್ಲಿ ಇರುವ ಅಂಕೆಗಳನ್ನು ಕಾಯ್ದೆಯಲ್ಲಿ ಉಲ್ಲೇಖಿಸಿದ ಉದ್ದೇಶಗಳಿಗಾಗಿ.

## ಭಾರತ ಸಂವಿಧಾನ : ಭಾಗ XVII : ಅಧ್ಯಾಯ ೧: ವಿಧಿ ೩೪೪

೧. ಸಂವಿಧಾನ ಅಸ್ತಿತ್ವಕ್ಕೆ ಬಂದ ಐದು ವರ್ಷಗಳ ನಂತರ ಹಾಗೂ ಈ ಸಮಿತಿ ಅಸ್ತಿತ್ವಕ್ಕೆ ಬಂದ ಪ್ರತಿ ಹತ್ತು ವರ್ಷಗಳಿಗೊಮ್ಮೆ ರಾಷ್ಟ್ರಪತಿಗಳ ಆದೇಶಾನುಸಾರ ಸಮಿತಿಯೊಂದನ್ನು ರಚಿಸತಕ್ಕದ್ದು. ರಾಷ್ಟ್ರಪತಿಗಳ ಆದೇಶಾನುಸಾರ ಈ ಸಮಿತಿಯು ಒಬ್ಬ ಅಧ್ಯಕ್ಷರು ಹಾಗೂ ಎಂಟನೇ ಪರಿಚ್ಛೇದದಲ್ಲಿ ನಮೂದಿಸಲಾಗಿರುವ ವಿವಿಧ ಭಾಷೆಗಳನ್ನು ಪ್ರತಿನಿಧಿಸುವ ಸದಸ್ಯರನ್ನು ಹೊಂದಿರತಕ್ಕದ್ದು. ಹಾಗೂ ಈ ಆದೇಶದಲ್ಲಿ ಸಮಿತಿಯು ಮಾಡಬೇಕಾಗಿರುವ ಕೆಲಸಗಳನ್ನು ವಿವರಿಸತಕ್ಕದ್ದು.

೨. ಈ ಕೆಳಗೆ ತಿಳಿಸಲಾಗಿರುವ ಅಂಶಗಳ ಬಗ್ಗೆ ರಾಷ್ಟ್ರಪತಿಗಳಿಗೆ ಶಿಫಾರಸ್ಸನ್ನು ನೀಡುವುದು ಈ ಸಮಿತಿಯ ಕರ್ತವ್ಯವಾಗಿರುತ್ತದೆ –

ಎ. ಭಾರತದಲ್ಲಿ ಆಡಳಿತ ಉದ್ದೇಶಕ್ಕಾಗಿ ಹಿಂದೀ ಭಾಷೆಯ ಬಳಕೆಯ ನಿರಂತರವಾಗಿ ಹೆಚ್ಚಿಸಿಕೊಂಡು ಹೋಗುವ ಬಗ್ಗೆ

ಬಿ. ಭಾರತದ ಆಡಳಿತದ ಕೆಲವು ಅಥವಾ ಎಲ್ಲಾ ಉದ್ದೇಶಗಳಿಗಾಗಿ ಇಂಗ್ಲೀಶ್ ಭಾಷೆಯು ಬಳಕೆಯಾಗುತ್ತಿರುವ ಪ್ರಮಾಣಕ್ಕೆ ಹಾಕಬೇಕಾದ ಕಡಿವಾಣಗಳು.

ಸಿ. ೩೪೮ನೇ ವಿಧಿಯಲ್ಲಿ ನಮೂಸಿರುವಂತೆ ಎಲ್ಲಾ/ ಯಾವುದೇ ಉದ್ದೇಶಗಳಿಗೆ ಬಳಸಬೇಕಾದ ಭಾಷೆಯ ಬಗ್ಗೆ

ಡಿ. ಒಕ್ಕೂಟದ ಯಾವುದೇ ಒಂದು ಅಥವಾ ಹೆಚ್ಚು ಘೋಷಿತ ಉದ್ದೇಶಗಳಲ್ಲಿ ಬಳಸಬೇಕಾದ ಅಂಕೆಗಳ ಬಗ್ಗೆ

ಇ. ಭಾರತದ ಆಡಳಿತ ಭಾಷೆಗೆ ಸಂಬಂಧಿಸಿದಂತೆ ಕೇಂದ್ರ ಮತ್ತು ರಾಜ್ಯಗಳ, ರಾಜ್ಯ ರಾಜ್ಯಗಳ ನಡುವಿನ ಸಂವಹನಕ್ಕಾಗಿ ಉಪಯೋಗಿಸುವ ಭಾಷೆಗಳನ್ನು ಕುರಿತು ರಾಷ್ಟ್ರಪತಿಗಳು ಸಮಿತಿಗೆ ವಹಿಸುವ ಇನ್ನಾವುದೇ ವಿಷಯಗಳ ಬಗ್ಗೆ.

೩. ಸಮಿತಿಯು ಅಧಿನಿಯಮ (೨)ರ ಅಡಿಯಲ್ಲಿ ಶಿಫಾರಸ್ಸುಗಳನ್ನು ನೀಡುವಾಗ ಈ ಕೆಳಗಿನ ವಿಷಯಗಳನ್ನು ಗಣನೆಗೆ ತಗೆದುಕೊಳ್ಳಬೇಕು: ಭಾರತದ ಕೈಗಾರಿಕಾ, ಸಾಂಸ್ಕೃತಿಕ ಹಾಗೂ ವೈಜ್ಞಾನಿಕ ಬೆಳವಣಿಗೆ ಮತ್ತು ನ್ಯಾಯವಾದ ಹಕ್ಕುಗಳು ಹಾಗೂ ಸಾರ್ವಜನಿಕ ಸೇವೆಯಲ್ಲಿ ಹಿಂದೀಯೇತರ ಭಾಷಿಕ ಪ್ರದೇಶದಲ್ಲಿರುವ ಜನರ ಹಿತಾಸಕ್ತಿ.

೪. ೩೦ ಜನರಿರುವ ಸಮಿತಿಯೊಂದನ್ನು ರಚಿಸತಕ್ಕದ್ದು, ಇದರಲ್ಲಿ ೨೦ ಮಂದಿ ಲೋಕಸಭೆಯಿಂದ ಆಯ್ಕೆಯಾದ ಲೋಕಸಭಾ ಸದಸ್ಯರುಗಳೂ, ೧೦ ಮಂಡಿ ರಾಜ್ಯಸಭೆಯಿಂದ ಆಯ್ಕೆಯಾದ ರಾಜ್ಯಸಭಾ ಸದಸ್ಯರೂ ಇರತಕ್ಕದ್ದು. ಇವರು ಅನುಪಾತ ಆಧಾರಿತ ಪ್ರತಿನಿಧಿ ವ್ಯವಸ್ಥೆಯಂತೆ ವರ್ಗಾಯಿಸಬಲ್ಲ ಮತದ ಪದ್ದತಿಯಲ್ಲಿ ಸಮಿತಿಗೆ ಆಯ್ಕೆಯಾಗಿರತಕ್ಕದ್ದು.

೫. ಅಧಿನಿಯಮ (೧)ರ ಅಡಿಯಲ್ಲಿ ರಚಿಸಲಾಗಿರುವ ಆಯೋಗದ ಶಿಫಾರಸ್ಸುಗಳನ್ನು ಪರೀಶೀಲಿಸತಕ್ಕದ್ದು ಹಾಗೂ ಅದರ ಬಗ್ಗೆ ರಾಷ್ಟ್ರಪತಿಗಳಿಗೆ ತಮ್ಮ ಅಭಿಪ್ರಾಯವನ್ನು ವರದಿ ಮಾಡತಕ್ಕದ್ದು.

೬. ೩೪೩ನೇ ವಿಧಿಯಲ್ಲಿರುವ ವಿಷಯವಲ್ಲದೆ ಬೇರಾವುದೇ ವಿಷಯಕ್ಕೆ ಸಂಬಂಧಿಸಿದಂತೆ, ಅಧಿನಿಯಮ (೫)ರ ಅಡಿಯಲ್ಲಿ ಸಲ್ಲಿಸಲಾಗಿರುವ ವರದಿಯನ್ನು ಪರಿಗಣಿಸಿ ರಾಷ್ಟ್ರಪತಿಗಳು ವರದಿಯಲ್ಲಿರುವ ಕೆಲವು ಅಂಶಗಳು ಅಥವಾ ಸಂಪೂರ್ಣ ವರದಿಯ ಆಧಾರದ ಮೇರೆಗೆ ನಿರ್ದೇಶನಗಳನ್ನು ನೀಡಬಹುದು. ರಾಜ್ಯದ ಶಾಸಕಾಂಗವು ಒಪ್ಪಿಕೊಳ್ಳುವ ತನಕ ಅಥವಾ ಕಾನೂನಿನಲ್ಲಿ ಸೂಚಿತವಾಗುತ ತನಕ ಸಂವಿಧಾನವು ಜಾರಿಯಾವುದಕ್ಕಿಂತ ಮುಂಚೆ ಯಾವ ಆಡಳಿತ ಉದ್ದೇಶದ ಕೆಲಸಗಳಿಗಾಗಿ ಇಂಗ್ಲೀಶ್ ಭಾಷೆಯನ್ನು ಉಪಯೋಗಿಸಲಾಗುತ್ತಿತ್ತೋ ಅದನ್ನು ಮುಂದುವರೆಸಿಕೊಂಡು ಹೋಗತಕ್ಕದ್ದು.

## ಅಧ್ಯಾಯ ೨: ಪ್ರಾದೇಶಿಕ ಭಾಷೆಗಳು

### ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೨: ವಿಧಿ ೩೪೫

೩೪೬ ಹಾಗೂ ೩೪೭ನೇ ಅಧಿನಿಯಮಗಳಿಗೆ ಒಳಪಟ್ಟಂತೆ ಯಾವುದೇ ರಾಜ್ಯದ ವಿಧಾನಸಭೆಯು ಕಾನೂನಿನ ಮೂಲಕ, ರಾಜ್ಯದಲ್ಲಿ ಬಳಕೆಯಲ್ಲಿರುವ ಯಾವುದೇ ಒಂದು ಅಥವಾ ಹೆಚ್ಚು ಭಾಷೆಗಳನ್ನೂ ಅಥವಾ ಹಿಂದೀಯನ್ನು ರಾಜ್ಯದ ಆಡಳಿತ ಭಾಷೆಯಾಗಿ ಘೋಷಿಸಬಹುದು ಅಥವಾ ಹಿಂದೀಯನ್ನೂ ಸಹ ಒಂದು ಆಡಳಿತ ಭಾಷೆಯನ್ನಾಗಿ ಅಳವಡಿಸಿಕೊಳ್ಳಬಹುದು:

ರಾಜ್ಯದ ಶಾಸಕಾಂಗವು ಒಪ್ಪಿಕೊಳ್ಳುವ ತನಕ ಅಥವಾ ಕಾನೂನಿನಲ್ಲಿ ಸೂಚಿತವಾಗುತ ತನಕ ಸಂವಿಧಾನವು ಜಾರಿಯಾವುದಕ್ಕಿಂತ ಮುಂಚೆ ಯಾವ ಆಡಳಿತ ಉದ್ದೇಶದ ಕೆಲಸಗಳಿಗಾಗಿ ಇಂಗ್ಲೀಶ್ ಭಾಷೆಯನ್ನು ಉಪಯೋಗಿಸಲಾಗುತ್ತಿತ್ತೋ ಅದನ್ನು ಮುಂದುವರೆಸಿಕೊಂಡು ಹೋಗತಕ್ಕದ್ದು.

### ಭಾರತ ಸಂವಿಧಾನ : ಭಾಗ XVII : ಅಧ್ಯಾಯ ೨: ವಿಧಿ ೩೪೬

ಸದ್ಯದ ಮಟ್ಟಿಗೆ ಕೇಂದ್ರದಲ್ಲಿ ಆಡಳಿತ ಉದ್ದೇಶಕ್ಕಾಗಿ ಉಪಯೋಗಿಸಲಾಗುತ್ತಿರುವ ಭಾಷೆಯನ್ನು, ರಾಜ್ಯ ರಾಜ್ಯಗಳ ನಡುವೆ ಹಾಗೂ ಕೇಂದ್ರ ಮತ್ತು ರಾಜ್ಯಗಳ ನಡುವೆ ಸಂವಹನಕ್ಕಾಗಿ ಉಪಯೋಗಿಸತಕ್ಕದ್ದು:

ಆದರೆ ಇದಕ್ಕೆ ಎರಡಕ್ಕಿಂತ ಹೆಚ್ಚು ರಾಜ್ಯಗಳು ಹಿಂದೀಯನ್ನು ರಾಜ್ಯಗಳ ನಡುವಿನ ಸಂವಾದಕ್ಕೆ ಆಡಳಿತ ಭಾಷೆಯನ್ನಾಗಿ ಉಪಯೋಗಿಸಲು ಒಪ್ಪಿಕೊಳ್ಳುವುದಾದರೆ ಆ ಭಾಷೆಯನ್ನು ಸಂಪರ್ಕ ಭಾಷೆಯನ್ನಾಗಿ ಉಪಯೋಗಿಸಬಹುದು.

**ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೨: ವಿಧಿ ೩೪೭**

ಒಂದು ವೇಳೆ ಒಂದೇ ಭಾಷೆಯನ್ನು ಮಾತನಾಡುವ ದೊಡ್ಡದಾದ ಜನಸಂಖ್ಯೆ ಒಂದು ರಾಜ್ಯದಲ್ಲಿ ಇದ್ದು ಅದನ್ನು ಆಡಳಿತದಲ್ಲಿ ಬಳಕೆಗೆ ತರಬೇಕು ಅಂತ ಅನ್ನಿಸಿದ್ದಲ್ಲಿ, ರಾಷ್ಟ್ರಪತಿಗಳಿಗೆ ಬೇಡಿಕೆಯನ್ನು ಸಲ್ಲಿಸಬಹುದು. ರಾಷ್ಟ್ರಪತಿಗಳಿಗೆ ಅದು ಸರಿ ಅನ್ನಿಸಿದಲ್ಲಿ ಅಂತಹ ಭಾಷೆಯನ್ನು ರಾಜ್ಯಾದ್ಯಂತ ಆಡಳಿತದಲ್ಲಿ ಬಳಕೆ ಮಾಡಲು ಅಥವಾ ನಿರ್ದಿಷ್ಟ ಪ್ರದೇಶದಲ್ಲಿ ಆಡಳಿತದಲ್ಲಿ ಉಪಯೋಗಿಸಲು ನಿರ್ದೇಶಿಸಬಹುದು.

## ಅಧ್ಯಾಯ ೩: ಉಚ್ಚ ಮತ್ತು ಸರ್ವೋಚ್ಚ ನ್ಯಾಯಾಲಯದ ಭಾಷೆ ಮತ್ತು ಮುಂತಾದವು

**ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೩: ವಿಧಿ ೩೪೮**

೧. ಸಂಸತ್ತಿನಲ್ಲಿ ಕಾಯ್ದೆಯ ಮೂಲಕ ಕೆಳಗೆ ಹೇಳಿರುವ ಎಲ್ಲಾ ಅಂಶಗಳು ಇಂಗ್ಲೀಶಿನಲ್ಲಿ ಇರತಕ್ಕದ್ದು.

(a) ಸರ್ವೋಚ್ಚ ನ್ಯಾಯಾಲಯದ ಮತ್ತು ರಾಜ್ಯಗಳ ಉಚ್ಚ ನ್ಯಾಯಲಯಗಳ ನಡಾವಳಿಗಳು

(b) ಈ ಕೆಳಕಂಡ ವಿಷಯಗಳ ಅಧಿಕೃತ ಹೊತ್ತಗೆಗಳು

I. ಸಂಸತ್ತಿನ ಎರಡೂ ಸದನಗಳಲ್ಲಿ ಹಾಗೂ ರಾಜ್ಯದ ಶಾಸಕಾಂಗದಲ್ಲಿ ಮಂಡಿಸಲಾಗುವ ಅಥವಾ ಬದಲಾವಣೆಗೊಳಗಾಗುವ ಮಸೂದೆ.

II. ಸಂಸತ್ತಿನಲ್ಲಿ ಪಾಸಾಗುವ ಎಲ್ಲಾ ಕಾಯ್ದೆಗಳು ಅಥವಾ ರಾಜ್ಯದ ಶಾಸಕಾಂಗ ಪಾಸು ಮಾಡುವ ಕಾಯ್ದೆಗಳು ಮತ್ತು ರಾಷ್ಟ್ರಪತಿಗಳು ಅಥವಾ ರಾಜ್ಯಪಾಲರು ಹೊರಡಿಸುವ ತೀರ್ಮಾನಗಳು.

III. ಈ ಸಂವಿಧಾನದಲ್ಲಿರುವ ಆದೇಶಗಳು, ನಿಯಮಗಳು, ರೆಗ್ಯೂಲೇಟರ್‌ಗಳು ಮತ್ತು ಬೈ–ಲಾಗಳು ಮತ್ತು ಪಾರ್ಲಿಮೆಂಟ್ ಅಥವಾ ರಾಜ್ಯಸರ್ಕಾರಗಳು ಮಾಡುವ ಕಾನೂನುಗಳು

೨. ಈ ನಿಯಮದ ಅನ್ವಯ ಉಚ್ಛ ನ್ಯಾಯಾಲಯ ತೀರ್ಪು, ಡಿಕ್ರೀ ಅಥವಾ ಆದೇಶ ನೀಡಿಲ್ಲದೇ ಇದ್ದ ಪಕ್ಷದಲ್ಲಿ ಅಧಿನಿಯಮ(೧)ರ ಉಪ ಅಧಿನಿಯಮ (ಎ)ನಲ್ಲಿ ಹೇಳಿರುವದನ್ನು ಹೊರತುಪಡಿಸಿ, ರಾಜ್ಯಪಾಲರು, ರಾಷ್ಟ್ರಪತಿಗಳ ಒಪ್ಪಿಗೆ ಪಡೆದು ಹಿಂದೀ ಭಾಷೆ ಬೇರಾವುದೇ ಭಾಷೆಯನ್ನು ರಾಜ್ಯದ ಆಡಳಿತದ ಉದ್ದೇಶಕ್ಕಾಗಿ, ಆ ರಾಜ್ಯದ ಒಳಗೇ ಇರುವ ಉಚ್ಛ ನ್ಯಾಯಾಲಯದ ನಡಾವಳಿಗಳಿಗಾಗಿ ಉಪಯೋಗಿಸಲು ಅಧಿಕಾರವನ್ನು ನೀಡಬಹುದು:

(೩) ಅಧಿನಿಯಮ (೧)ರ ಉಪ ಅಧಿನಿಯಮ (ಬಿ)ನಲ್ಲಿ ಹೇಳಿರುವುದನ್ನು ಹೊರತುಪಡಿಸಿ ಒಂದು ರಾಜ್ಯವು ಇಂಗ್ಲೀಶ್ ಅಲ್ಲದೇ ಬೇರೆ ಭಾಷೆಯನ್ನು ಕೋರ್ಟಿನ ತೀರ್ಪು, ಆದೇಶ, ನಿಯಮಗಳಿಗಾಗಿ ಬಳಸಿದ್ದರೆ ಅಂತಹವುಗಳ ಇಂಗ್ಲೀಶ್ ಭಾಷೆಯ ಅಧಿಕೃತ ತರ್ಜುಮೆಯು ರಾಜ್ಯಪಾಲರ ಅಂಕಿತ ಪಡೆದುಕೊಂಡು ರಾಜ್ಯಪತ್ರದಲ್ಲಿ ಪ್ರಕಟವಾದ ತರ್ಜುಮೆಯದ್ದಾಗಿರುತ್ತದೆ.

**ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೩: ವಿಧಿ ೩೪೯**

ಈ ಭಾರತದ ಸಂವಿಧಾನವು ಜಾರಿಗೊಂಡ ಹದಿನೈದು ವರ್ಷಗಳವರೆಗೆ ೩೪೮ನೇ ವಿಧಿಗೆ ಸಂಬಂಧಿಸಿದಂತೆ ಆಡಳಿತ ಭಾಷೆಗೆ ಸಂಬಂಧಿಸಿದ ಯಾವುದೇ ನೀತಿ ನಿಯಮವನ್ನು ಸಂಸತ್ತಿನ ಯಾವುದೇ ಸದನದಲ್ಲೂ ಮಂಡಿಸುವಂತಿಲ್ಲ. ರಾಷ್ಟ್ರಪತಿಗಳೂ ಕೂಡಾ ೩೪೪ (೧)ನೇ ವಿಧಿಯ ಅನ್ವಯ ರಚಿಸಲಾದ ಸಮಿತಿ ಮತ್ತು ೩೪೪(೩)ನೇ ವಿಧಿಯ ಅನ್ವಯ ಸಲ್ಲಿಸಲಾದ ವರದಿಯನ್ನು ಪರಿಗಣಿಸದ ಹೊರತು ಇದಕ್ಕೆ ಅನುಮತಿ ನೀಡುವಂತಿಲ್ಲ.

## ಅಧ್ಯಾಯ ೪: ವಿಶೇಷ ತಿಳುವಳಿಕೆಗಳು

### ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೪: ವಿಧಿ ೩೫೦

ಯಾವುದೇ ವ್ಯಕ್ತಿಯು ತನಗೆ ಇರುವ ತೊಂದರೆಗಳನ್ನು ಅಧಿಕಾರಿಗಳಿಗೆ ಅಥವಾ ಕೇಂದ್ರಕ್ಕೆ ಅಥವಾ ರಾಜ್ಯಕ್ಕೆ ಸಲ್ಲಿಸಲು ಕೇಂದ್ರದಲ್ಲಿ ಉಪಯೋಗಿಸುವ ಅಥವಾ ರಾಜ್ಯದಲ್ಲಿ ಉಪಯೋಗಿಸಲಾಗುವ ಭಾಷೆಯನ್ನು ಬಳಸಬಹುದು.

### ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೪: ವಿಧಿ ೩೫೦ಎ

ಭಾಷಾ ಅಲ್ಪಸಂಖ್ಯಾತ ಮಕ್ಕಳಿಗೆ ತಮ್ಮ ಮಾತೃಭಾಷೆಯಲ್ಲಿ ಶಿಕ್ಷಣ ನೀಡಲು ಸರ್ಕಾರ ಹಾಗೂ ಅದಕ್ಕೆ ಸಂಬಂಧಪಟ್ಟ ಸ್ಥಳಿಯ ಆಡಳಿತವು ಎಲ್ಲಾ ನೆರವನ್ನು ನೀಡಬೇಕು ಮತ್ತು ರಾಷ್ಟ್ರಪತಿಗಳಿಗೆ ಅವಶ್ಯಕವೆನ್ನಿಸಿದಲ್ಲಿ ರಾಜ್ಯಕ್ಕೆ ಈ ವಿಷಯವಾಗಿ ನಿರ್ದೇಶನಗಳನ್ನು ನೀಡಬಹುದು.

### ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೪: ವಿಧಿ ೩೫೦ಬಿ

(೧) ಭಾಷಾ ಅಲ್ಪಸಂಖ್ಯಾತರಿಗಾಗಿ ವಿಶೇಷ ಅಧಿಕಾರಿಯನ್ನು ರಾಷ್ಟ್ರಪತಿಗಳು ನೇಮಿಸತಕ್ಕದ್ದು.

(೨) ವಿಶೇಷ ಅಧಿಕಾರಿಯ ಮುಖ್ಯಕರ್ತವ್ಯವು ಸಂವಿಧಾನದ ಅಡಿಯಲ್ಲಿ ಭಾಷಾ ಅಲ್ಪಸಂಖ್ಯಾತರ ಹಿತರಕ್ಷಣೆ ಮಾಡುವುದೇ ಆಗಿದೆ ಹಾಗೂ ರಾಷ್ಟ್ರಪತಿಗಳ ನಿರ್ದೇಶನದಂತೆ ಅವರಿಗೆ ವರದಿಯನ್ನು ಸಲ್ಲಿಸುವುದು ಮತ್ತು ರಾಷ್ಟ್ರಪತಿಗಳು ಇಂತಹ ವರದಿಗಳನ್ನು ಸಂಸತ್ತಿನ ಎರಡು ಸದನಗಳ ಮುಂದಿಡುವಂತೆ ಮಾಡತಕ್ಕದ್ದು ಹಾಗೂ ಸಂಬಂಧಿಸಿದ ರಾಜ್ಯಕ್ಕೆ ವರದಿಯನ್ನು ಕಳಿಸತಕ್ಕದ್ದು.

**ಭಾರತ ಸಂವಿಧಾನ : ಭಾಗ XVII: ಅಧ್ಯಾಯ ೪: ವಿಧಿ ೩೫೧**

ಭಾರತದ ಸಮ್ಮಿಶ್ರ ಸಂಸ್ಕೃತಿಯ ಎಲ್ಲಾ ಆಯಾಮಗಳನ್ನು ವ್ಯಕ್ತಪಡಿಸುವ ಒಂದು ಮಾಧ್ಯಮವಾಗಲು ಅನುಕೂಲವಾಗುವಂತೆ ಹಿಂದೀಭಾಷೆಯು ಬೆಳವಣಿಗೆ ಹೊಂದಲು ಮತ್ತು ತನ್ನ ಶ್ರೀಮಂತಿಕೆಯನ್ನು ಕಾಯ್ದುಕೊಳ್ಳಲು ಅನುವಾಗುವಂತೆ ಹಿಂದೀಭಾಷೆಯನ್ನು ದೇಶದ ಎಲ್ಲೆಡೆ ಹರಡುವುದು ಭಾರತ ಸರ್ಕಾರದ ಕರ್ತವ್ಯವಾಗಿದೆ. ಈ ಬೆಳವಣಿಗೆಯು ಭಾರತದ ಬಹುಸಂಸ್ಕೃತಿಯನ್ನು ತನ್ನ ಹಿರಿಮೆ, ರೂಪ ಮತ್ತು ಅಭಿವ್ಯಕ್ತಿಗಳ ಸೊಗಡನ್ನು ಹಿಂದೂಸ್ಥಾನಿಯಲ್ಲಿದ್ದಂತೆ ಕಾಪಾಡಿಕೊಂಡು ಮೈಗೂಡಿಸಿಕೊಳ್ಳುವಂತಿರಬೇಕು ಮತ್ತು ಎಂಟನೇ ಪರಿಚ್ಛೇದದಲ್ಲಿ ಹೇಳಿರುವ ಭಾಷೆಗಳಲ್ಲಿನ ಸ್ವರೂಪಕ್ಕೂ ಧಕ್ಕೆಯಾಗದಂತೆಯೂ ಇರತಕ್ಕದ್ದು. ತನ್ನ ಶಬ್ದಸಂಪತ್ತನ್ನು ಹೆಚ್ಚಿಸಿಕೊಳ್ಳಲು ಮೊದಲನೆಯದಾಗಿ ಸಂಸ್ಕೃತವನ್ನು ಹಾಗೂ ನಂತರ ಇತರೇ ಭಾಷೆಗಳನ್ನು ಬಳಸಿಕೊಳ್ಳಬಹುದು.

## ೧. ಸಂಸತ್ ಸಮಿತಿಯ ವರದಿಯ ಮುನ್ನುಡಿ

ಆಡಳಿತ ಭಾಷೆಯ ಕುರಿತು ಸಂಸತ್ ಸಮಿತಿಯ ರಚನೆ, ಹಿನ್ನೆಲೆ, ಅದರ ಸದಸ್ಯತ್ವ ಹಾಗೂ ಕಾರ್ಯಚಟುವಟಿಕೆಗಳು.

**ಪರಿಚಯ**

ಸಂಸ್ಕೃತವನ್ನು ಭಾರತದ ಎಲ್ಲಾ ಭಾಷೆಗಳಿಗೆ ತಾಯಿ ಭಾಷೆ ಎನ್ನುವ ಅಸತ್ಯದೊಂದಿಗೆ ಹಿಂದೀಯನ್ನು ಭಾರತದ ರಾಷ್ಟ್ರಭಾಷೆಯನ್ನಾಗಿ ಮಾಡಬೇಕಿತ್ತು ಎಂದ ರಾಷ್ಟ್ರನಾಯಕರ ಹೇಳಿಕೆಗಳನ್ನು ಉದ್ಧರಿಸಿ ಹಿಂದೀಯನ್ನು ಯಾವ ಯಾವ ಕಾರಣಕ್ಕೆ ಒಪ್ಪಬೇಕೆಂದು ಒಂದೊಂದೇ ಪೊಳ್ಳುಗಳನ್ನು ಪರಿಚಯದಲ್ಲಿ ಪೀಠಿಕೆಯಾಗಿ ಹೇಳಲಾಗಿದೆ. ಎಲ್ಲಾ ಭಾಷೆ ಉಳಿಯಬೇಕು, ಆದರೆ ಎಲ್ಲರೂ ಹಿಂದೀ ಬಳಸಬೇಕೆನ್ನುವ ವೈರುಧ್ಯದ ನಿಲುವನ್ನು ಇದರಲ್ಲಿ ವ್ಯಕ್ತಪಡಿಸಲಾಗಿದೆ.

**ಹಿಂದೀಯ ಬಗ್ಗೆ ಹಿರಿಯರ ದೃಷ್ಟಿಕೋನ**

ಇದರಲ್ಲಿ ಹಿಂದೀ ಭಾಷೆಯ ಹಿರಿಮೆ ಎನ್ನುತ್ತಾ ಹಿಂದೀಯನ್ನು ಉಘೇ ಉಘೇ ಎಂದು ಮೇಲೆತ್ತಿ ಯಾವ್ಯಾವ ರಾಷ್ಟ್ರನಾಯಕರುಗಳು ಹಿಂದೀ

ರಾಷ್ಟ್ರಭಾಷೆಯಾಗಬೇಕೆಂದು ಬಯಸಿದ್ದರು ಎಂದು ವಿವರಿಸಲಾಗಿದೆ. ರಾಷ್ಟ್ರನಾಯಕರೆಂದು ಒಪ್ಪಿದ ಹಿರಿಯರೇ ಹೇಳಿದ್ದಾರೆ ಎಂದ ಮೇಲೆ ಇಡೀ ದೇಶ ಹಿಂದೀಯನ್ನು ಒಪ್ಪಿಕೊಳ್ಳಬೇಕೆಂಬುದು ಇದರ ಸಾರಾಂಶವಾಗಿದೆ.

**ಸಂವಿಧಾನದಲ್ಲಿ ಆಡಳಿತ ಭಾಷೆಗಾಗಿ ಇರುವ ನಿಯಮಗಳು**

೧.೩ ಪ್ರಜಾಪ್ರತಿನಿಧಿ ಸಭೆಯು (Constituent Assembly) ಮುನ್ಶಿ–ಅಯ್ಯಂಗಾರ್ ಸೂತ್ರದ ಪ್ರಕಾರ ೧೪ನೇ ಸೆಪ್ಟಂಬರ್ ೧೯೪೯ರಲ್ಲಿ ದೇವನಾಗರಿ ಲಿಪಿಯಲ್ಲಿ ಬರೆಯಲಾಗುವ ಹಿಂದೀಯನ್ನು ಭಾರತದ ಆಡಳಿತ ಭಾಷೆಯಂದು ಅಂಗೀಕರಿಸಿತು. ಅಂತರ್‌ರಾಷ್ಟ್ರೀಯವಾಗಿ ಬಳಕೆಯಲ್ಲಿರುವ ಭಾರತೀಯ ಅಂಕಿಗಳನ್ನು ಒಪ್ಪಿಕೊಳ್ಳಲಾಯಿತು. ಸಭಾಧ್ಯಕ್ಷರು "ಇಂದು ನಾವು ಮೊದಲ ಬಾರಿಗೆ, ಸಂವಿಧಾನದಲ್ಲಿ ಒಂದು ಭಾಷೆಯನ್ನು ಭಾರತ ಒಕ್ಕೂಟ ರಾಷ್ಟ್ರದ ಆಡಳಿತ ಭಾಷೆಯನ್ನಾಗಿ ಒಪ್ಪಿಕೊಳ್ಳುತ್ತಿದ್ದೇವೆ" ಎಂದು ಹೇಳಿದರು.

೧.೪ ಭಾರತೀಯ ಸಂವಿಧಾನದಲ್ಲಿ ೧೨೦(ಭಾಗ–೫), ೨೧೦(ಭಾಗ–೬), ೩೪೩, ೩೪೪ ಹಾಗೂ ೩೪೮ ರಿಂದ ೩೫೧ರವರೆಗಿನ ವಿಧಿಗಳಲ್ಲಿ ಭಾರತದ ಭಾಷಾನೀತಿಯನ್ನು ಸಂಪೂರ್ಣವಾಗಿ ವಿವರಿಸಲಾಗಿದೆ. ಸಂವಿಧಾನದ ೧೭ನೇ ಭಾಗದಲ್ಲಿನ ೩೪೩ರಿಂದ ೩೫೧ನೇ ವಿಧಿಯವರೆಗೆ ಕೇಂದ್ರ ಮತ್ತು ರಾಜ್ಯಗಳ ನಡುವಿನ ಆಡಳಿತ ಭಾಷೆಗಳ ಬಗ್ಗೆ ವಿವರಿಸಲಾಗಿದೆ. ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಸ್ವೀಕರಿಸುವ ಸಂದರ್ಭದಲ್ಲಿ ಪ್ರಜಾಪ್ರತಿನಿಧಿ ಸಭೆಯು ಇದ್ದಕ್ಕಿದ್ದಂತೆ ಹಿಂದೀ ಭಾಷೆಗೆ ಆಡಳಿತವನ್ನು ಬದಲಿಸುವಲ್ಲಿರುವ ತೊಡಕನ್ನು ಗಮನಕ್ಕೆ ತೆಗೆದುಕೊಂಡಿತು. ಹಾಗಾಗಿ ಸುಲಲಿತವಾದ ಬದಲಾವಣೆಗಾಗಿ ಹದಿನೈದು ವರ್ಷಗಳವರೆಗೆ ಇಂಗ್ಲೀಶ್ ಭಾಷೆಯ ಬಳಕೆಯನ್ನು ಮುಂದುವರೆಸುವ ನಿರ್ಧಾರವನ್ನು ಮಾಡಿತು.

೧.೫ ಬಹಳ ದೀರ್ಘವಾದ ಚರ್ಚೆಯ ನಂತರ ಈ ಸಮಯವನ್ನು ೧೫ ವರ್ಷಗಳಿಗೆ ನಿಗದಿಪಡಿಸಲಾಯಿತು. ಈ ಸಮಯದಲ್ಲಿ ಬದಲಾವಣೆಗೆ ಬೇಕಾಗಿರುವ ವ್ಯವಸ್ಥೆಗಳನ್ನು ಹಾಗೂ ಸೂಕ್ತಸಿದ್ಧತೆಗಳನ್ನು ಮಾಡಿಕೊಳ್ಳಲು ಉದ್ದೇಶಿಸಲಾಗಿತ್ತು. ಆದರೆ ಸಂವಿಧಾನ ಬರೆದವರಿಗೂ ಕೂಡ ೧೫ ವರ್ಷಗಳ ನಂತರ ಒಮ್ಮೆಗೇ ಇಂಗ್ಲೀಶ್‌ನಿಂದ ಹಿಂದೀಗೆ ಬದಲಾವಣೆ ಮಾಡುವುದು ಅಸಾಧ್ಯವೆನ್ನುವುದು ತಿಳಿದಿತ್ತು. ಪ್ರಜಾಪ್ರತಿನಿಧಿ ಸಭೆಗೂ ಕೂಡಾ ಇದರ ಅರಿವಿದ್ದುದರಿಂದ ಹದಿನೈದು ವರ್ಷಗಳವರೆಗೆ ಹಿಂದೀಯ ಜೊತೆಯಲ್ಲಿ

ಇಂಗ್ಲೀಶ್ ಭಾಷೆಯನ್ನೂ ಆಡಳಿತ ಭಾಷೆಯನ್ನಾಗಿ ಬಳಸಲು ಅನುಮತಿಸಿತ್ತು. ಈ ಹಿನ್ನೆಲೆಯಲ್ಲೇ ಅಗತ್ಯದ ನಿರ್ಧಾರ ತೆಗೆದುಕೊಳ್ಳುವುದನ್ನು ಸರ್ಕಾರಗಳ ವಿವೇಚನೆಗೆ ಬಿಡಲಾಯಿತು. ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಬದಲಾವಣೆಗಳನ್ನು ಮಾಡಲಾಯಿತು:

> ೩೪೩(೨)ನೇ ವಿಧಿಯನ್ವಯ ಆಡಳಿತಾತ್ಮಕ ಕೆಲಸಗಳಲ್ಲಿ ಇಂಗ್ಲೀಶಿನ ಜೊತೆಯಲ್ಲಿ ಹಿಂದೀಭಾಷೆಯನ್ನು ಮೇಲೆ ಹೇಳಿದ ಸಮಯದಲ್ಲಿ ಬಳಸುವ ಆದೇಶ ನೀಡುವ ಅಧಿಕಾರವನ್ನು ರಾಷ್ಟ್ರಪತಿಗಳಿಗೆ ನೀಡಲಾಯಿತು.

> ೩೪೩(೨)ನೇ ವಿಧಿಯನ್ವಯ ೧೯೬೫ರ ನಂತರವೂ ಆಡಳಿತದ ಕೆಲಸಗಳಲ್ಲಿ ಇಂಗ್ಲೀಶ್ ಭಾಷೆಯ ಉಪಯೋಗವನ್ನು ಮಾಡಬೇಕೋ ಬೇಡವೋ ಎಂದು ನಿರ್ಧರಿಸುವ ಹಕ್ಕನ್ನು ಸಂಸತ್ತಿಗೆ ನೀಡಲಾಯಿತು.

೧.೬ ಸರ್ಕಾರವು ಆಡಳಿತಾತ್ಮಕ ಕೆಲಸಗಳನ್ನು ಇಂಗ್ಲೀಶಿನಿಂದ ಹಿಂದೀಗೆ ಬದಲಿಸಲು ಬೇಕಾಗಿರುವ ನಿರ್ಧಾರಗಳನ್ನು ತೆಗೆದುಕೊಳ್ಳಲು ಸ್ವತಂತ್ರವಾಗಿದ್ದರೂ, ೩೪೪ನೇ ವಿಧಿಯನ್ವಯ ಆಡಳಿತ ಭಾಷೆಯ ನಿರ್ಧಾರಕ್ಕೆ ಎರಡು ಆಯೋಗಗಳನ್ನು ಹಾಗೂ ಒಂದು ಸಂಸತ್ತಿನ ಸಮಿತಿಯನ್ನು ರಚಿಸಿತು.

೧.೭ ೩೫೧ನೇ ವಿಧಿಯನ್ವಯ ಕೇಂದ್ರಸರ್ಕಾರಕ್ಕೆ ಈ ಕೆಳಗಿನ ಕೆಲಸಗಳನ್ನು ನೀಡುತ್ತದೆ.

> ಭಾರತದ ಎಲ್ಲಾ ಕಡೆಗಳಲ್ಲಿ ಹಿಂದೀಭಾಷೆಯನ್ನು ಹರಡುವುದು ಕೇಂದ್ರಸರ್ಕಾರದ ಹೊಣೆಗಾರಿಕೆಯಾಗಿರುತ್ತದೆ ಹಾಗೂ ಹಿಂದೀಯನ್ನು ಭಾರತದ ಸಮ್ಮಿಶ್ರ ಸಂಸ್ಕೃತಿಯನ್ನು ಸಮರ್ಥವಾಗಿ ವ್ಯಕ್ತಪಡಿಸುವ ನಿಟ್ಟಿನಲ್ಲಿ ಬಲಗೊಳಿಸಬೇಕಾಗಿದೆ. ಇದಕ್ಕಾಗಿ ಹಿಂದೀಯ ಮೂಲ ಸೊಗಡನ್ನು ಹಿಂದೂಸ್ಥಾನಿಯಲ್ಲಿರುವಂತೆ ಹಾಗೆಯೇ ಉಳಿಸಿಕೊಂಡು, ಅದರ ಶಬ್ದಭಂಡಾರ ಹೆಚ್ಚಿಸಲು ಅಗತ್ಯವಿದ್ದಲ್ಲೆಲ್ಲಾ ಮೊದಲಿಗೆ ಸಂಸ್ಕೃತದಿಂದಲೂ ನಂತರ ಇತರೆ ಭಾಷೆಗಳಿಂದಲೂ ನೆರವು ಪಡೆಯಬಹುದಾಗಿದೆ. ಈ ದಿಕ್ಕಿನಲ್ಲಿ ಹಿಂದೀಯನ್ನು ಕೇಂದ್ರದ ಆಡಳಿತ ಭಾಷೆಯನ್ನಾಗಿಯೂ ಹಾಗೂ ಉಳಿದ ರಾಜ್ಯಗಳಿಗೆ

ಸಂಪರ್ಕಭಾಷೆಯನ್ನಾಗಿಯೂ ಮಾಡಬೇಕೆಂದು ಸೂಚಿಸಲಾಗಿದೆ. ಹೀಗೆ ಹಿಂದೀಭಾಷೆಯಲ್ಲಿ ಬೇರೆಬೇರೆ ಭಾಷೆಯ ಪದಗಳನ್ನು ಸೇರಿಸುವ ಮೂಲಕ ಹಿಂದೀಯೇತರ ರಾಜ್ಯಗಳೂ ಕೂಡಾ ಹಿಂದೀಯನ್ನು ಒಪ್ಪಿಕೊಳ್ಳುವ ಹಾಗೇ ಮಾಡಬೇಕೆಂಬುದು ಸಂವಿಧಾನ ಬರೆದವರ ನಿರೀಕ್ಷೆಯಾಗಿದೆ.

೧.೮ ೧೨೦ನೇ ವಿಧಿಯು ಸಂಸತ್ತಿನಲ್ಲಿ ಉಪಯೋಗಿಸಬೇಕಾದ ಭಾಷೆಯ ಬಗ್ಗೆ ಹೇಳುತ್ತದೆ. ಇದರ ಪ್ರಕಾರ ಹಿಂದೀ ಅಥವಾ ಇಂಗ್ಲೀಶ್ ಭಾಷೆಗಳನ್ನು ಸಂಸತ್ತಿನಲ್ಲಿ ಮಾತನಾಡಲು ಉಪಯೋಗಿಸಬೇಕು. ಸಭೆಯ ಅಧ್ಯಕ್ಷರ ಅನುಮತಿ ಪಡೆದು ಸದಸ್ಯರು ತಮ್ಮ ತಾಯಿನುಡಿಯಲ್ಲಿ ಮಾತನಾಡಬಹುದು. ಈ ವಿಧಿಯ ಪ್ರಕಾರ ಸಂವಿಧಾನವು ಅಸ್ತಿತ್ವಕ್ಕೆ ಬಂದ ೧೫ ವರ್ಷಗಳ ಗಡುವಿನ ನಂತರ ಅಂದರೆ ೨೬.೦೧.೧೯೬೫ರ ನಂತರ ಇಂಗ್ಲೀಶ್ ಭಾಷೆಯ ಬಳಕೆಯನ್ನು ಮುಂದುವರೆಸುವ ಆಯ್ಕೆ ಕೊನೆಯಾಗುತಿತ್ತು. ೧೯೬೩ರಲ್ಲಿ ಆಡಳಿತ ಭಾಷಾ ಕಾಯ್ದೆಯ ಭಾಗ–೩ರ ಅನ್ವಯ, ೧೯೬೫ರ ನಂತರವೂ ಇಂಗ್ಲೀಶ್ ಭಾಷೆಯನ್ನು ಉಪಯೋಗಿಸಬಹುದು ಎಂದು ತಿದ್ದುಪಡಿ ಮಾಡಲಾಯಿತು.

## ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಉಪಯೋಗಿಸಲು) ೧೯೫೨ ಹಾಗೂ ೧೯೫೫ರಲ್ಲಿ ಆದ ಸಂವಿಧಾನಿಕ ಆದೇಶಗಳು

೧.೯ ಕೇಂದ್ರಸರ್ಕಾರಕ್ಕೆ ಕ್ರಮೇಣವಾಗಿ ಹದಿನೈದು ವರ್ಷಗಳಲ್ಲಿ ಇಂಗ್ಲೀಶನ್ನು ಹಿಂದೀಯಿಂದ ಬದಲಿಸುವ ಅಗತ್ಯದ ಬಗ್ಗೆ ಎಚ್ಚರವಿದ್ದುದರಿಂದ ಸಾಂವಿಧಾನಿಕ ಕರ್ತವ್ಯವನ್ನು ಪೂರೈಸಿತು. ಸಂವಿಧಾನದ ೩೪೩ನೇ ವಿಧಿಯ ಅಧಿನಿಯಮ ೩ರ ಪ್ರಕಾರ ರಾಷ್ಟ್ರಪತಿಗಳಿಗೆ ಇರುವ ಅಧಿಕಾರವನ್ನು ಬಳಸಿಕೊಂಡು ಕಾನೂನು ಸಚಿವಾಲಯವು ೨೭ ಮೇ ೧೯೫೨ರಲ್ಲಿ ಮತ್ತು "ಸಂವಿಧಾನಿಕ ಆದೇಶ – ೧೯೫೫"ರ ಮೂಲಕ ೩ನೇ ಡಿಸೆಂಬರ್ ೧೯೫೫ರಲ್ಲಿ ಆದೇಶ ನೀಡಿತು. ಇದರ ಪ್ರಕಾರ ರಾಜ್ಯಗಳಿಗೆ ರಾಜ್ಯಪಾಲರನ್ನು ನೇಮಿಸುವಾಗ, ಸರ್ವೋಚ್ಚ ನ್ಯಾಯಾಲಯ ಅಥವಾ ರಾಜ್ಯಗಳ ಉಚ್ಚ ನ್ಯಾಯಾಲಯಗಳಿಗೆ ನ್ಯಾಯಾಧೀಶರುಗಳ ನೇಮಕಾತಿ ಆದೇಶಗಳಲ್ಲಿ ಮತ್ತು ಒಟ್ಟಾರೆ ಸಾರ್ವಜನಿಕರೊಡನೆ ನಡೆಸುವ ವ್ಯವಹಾರಗಳಲ್ಲಿ ಇಂಗ್ಲೀಶಿನ ಜೊತೆ ಹಿಂದೀಯನ್ನು ಉಪಯೋಗಿಸತಕ್ಕದ್ದು ಎನ್ನುವ ಸೂಚನೆಯನ್ನು ನೀಡಲಾಯಿತು.

**ಆಡಳಿತ ಭಾಷಾ ಆಯೋಗ, ೧೯೫೫**

೧.೧೦ ಸಂವಿಧಾನದ ೩೪೪(ಐ)ನೇ ವಿಧಿಯ ಅಡಿಯಲ್ಲಿ ರಾಷ್ಟ್ರಪತಿಗಳು ೭ನೇ ಜೂನ್, ೧೯೫೫ರಂದು ಶ್ರೀ.ಬಾಲಗಂಗಾಧರ್ ಖೇರ್ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿರುತ್ತಾರೆ. ಹಾಗೂ ಈ ಕೆಳಗಿನ ವಿಷಯಗಳ ಬಗ್ಗೆ ಶಿಫಾರಸ್ಸುಗಳನ್ನು ನೀಡಲು ಸೂಚಿಸುತ್ತಾರೆ:

೧. ಒಕ್ಕೂಟದ ಆಡಳಿತ ಭಾಷೆಯಾಗಿ ಹಿಂದೀಯ ಬಳಕೆಯನ್ನು ಹಂತಹಂತವಾಗಿ ಹೆಚ್ಚಿಸುವುದರ ಕುರಿತು.

೨. ಕೇಂದ್ರದ ಎಲ್ಲಾ ಅಥವಾ ಯಾವುದಾದರೂ ಆಡಳಿತದ ಅಂಗದಲ್ಲಿ ಇಂಗ್ಲೀಶಿನ ಬಳಕೆಯನ್ನು ಮಿತಿಗೊಳಿಸುವ ಸಾಧ್ಯತೆಗಳನ್ನು ಕುರಿತು.

೩. ೩೪೮ನೇ ವಿಧಿಯಲ್ಲಿ ಹೇಳಿರುವ ಎಲ್ಲಾ ಅಥವಾ ಒಂದು ಉದ್ದೇಶಕ್ಕಾದರೂ ಹಿಂದೀಯನ್ನು ಬಳಸಲಾಗುತ್ತಿದೆಯೇ ಎಂಬ ಬಗ್ಗೆ.

೪. ಒಕ್ಕೂಟದ ಆಡಳಿತದಲ್ಲಿ ಬಳಸಬೇಕಾದ ಅಂಕಿಗಳ ಬಗ್ಗೆ.

೫. ಕೇಂದ್ರ ಮತ್ತು ರಾಜ್ಯಗಳ ನಡುವೆ ಹಾಗೂ ರಾಜ್ಯ ರಾಜ್ಯಗಳ ನಡುವೆ ಆಡಳಿತ ಭಾಷೆಯು ಹೇಗೆ ಬಳಕೆಯಾಗುತ್ತಿದೆಯೆಂಬುದರ ಬಗ್ಗೆ ರಾಷ್ಟ್ರಪತಿಗಳು ಸೂಚಿಸುವ ಮತ್ತಾವುದೇ ವಿಷಯದ ಬಗ್ಗೆ.

**ಖೇರ್ ಸಮಿತಿ**

೧.೧೧ ಖೇರ್ ಸಮಿತಿಯು ತನ್ನ ವರದಿಯನ್ನು ೩೧ನೇ ಜುಲೈ, ೧೯೫೬ರಲ್ಲಿ ರಾಷ್ಟ್ರಪತಿಗಳಿಗೆ ಸಲ್ಲಿಸಿತು. ಈ ಸಮಿತಿಯು ಮಾಡಿದ ಮುಖ್ಯ ಶಿಫಾರಸ್ಸುಗಳು ಹೀಗಿವೆ:

ಭಾರತದ ಪ್ರಜಾಪ್ರಭುತ್ವದ ಮಾದರಿಯನ್ನು ಪರಿಗಣಿಸಿದರೆ ಇಂಗ್ಲೀಶನ್ನು ಅಖಿಲ ಭಾರತ ಮಟ್ಟದ ಸಂಪರ್ಕ ಭಾಷೆಯೆಂದು ಒಪ್ಪಲಾಗುವುದಿಲ್ಲ. ಭಾರತೀಯ ಭಾಷೆಗಳಲ್ಲಿ ಬೇರುಮಟ್ಟದ ಕಲಿಕೆಯನ್ನು ಏರ್ಪಡಿಸುವ ಸಾಧ್ಯತೆಗಳನ್ನು ಶೋಧಿಸಬೇಕು. ಒಂದು ವಿದೇಶಿ ಭಾಷೆಯನ್ನು ದೇಶದ

ಸಾರ್ವಜನಿಕ ಕಾರ್ಯಗಳಲ್ಲಿಯೂ, ದೈನಂದೀನ ಆಡಳಿತದಲ್ಲಿಯೂ ಬಳಸುವುದು ತರವಲ್ಲ.

ಹೆಚ್ಚು ಜನರು ಮಾತಾಡುತ್ತಿರುವ ಹಿಂದೀಯು ಸ್ಪಷ್ಟವಾಗಿ ಭಾರತದ ಭಾಷಾ ಮಾಧ್ಯಮವಾಗಬೇಕು.

ಭಾರತದ ಪ್ರತಿಯೊಬ್ಬ ಪ್ರಜೆಗೂ ೧೪ ವರ್ಷದವರೆಗೆ ಕಡ್ಡಾಯವಾಗಿ ಹಿಂದೀಯನ್ನು ಕಲಿಸಬೇಕು.

ಹಿಂದೀಯನ್ನು ಮಾಧ್ಯಮಿಕ ಹಂತದವರೆಗೆ ಭಾರತದ ಎಲ್ಲೆಡೆ ಕಲಿಸುವುದು ಕಡ್ಡಾಯ ಮತ್ತು ಹಿಂದೀ ಭಾಷೆಯ ಮಕ್ಕಳಿಗೆ ದಕ್ಷಿಣ ಭಾರತದ ಯಾವುದಾದರೊಂದು ಭಾಷೆಯನ್ನು ಕಡ್ಡಾಯವಾಗಿ ಕಲಿಯುವ ಅಗತ್ಯವಿಲ್ಲ.

ದೇಶದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಹಿಂದೀ ಮಾಧ್ಯಮದಲ್ಲಿ ಪರೀಕ್ಷೆ ಬರೆಯಲು ಅವಕಾಶ/ ಅನುಕೂಲ ಮಾಡಿಕೊಡಲೇಬೇಕು.

ವಿಜ್ಞಾನ ಮತ್ತು ತಂತ್ರಜ್ಞಾನ ಕಲಿಸುವಾಗ ಇರುವ ವಿದ್ಯಾರ್ಥಿಗಳೆಲ್ಲರೂ ಒಂದೇ ಭಾಷೆಯವರಾಗಿದ್ದರೆ ಮಾತ್ರಾ ಅವರ ನುಡಿಯಲ್ಲಿ ಕಲಿಸಬಹುದು. ಇನ್ನೊಂದು ಭಾಷೆಯ ವಿದ್ಯಾರ್ಥಿ ಅವರೊಟ್ಟಿಗೆ ಕಲಿಯುತ್ತಿದ್ದಲ್ಲಿ ಕಡ್ಡಾಯವಾಗಿ ಹಿಂದೀ ಮಾಧ್ಯಮದಲ್ಲೇ ಬೋಧಿಸತಕ್ಕದ್ದು.

ಕೇಂದ್ರಸರ್ಕಾರದ ಕೆಲಸಗಾರರು ಇಂತಿಷ್ಟೇ ಸಮಯದಲ್ಲಿ ಹಿಂದೀಯನ್ನು ಕಲಿಯತಕ್ಕದ್ದು, ತಪ್ಪಿದರೆ ದಂಡ ತೆರಬೇಕೆಂಬ ಕಟ್ಟುನಿಟ್ಟಿನ ಕಾಯ್ದೆಯನ್ನು ಜಾರಿಮಾಡತಕ್ಕದ್ದು

ಸಾರ್ವಜನಿಕರೊಡನೆ ವ್ಯವಹರಿಸುವಾಗ ಸ್ಥಳೀಯ ಭಾಷೆಯಲ್ಲಿ ವ್ಯವಹರಿಸಬಹುದಾದರೂ ಕಛೇರಿಯ ಒಳಗಿನ ಎಲ್ಲಾ ವ್ಯವಹಾರಗಳೂ ಹಿಂದೀ ಭಾಷೆಯಲ್ಲೇ ನಡೆಯತಕ್ಕದ್ದು.

ರಾಜ್ಯ ಮತ್ತು ಕೇಂದ್ರಸರ್ಕಾರಗಳ ನೌಕರರಿಗೆ ಒಂದು ಹಂತದ ಹಿಂದೀ ಜ್ಞಾನವನ್ನು ಕಡ್ಡಾಯ ಮಾಡತಕ್ಕದ್ದು ಮತ್ತು ಇದನ್ನು ಉತ್ತೇಜಿಸಲು ಹೆಚ್ಚು ಹೆಚ್ಚು ಬಹುಮಾನ ಕೊಡುವುದು.

ಎಲ್ಲಾ ಸರ್ಕಾರಿ ಆದೇಶಗಳೂ ಹಿಂದೀಯಲ್ಲಿರತಕ್ಕದ್ದು ಮತ್ತು ಸೌಕರ್ಯಕ್ಕಾಗಿ ಸ್ಥಳೀಯ ಭಾಷೆಗೆ ತರ್ಜುಮೆ ಮಾಡಬಹುದು.

ಈ ದೇಶದಲ್ಲಿ ನ್ಯಾಯದಾನವನ್ನು ದೇಶಭಾಷೆಯಲ್ಲೇ ಕೊಡತಕ್ಕದ್ದು. ನ್ಯಾಯಾಲಯದ ಆದೇಶಗಳನ್ನು ಸ್ಥಳೀಯ ಭಾಷೆಗೆ, ಅಗತ್ಯವಿದ್ದಲ್ಲಿ ಸುಪ್ರೀಂಕೋರ್ಟ್ ಮತ್ತು ಹೈಕೋರ್ಟಿನ ನಡಾವಳಿಗಳು, ದಾಖಲೆಗಳೆಲ್ಲದರ ಸಮೇತವಾಗಿ ತರ್ಜುಮೆ ಮಾಡಿ ಲಗತ್ತಿಸಬೇಕಾಗಿರುತ್ತದೆ.

ಭಾರತಸರ್ಕಾರದ ಸೇವೆಯಲ್ಲಿನ ಯಾವುದೇ ನೌಕರಿಗಾದರೂ ಹಿಂದೀ ಭಾಷೆಯಲ್ಲಿನ ಪರಿಣಿತಿಯು ಕಡ್ಡಾಯವಾಗಿ ಇರತಕ್ಕದ್ದು. ಇದಕ್ಕಾಗಿ ಕಡ್ಡಾಯವಾಗಿ ಒಂದು ಪ್ರಶ್ನೆಪತ್ರಿಕೆಯನ್ನು ಹಿಂದೀ ಭಾಷೆಯಲ್ಲಿಡಬೇಕು. ಇದು ಹಿಂದೀಯೇತರರಿಗೆ ತೊಡಕಾಗದಂತೆ ಸರಳವಾಗಿರಬೇಕು.

**“ಆಡಳಿತ ಭಾಷಾ” ಸಂಸತ್ ಸಮಿತಿ, ೧೯೫೭**

ಸೆಪ್ಟಂಬರ್, ೧೯೫೭ರಲ್ಲಿ ಸಂವಿಧಾನದ ೩೪೪ (೪)ನೇ ವಿಧಿಯ ಅಡಿಯಲ್ಲಿ ೩೦ ಜನರ (೨೦ ಜನ ಲೋಕಸಭಾ ಸಂಸದರು ಹಾಗೂ ೧೦ ಜನ ರಾಜ್ಯಸಭಾ ಸಂಸದರು) ಆಡಳಿತ ಭಾಷೆಗಾಗಿ ಸಂಸತ್ತಿನ ಸಮಿತಿಯನ್ನು ರಚಿಸಲಾಯ್ತು. ಈ ಸಮಿತಿಯ ಮುಖ್ಯ ಉದ್ದೇಶವು ಆಡಳಿತ ಭಾಷಾ ಆಯೋಗವು ನೀಡಿರುವ ವರದಿಯನ್ನು ಪರೀಕ್ಷಿಸುವುದು ಹಾಗೂ ಆಯೋಗದ ಅಭಿಪ್ರಾಯಗಳನ್ನು ರಾಷ್ಟ್ರಪತಿಗಳಿಗೆ ಸಲ್ಲಿಸುವುದು. ಈ ಸಮಿತಿಯ ಅಧ್ಯಕ್ಷತೆಯನ್ನು ಅಂದೀನ ಗೃಹಮಂತ್ರಿಗಳಾಗಿದ್ದ ಶ್ರೀ ಗೋವಿಂದ್ ವಲ್ಲಭ್ ಪಂತ್‌ರವರು ವಹಿಸಿದ್ದರು ಹಾಗೂ ಈ ಸಮಿತಿ ತನ್ನ ವರದಿಯನ್ನು ೮ನೇ ಫೆಬ್ರವರಿ, ೧೯೫೯ರಲ್ಲಿ ರಾಷ್ಟ್ರಪತಿಗಳಿಗೆ ಸಲ್ಲಿಸಿತು. ಈ ಸಮಿತಿಯು ೨೬ನೇ ಜನವರಿ, ೧೯೬೫ರ ನಂತರವೂ ಇಂಗ್ಲೀಶನ್ನು ಸಹ–ಆಡಳಿತ ಭಾಷೆಯನ್ನಾಗಿ ಉಪಯೋಗಿಸಬಹುದು ಎಂದು ಅಭಿಪ್ರಾಯಪಟ್ಟಿತು. ಆದರೆ ನಿಧಾನವಾಗಿ ಇಂಗ್ಲೀಶ್ ಭಾಷೆಯ ಪ್ರಭಾವವನ್ನು ಕಡಿಮೆ ಮಾಡುತ್ತಾ ಅಲ್ಲಿ ಹಿಂದೀಯನ್ನು ಸ್ಥಾಪಿಸಬೇಕು ಎಂದು ಹೇಳಿತು. ಈ ಸಮಿತಿಯು ೩೫೧ನೇ ವಿಧಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟು ಅದನ್ನ

ಕಾರ್ಯಗತಗೊಳಿಸಬೇಕು ಎಂದು ಹೇಳಿತು. ಅಖಿಲ ಭಾರತ ಮಟ್ಟದ ಸೇವೆಗಳ ಹಾಗೂ ಹಿರಿಯ ಕೇಂದ್ರಸರ್ಕಾರದ ಸೇವೆಗಳ ಪರೀಕ್ಷೆಗಳ ಮಾಧ್ಯಮವನ್ನು ಇಂಗ್ಲೀಶ್‌ನಲ್ಲಿಯೇ ಮುಂದುವರೆಸಿಕೊಂಡು ಹೋಗಬೇಕು ಹಾಗೂ ನಿಧಾನವಾಗಿ ಹಿಂದೀಭಾಷೆಯಲ್ಲೂ ಪರೀಕ್ಷೆಗಳನ್ನು ಬರೆಯಲು ಅನುವು ಮಾಡಿಕೊಡಬೇಕು ಎಂದು ಹೇಳಿತು. ಈ ವರದಿಯ ಮೇಲೆ ಲೋಕಸಭೆಯಲ್ಲಿ ೨–೪ನೇ ಸೆಪ್ಟಂಬರ್, ೧೯೫೯ ಹಾಗೂ ರಾಜ್ಯಸಭೆಯಲ್ಲಿ ೮–೯ನೇ ಸೆಪ್ಟಂಬರ್, ೧೯೫೯ರಲ್ಲಿ ಚರ್ಚೆಗಳು ನಡೆದವು. ೪ನೇ ಸೆಪ್ಟಂಬರ್, ೧೯೫೯ರಂದು ಲೋಕಸಭೆಯನ್ನು ಉದ್ದೇಶಿಸಿ ಮಾತನಾಡಿದ ಪ್ರಧಾನಮಂತ್ರಿಗಳಾದ ನೆಹರೂ ಅವರು ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಮಾಡುವ ನಿರ್ಧಾರಕ್ಕೆ ತಮ್ಮ ನಿಲುವನ್ನು ಈ ರೀತಿ ವ್ಯಕ್ತಪಡಿಸಿದರು: “ಇಂಗ್ಲೀಶನ್ನು ಹೆಚ್ಚುವರಿಯಾಗಿ ಉಪಯೋಗಿಸಬಹುದು. ರಾಜ್ಯಗಳು ಕೇಂದ್ರಸರ್ಕಾರದ ಜೊತೆ ವ್ಯವಹರಿಸಲು ಹಾಗೂ ಅಂತರ್‌ರಾಜ್ಯ ಸಂಪರ್ಕಕ್ಕಾಗಿ ಇಂಗ್ಲೀಶನ್ನು ಉಪಯೋಗಿಸಬಹುದು. ಹಿಂದೀಯೇತರ ರಾಜ್ಯಗಳು ತಾವಾಗಿಯೇ ಇಂಗ್ಲೀಶ್ ಭಾಷೆಯ ಬಳಕೆಯನ್ನು ನಿಲ್ಲಿಸುವವರೆಗೂ, ಹಿಂದೀ ಬಳಸಲು ಒತ್ತಾಯಿಸುವುದಿಲ್ಲ ಮತ್ತು ಇದಕ್ಕೆ ಯಾವ ಕಾಲಮಿತಿಯೂ ಇರುವುದಿಲ್ಲ.”

## ರಾಷ್ಟ್ರಪತಿಗಳ ಆದೇಶ, ೧೯೬೦

೧.೧೩ ಪಂತ್ ಸಮಿತಿಯ ಸಲಹೆಯ ಮೇರೆಗೆ ರಾಷ್ಟ್ರಪತಿಗಳು ೩೪೪(೬)ನೇ ವಿಧಿಯ ಅಡಿಯಲ್ಲಿ ತಮ್ಮ ಅಧಿಕಾರವನ್ನು ಬಳಸಿ ಕೇಂದ್ರಸರ್ಕಾರದ ಕಛೇರಿಗಳಲ್ಲಿ ಹಿಂದೀ ಬಳಕೆಯನ್ನು ಜಾರಿಗೊಳಿಸಲು ಆದೇಶ ನೀಡಿದರು. ಇದು ಹಿಂದೀಯಲ್ಲಿ ಹೊಸದಾಗಿ ಪದಗಳನ್ನು ಹುಟ್ಟುಹಾಕಲು, ಕೇಂದ್ರಸರ್ಕಾರದ ನೀತಿನಿಯಮಗಳನ್ನು ಹಿಂದೀಗೆ ಭಾಷಾಂತರಿಸಲು ಹಾಗೂ ಕೇಂದ್ರಸರ್ಕಾರಿ ನೌಕರರಿಗೆ ಹಿಂದೀ ತರಬೇತಿಯ ವ್ಯವಸ್ಥೆಗಳು ಮೈದಳೆಯಲು ಕಾರಣವಾಯಿತು.

## ಆಡಳಿತ ಭಾಷೆ ಕಾಯ್ದೆ, ೧೯೬೩

ಹಿಂದೀಭಾಷೆಯನ್ನ ರಾಷ್ಟ್ರವ್ಯಾಪಿಯಾಗಿ ಜಾರಿಗೊಳಿಸಲು ನಿಗದಿಯಾಗಿದ್ದ ೨೬ನೇ ಜನವರಿ, ೧೯೬೫ ಹತ್ತಿರವಾಗುತ್ತಿದ್ದಂತೆ ಕೆಲವು ಹಿಂದೀಯೇತರ ರಾಜ್ಯಗಳಲ್ಲಿ, ಅಂದೀನ ಪ್ರಧಾನಮಂತ್ರಿಗಳು ಹಿಂದೀಯೇತರರ ಮೇಲೆ ಹಿಂದೀಯನ್ನು ಹೇರುವುದಿಲ್ಲಾ ಎಂದು ಭರವಸೆ ನೀಡಿದ್ದರೂ ಕೂಡಾ ಕುದಿ ಶುರುವಾಯಿತು. ಆದಾಗ್ಯೂ ಪ್ರಧಾನಮಂತ್ರಿಗಳು ಇಂಗ್ಲೀಶ್ ಭಾಷೆಯನ್ನು ಮುಂದುವರಿಕೆ ನಿಲ್ಲಿಸುವ

ಬಗ್ಗೆ ಖಚಿತ ಒಲವು ಹೊಂದಿದ್ದರು. ಆಡಳಿತ ಭಾಷಾಕಾಯ್ದೆಯ ಬೆಳವಣಿಗೆಯ ಹಾಗೂ ಹಿಂದೀಯೇತರ ರಾಜ್ಯಗಳ ನಿಲುವುಗಳನ್ನು ಗಮನದಲ್ಲಿಟ್ಟುಕೊಂಡು ಆಡಳಿತ ಭಾಷಾ ಕಾಯ್ದೆಯನ್ನ ೧೯೬೩ರಲ್ಲಿ ಜಾರಿಗೆ ತರಲಾಯಿತು. ಕಾಯ್ದೆಯ ವಿಭಾಗ ೩ರಲ್ಲಿ ಇಂಗ್ಲೀಶನ್ನು ೧೫ ವರ್ಷಗಳ ನಂತರವೂ ಕೇಂದ್ರದ ಅಧಿಕೃತ ಆಡಳಿತ ಭಾಷೆಯನ್ನಾಗಿ ಹಿಂದೀಯ ಜೊತೆಗೆ ಉಪಯೋಗಿಸಬಹುದು ಎಂದು ಹೇಳಲಾಯಿತು.

ಕೆಲವು ದಾಖಲೆಗಳು ಕಡ್ಡಾಯವಾಗಿ ಇಂಗ್ಲೀಶ್ ಹಾಗೂ ಹಿಂದೀಯಲ್ಲಿ ಇರಬೇಕು ಎಂದು ಹೇಳಲಾಗಿದೆ. ಹಿಂದೀಯೇತರ ರಾಜ್ಯಗಳು ಇಂಗ್ಲೀಶನ್ನು ತಮ್ಮ ಆಡಳಿತ ಭಾಷೆಯಲ್ಲವೆಂದು ಎಲ್ಲಾ ರಾಜ್ಯಗಳ ವಿಧಾನಸಭೆಗಳು ವಿಧೇಯಕ ಮಂಡಿಸಿ ಅಂಗೀಕರಿಸುವವರೆಗೂ, ರಾಜ್ಯಗಳ ಈ ನಿರ್ಣಯಗಳ ಆಧಾರದ ಮೇಲೆ ಸಂಸತ್ತಿನ ಎರಡೂ ಸದನಗಳಲ್ಲಿ ಪ್ರತ್ಯೇಕವಾಗಿ ಇದೇ ವಿಧೇಯಕ ಅಂಗೀಕಾರವಾಗುವವರೆಗೂ ವಿಭಾಗ-೩ರ ಕಾಯ್ದೆಗಳು ಜಾರಿಯಲ್ಲಿರುತ್ತವೆ.

೨೬.೦೧.೧೯೬೫ರ ಈ ದಿನದ ಹತ್ತುವರ್ಷಗಳ ನಂತರ ಅಂದರೆ ೧೯೭೫ರಲ್ಲಿ ಆಡಳಿತ ಭಾಷಾ ಸಂಸತ್ ಸಮಿತಿಯನ್ನು ರಚಿಸತಕ್ಕದ್ದೆಂದು ಸದರಿ ಕಾಯ್ದೆಯ ನಾಲ್ಕನೇ ಅಧಿನಿಯಮದಲ್ಲಿ ಹೇಳಲಾಗಿದೆ.

**ಆಡಳಿತ ಭಾಷಾ ನಿರ್ಣಯುಗಳು (official language resolution)**

೧.೧೬ ಆಡಳಿತ ಭಾಷಾಕಾಯ್ದೆ ಜಾರಿಗೆ ಬಂದ ಒಂದು ವರ್ಷದ ನಂತರ ಲೋಕಸಭೆ ಹಾಗೂ ರಾಜ್ಯಸಭೆಗಳಲ್ಲಿ ಒಂದು ಹೊಸನಿರ್ಣಯ ತೆಗೆದುಕೊಳ್ಳಲಾಯಿತು. ಈ ನಿರ್ಣಯದ ಪ್ರಕಾರ ಹಿಂದೀಪ್ರಸಾರದ ಸಲುವಾಗಿ ಕೇಂದ್ರಸರ್ಕಾರವು ಮತ್ತಷ್ಟು ತೀವ್ರವೂ ಪರಿಣಾಮಕಾರಿಯೂ ಆದ ಯೋಜನೆಗಳನ್ನು/ ಕ್ರಮಗಳನ್ನು ಕೈಗೊಂಡು ಆ ಮೂಲಕ ದೇಶವ್ಯಾಪಿ ಹಿಂದೀ ಪ್ರಸಾರ ಮಾಡಲು ಹೆಚ್ಚಿನ ಒತ್ತನ್ನು ನೀಡಬೇಕು. ಪ್ರತಿವರ್ಷ ಈ ಕಾಯ್ದೆಯ ಅನುಷ್ಠಾನ ಹಾಗೂ ಬಳಕೆಗಾಗಿ ಕೈಗೊಂಡಿರುವ ಕ್ರಮಗಳನ್ನು ಅಭ್ಯಸಿಸಿ ಲೋಕಸಭೆ ಹಾಗೂ ರಾಜ್ಯಸಭೆಯಲ್ಲಿ ವರದಿಯನ್ನು ಸಲ್ಲಿಸಬೇಕು ಹಾಗೂ ನಂತರ ಇದನ್ನು ಎಲ್ಲಾ ರಾಜ್ಯಸರ್ಕಾರಗಳಿಗೆ ಕಳುಹಿಸಿಕೊಡಬೇಕು.

೧.೧೭ ಈ ನಿರ್ಣಯದಲ್ಲಿ ಹಿಂದೀಯ ಜೊತೆಗೇ ೮ನೇ ಪರಿಚ್ಛೇದದಲ್ಲಿ ಪಟ್ಟಿಯಾಗಿರುವ ಎಲ್ಲಾ ಭಾಷೆಗಳ ಬೆಳವಣಿಗೆಗೆ ಕೇಂದ್ರಸರ್ಕಾರವು ರಾಜ್ಯಸರ್ಕಾರಗಳ ಜೊತೆಗೂಡಿ ಕೆಲಸಮಾಡಬೇಕು ಎನ್ನಲಾಗಿದೆ.

ಕೇಂದ್ರಸರ್ಕಾರವು ರಾಜ್ಯಸರ್ಕಾರಗಳು ತ್ರಿಭಾಷಾ ಸೂತ್ರವನ್ನು ಒಪ್ಪಿಕೊಳ್ಳುವ ಹಾಗೆ ಮಾಡಬೇಕು. ಈ ನಿರ್ಣಯದ ಪ್ರಕಾರ ಕೇಂದ್ರಸರ್ಕಾರದ ಹುದ್ದೆಗಳಲ್ಲಿ ಕೆಲಸ ಮಾಡಲು ಹಿಂದೀ ಅಥಾವ ಇಂಗ್ಲೀಶ್ ಭಾಷೆಯ ಜ್ಞಾನವಿರಬೇಕಾಗಿರುವುದು ಕಡ್ಡಾಯ, ಹಾಗೂ ಇನ್ನು ಕೆಲವು ಹೆಚ್ಚಿನ ಜವಾಬ್ದಾರಿ ಇರುವ ಹುದ್ದೆಗಳಿಗೆ, ಆಯಾ ಹುದ್ದೆಯಲ್ಲಿ ಪರಿಣಾಮಕಾರಿಯಾಗಿ ಕೆಲಸಮಾಡಲು ಬೇಕಿರುವ, ಎರಡು ಭಾಷೆಗಳಲ್ಲಿ ಅಥವಾ ಯಾವುದೇ ಒಂದರಲ್ಲಿ ಹೆಚ್ಚಿನ ಪರಿಣಿತಿಯನ್ನು ಹೊಂದಿರುವ ನಿಯಮವನ್ನು ಕಡ್ಡಾಯಮಾಡಬಹುದಾಗಿದೆ. ಅಲ್ಲದೆ ಮೇಲೆ ತಿಳಿಸಿದ ವಿಶೇಷ ಸಂದರ್ಭಗಳನ್ನು ಹೊರತುಪಡಿಸಿ ಉಳಿದಂತೆ ೮ನೇ ಪರಿಚ್ಛೇದಲ್ಲಿ ಇರುವ ಎಲ್ಲಾ ಭಾಷೆಗಳಲ್ಲೂ ಕೇಂದ್ರದ ಸಾರ್ವಜನಿಕ ಸೇವಾ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಅನುಕೂಲ ಅನಾನುಕೂಲಗಳನ್ನು ಪರಿಗಣಿಸಿ ಅವಕಾಶ ನೀಡತಕ್ಕದ್ದು.

**ಆಡಳಿತ ಭಾಷಾ ಕಾನೂನು, ೧೯೬೬**

೧.೧೮ ಹಾಗೂ ೧.೧೯ ರಲ್ಲಿ ಭಾಷಾನೀತಿಯ ಬಗ್ಗೆ ಗೆರ್ಝೆಟ್ಟಿನಲ್ಲಿ ಪ್ರಕಟಿಸಿರುವ ಬಗ್ಗೆ ಮಾಹಿತಿ ನೀಡಿದ್ದಾರೆ.

**"ಆಡಳಿತ ಭಾಷಾ" ಸಂಸತ್ ಸಮಿತಿ ರಚನೆ**

ಆಡಳಿತ ಭಾಷೆ ಕಾಯ್ದೆಯ ವಿಭಾಗ ೪ರ ಅನ್ವಯ ಕಾಯ್ದೆ ಜಾರಿಗೆ ಬಂದ ಹತ್ತು ವರ್ಷಗಳ ನಂತರ ವಿಭಾಗ ೩ರ ಅನ್ವಯ ಈ ಕಾಯ್ದೆಯ ಅನುಷ್ಠಾನದ ಪ್ರಕ್ರಿಯೆಯನ್ನು ನಿರ್ವಹಿಸಲು ೨೦ ಜನ ಲೋಕಸಭೆ ಸದಸ್ಯರು ಹಾಗೂ ೧೦ ಜನ ರಾಜ್ಯಸಭೆ ಸದಸ್ಯರನ್ನೊಳಗೊಂಡ ೩೦ ಸದಸ್ಯರ ಸಂಸತ್ ಸಮಿತಿಯನ್ನು ರಚಿಸಬೇಕು.

**ಸಮಿತಿಗೆ ವಹಿಸಿರುವ ಕೆಲಸ**

೧.೨೧ ಆಡಳಿತ ಭಾಷೆ ಕಾಯ್ದೆ ೪(೩)ರ ಅನ್ವಯ ಈ ಸಮಿತಿಯು ಭಾರತದಲ್ಲಿ ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಹೇಗೆ ಅನುಷ್ಠಾನಕ್ಕೆ ತರಲಾಗುತ್ತಿರುವ ಬಗ್ಗೆ ರಾಷ್ಟ್ರಪತಿಗಳಿಗೆ ವರದಿ ನೀಡುವುದಾಗಿರುತ್ತದೆ.

೧.೨೨ ರಿಂದ ೧.೨೮ ರ ವರೆಗೆ ಸಮಿತಿಗೆ ಆಗಿದ್ದ ಅಧ್ಯಕ್ಷರು, ಸದಸ್ಯರು ಹಾಗೂ ಇತರೆ ಮಾಹಿತಿ ಇದೆ. ಅದು ಅಷ್ಟು ಮುಖ್ಯವೆನ್ನಿಸದ ಕಾರಣ ಇಲ್ಲಿ ಬರೆದಿಲ್ಲ

**ವರದಿ**

೧.೨೯ ಈ ಸಮಿತಿಯು ಸಂವಿಧಾನ ಕೊಡಮಾಡಿರುವ ಅವಕಾಶಗಳು, ಭಾಷಾನೀತಿ, ಆಡಳಿತ ಕಾಯ್ದೆ ೧೯೬೩ ಮತ್ತು ಆ ನಿಟ್ಟಿನಲ್ಲಿ ಮಾಡಲಾದ ಕಾನೂನುಗಳು, ಸಮಿತಿಯ ಈ ಹಿಂದೀನ ಆರೂ ಭಾಗಗಳ ಶಿಫಾರಸ್ಸುಗಳ ಆಧಾರದ ಮೇಲೆ ರಾಷ್ಟ್ರಪತಿಗಳು ಹೊರಡಿಸಿರುವ ಸಂಬಂಧಪಟ್ಟ ಆದೇಶಗಳ ಬೆಳಕಿನಲ್ಲಿ ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಬಳಕೆಯ ಕುರಿತು ಪರಿಶೀಲನೆ ನಡೆಸಿ ಒಂದು ವಿಸ್ತೃತವಾದ ವರದಿಯನ್ನು ತಯಾರಿಸಿ ರಾಷ್ಟ್ರಪತಿಗಳಿಗೆ ಸಲ್ಲಿಸಿರುತ್ತದೆ. ಕಾಲದಿಂದ ಕಾಲಕ್ಕೆ ಇಲಾಖೆಗಳು ಹೊರದಿಸುವ ಸೂಚನೆಗಳು/ ನಿರ್ದೇಶನಗಳ ಮೇಲೆ ನಿರಂತರವಾಗಿ ಕಣ್ಣಿಡುವುದರ ಜೊತೆಗೆ ತನಗೆ ವಹಿಸಿರುವ ಕಾರ್ಯದ ಅಗಾಧತೆಯ ಹಿನ್ನೆಲೆಯಲ್ಲಿ ಅಂದರೆ ಆಡಳಿತ ಭಾಷಾನೀತಿಯನ್ನು ಸಮರ್ಪಕವಾಗಿ ಜಾರಿಮಾಡುವಲ್ಲಿ ಅಗತ್ಯವಿರುವ ಶಾಲಾ/ ಕಾಲೇಜು/ ವಿಶ್ವವಿದ್ಯಾಲಯಗಳಲ್ಲಿನ ಕಲಿಕಾ ಮಾಧ್ಯಮ, ಕೇಂದ್ರಸರ್ಕಾರಿ ಕೆಲಸಗಳಿಗಾಗಿ ನೇಮಕಾತಿ ಪರೀಕ್ಷೆಗಳು, ನೇಮಕಾತಿ ವಿಧಾನಗಳು, ಸೇವಾವಧಿಯಲ್ಲಿನ ತರಬೇತಿಗಳು, ಇಲಾಖಾ ಪರೀಕ್ಷೆಗಳ ಮಾಧ್ಯಮಗಳ ಬಗ್ಗೆಯೂ ಪರಿಶೀಲನೆ ನಡೆಸುತ್ತಿದೆ. ಅಗಾಧವಾದ ವ್ಯಾಪ್ತಿಯನ್ನು ಪರಿಗಣಿಸಿ ರಾಷ್ಟ್ರಪತಿಗಳಿಗೆ ಸಲ್ಲಿಸುವ ವರದಿ/ ಶಿಫಾರಸ್ಸುಗಳನ್ನು ಹಂತಹಂತವಾಗಿ ಸಲ್ಲಿಸಲು ತೀರ್ಮಾನಿಸಲಾಗಿದೆ.

## ೨. ಸಮಿತಿಯು ಸಲ್ಲಿಸಿರುವ ಹಿಂದಿನ ಏಳುಭಾಗಗಳ ವರದಿಯ ಮೇಲೆ ಕೈಗೊಂಡಿರುವ ಕ್ರಮಗಳು

೨.೧ ಸಂವಿಧಾನದ ೩೪೩(೧)ನೇ ವಿಧಿಯನ್ವಯ ದೇವನಾಗರಿ ಲಿಪಿಯಲ್ಲಿ ಬರೆಯಲ್ಪಡುವ ಹಿಂದೀಭಾಷೆಯನ್ನು ಭಾರತದ ಆಡಳಿತ ಭಾಷೆಯನ್ನಾಗಿ ಅಳವಡಿಸಿಕೊಳ್ಳಲಾಗಿದೆ. ೧೯೭೬ರಲ್ಲಿ ಆಡಳಿತ ಭಾಷೆ ಕಾಯ್ದೆಯ ೧೯೬೩, ವಿಭಾಗ ೪ರ ಅನ್ವಯ ಸಂಸತ್ತಿನ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ಮುಖ್ಯ ಉದ್ದೇಶ ಭಾರತದಲ್ಲಿ ಸರ್ಕಾರಿ ಕಛೇರಿಗಳಲ್ಲಿ ಹಿಂದೀ ಬಳಕೆಯ ಬಗ್ಗೆ ಅಧ್ಯಯನ ಮಾಡಿ ರಾಷ್ಟ್ರಪತಿಗಳಿಗೆ ವರದಿಯನ್ನು ಸಲ್ಲಿಸುವುದು ಹಾಗೂ ಮುಂದೆ ತೆಗೆದುಕೊಳ್ಳಬೇಕಾಗಿರುವ ಕ್ರಮಗಳ ಬಗ್ಗೆ ಶಿಫಾರಸ್ಸು ನೀಡುವುದು. ಈ ವರದಿಯನ್ನು ರಾಷ್ಟ್ರಪತಿಗಳು ಸಂಸತ್ತಿನ ಎರಡೂ ಸದನಗಳ ಮುಂದೀಡತಕ್ಕದ್ದು ಮತ್ತು ಎಲ್ಲಾ ರಾಜ್ಯಸರ್ಕಾರಗಳಿಗೂ ಕಳುಹಿಸಿಕೊಡತಕ್ಕದ್ದು. ರಾಷ್ಟ್ರಪತಿಗಳು ಸಂಸತ್ ವರದಿಯನ್ನು ಪರಿಶೀಲಿಸಿ, ರಾಜ್ಯಸರ್ಕಾರಗಳ ಅಭಿಪ್ರಾಯವೇನಾದರೂ ಇದ್ದಲ್ಲಿ ಪರಿಗಣಿಸಿ, ಪೂರ್ತಿಯಾಗಿ ಅಥವಾ ಕೆಲಭಾಗಗಳನ್ನು ಕುರಿತು

ನಿರ್ದೇಶನಗಳನ್ನು ಹೊರಡಿಸಬಹುದಾಗಿದೆ. ಈ ನಿರ್ದೇಶನಗಳು ಕಾಯ್ದೆಯ ೩ನೇ ಅಧಿನಿಯಮಕ್ಕೆ ಅನುಗುಣವಾಗಿಯೇ ಇರತಕ್ಕದ್ದು.

೨.೨ ಸಮಿತಿಯು ತನ್ನ ವರದಿಯನ್ನು ವಿವಿಧ ಭಾಗಗಳಲ್ಲಿ ರಾಷ್ಟ್ರಪತಿಗೆ ಸಲ್ಲಿಸಿದೆ. ಅದೇ ರೀತಿಯಾಗಿ ಸಮಿತಿಯು ತನ್ನ ಏಳು ವರದಿಯನ್ನು ಸಲ್ಲಿಸಿದೆ. ಆಡಳಿತ ಭಾಷಾ ಇಲಾಖೆಯ ಮೂಲಕ ಸಮಿತಿಯ ಮೊದಲ ೬ ವರದಿಗಳಿಗೆ ಸಂಬಂಧೀಸಿದಂತೆ ರಾಷ್ಟ್ರಪತಿಗಳ ಆದೇಶಗಳನ್ನೂ ಹೊರಡಿಸಲಾಗಿದೆ.

೨.೩ ಮೊದಲನೆಯ ವರದಿಯಲ್ಲಿ, ಸಮಿತಿಯು ಕೇಂದ್ರಸರ್ಕಾರೀ ಕಛೇರಿಗಳಲ್ಲಿ ಭಾಷಾಂತರದ ಏರ್ಪಾಟು, ಭಾಷಾಂತರ ತರಬೇತಿಗಳು, ಹೊಸಪದಗಳನ್ನು ಕಟ್ಟುವಿಕೆ ಹಾಗೂ ಅನೇಕ ಮಾದರಿ/ ಪೂರಕ ಮಾಹಿತಿಗಳ ದಾಖಲೆಗಳು ಇರಬೇಕಾದ/ ಇರುವುದರ ಬಗ್ಗೆ ಶಿಫಾರಸ್ಸು ಮಾಡಿತ್ತು. ಸಮಿತಿಯ ಮೊದಲನೆ ವರದಿಯನ್ನು ಜನರವಿ ೧೯೮೭ರಲ್ಲಿ ರಾಷ್ಟ್ರಪತಿಗಳಿಗೆ ಸಲ್ಲಿಸಲಾಯಿತು. ಈ ಭಾಷಾಂತರ ವಿವಿಧ ಇಲಾಖೆಗಳಿಗೆ ಸಂಬಂಧೀಸಿದ್ದರಿಂದ ಇಲಾಖೆಗಳ ಸಲಹೆಗಳನ್ನು ಸ್ವೀಕರಿಸಲಾಯಿತು. ಸಮಿತಿಯ ಬಹುಪಾಲು ಸಲಹೆಗಳನ್ನು ಕೇಂದ್ರಸರ್ಕಾರವು, ರಾಜ್ಯಸರ್ಕಾರಗಳ ಹಾಗೂ ಕೇಂದ್ರಾಡಾಳಿತ ಪ್ರದೇಶಗಳ ಸಲಹೆಗಳನ್ನು ಪಡೆದ ಮೇಲೆ ಅಂಗೀಕರಿಸಿತು. ಇದರ ಕುರಿತಂತೆ ಆಡಳಿತ ಭಾಷಾ ಇಲಾಖೆಯು ೩೦ನೇ ಡಿಸೆಂಬರ್ ೧೯೮೮ರಂದು ಆದೇಶ ಸಂಖ್ಯೆ: ೧/೨೦೦೧೨/೧/೮೭-OL(A)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು.

೨.೪ ಸಮಿತಿಯು ತನ್ನ ಎರಡನೆ ವರದಿಯಲ್ಲಿ ಆಡಳಿತಾತ್ಮಕ ಕೆಲಸಗಳಿಗೆ ಬೇಕಾಗುವ ಸಲಕರಣೆಗಳ ಬಗ್ಗೆ ಹೇಳುತ್ತದೆ. ದೇವನಾಗರಿ ಲಿಪಿ ದೊರಕುವಂತೆ ಮಾಡುವುದು, ತರಬೇತಿ ಹೊಂದಿದ ಸಿಬ್ಬಂದಿಗಳು ದೊರಕುವಂತೆ ಮಾಡುವುದು, ಹಾಗೂ ವಿವಿಧ ಉಪಕರಣಗಳ ತಯಾರಿಸುವಿಕೆ ಹಾಗೂ ಸಾಗಾಣಿಕೆಯ ಬಗ್ಗೆ ಶಿಫಾರಸ್ಸುಗಳನ್ನು ಮಾಡಿತು. ಇದನ್ನು ಜುಲೈ ೧೯೮೭ರಲ್ಲಿ ರಾಷ್ಟ್ರಪತಿಗಳಿಗೆ ಸಲ್ಲಿಸಿತು. ಈ ಭಾಷಾಂತರ ವಿವಿಧ ಇಲಾಖೆಗಳಿಗೆ ಸಂಬಂಧೀಸ್ಸಿದ್ದರಿಂದ ಇಲಾಖೆಗಳ ಸಲಹೆಗಳನ್ನು ಸ್ವೀಕರಿಸಲಾಯಿತು. ಸಮಿತಿಯ ಬಹುಪಾಲು ಸಲಹೆಗಳನ್ನು ಕೇಂದ್ರಸರ್ಕಾರವು, ರಾಜ್ಯಸರ್ಕಾರಗಳ ಹಾಗೂ ಕೇಂದ್ರಾಡಳಿತ ಪ್ರದೇಶಗಳ ಸಲಹೆಗಳನ್ನು ಪಡೆದ ಮೇಲೆ ಅಂಗೀಕರಿಸಿತು. ಇದರ ಕುರಿತಂತೆ

ಆಡಳಿತ ಭಾಷಾ ಇಲಾಖೆಯು ೨೯ ಮಾರ್ಚ್ ೧೯೯೦ರಂದು ಆದೇಶ ಸಂಖ್ಯೆ: ೧೨೦೧೫/೩೪/೮೭-OL(TC)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು.

೨.೫ ಸಮಿತಿಯು ತನ್ನ ಮೂರನೇ ಭಾಗದಲ್ಲಿ ಕೇಂದ್ರಸರ್ಕಾರದ ಉದ್ಯೋಗಿಗಳಿಗೆ ನೀಡಲಾಗುವ ಹಿಂದೀಭಾಷೆಯ ತರಬೇತಿ ಹಾಗೂ ಈ ತರಬೇತಿಗಳನ್ನು ಹಿಂದೀಮಾಧ್ಯಮದಲ್ಲಿ ಮಾಡಲು ಬೇಕಾಗುವ ಏರ್ಪಾಡುಗಳ ಬಗ್ಗೆ ಶಿಫಾರಸ್ಸುಗಳನ್ನು ನೀಡಲಾಗಿದೆ. ಈ ವರದಿಯನ್ನು ರಾಷ್ಟ್ರಪತಿಗಳಿಗೆ ಫೆಬ್ರುವರಿ ೧೯೮೯ರಲ್ಲಿ ಸಲ್ಲಿಸಲಾಯಿತು. ಈ ಭಾಷಾಂತರ ವಿವಿಧ ಇಲಾಖೆಗಳಿಗೆ ಸಂಬಂಧೀಸಿದ್ದರಿಂದ ಇಲಾಖೆಗಳ ಸಲಹೆಗಳನ್ನು ಸ್ವೀಕರಿಸಲಾಯಿತು. ರಾಜ್ಯಸರ್ಕಾರಗಳ ಹಾಗೂ ಕೇಂದ್ರಾಡಾಳಿತ ಪ್ರದೇಶಗಳ ಸಲಹೆಗಳನ್ನು ಪಡೆದ ಮೇಲೆ ಸರ್ಕಾರದ ಬಹುತೇಕ ಸಲಹೆಗಳನ್ನು ಸರ್ಕಾರ ಸ್ವೀಕರಿಸಿತು. ಇದರ ಕುರಿತಂತೆ ಆಡಳಿತ ಭಾಷಾ ಇಲಾಖೆಯು ೪ನೇ ನವಂಬರ್ ೧೯೯೧ರಂದು ಆದೇಶ ಸಂಖ್ಯೆ: ೧೩೦೧೫/೧/೯೧-OL(D)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು. ಎಲ್ಲಾ ತರಬೇತಿ ಕೇಂದ್ರಗಳ ಮುಖ್ಯಸ್ಥರು ಸಲ್ಲಿಸುವ ಎಸಿಆರ್ ವರದಿಯಲ್ಲಿ ಆಯಾ ಸಂಸ್ಥೆಗಳಲ್ಲಿ ಹಿಂದೀ ಬಳಕೆಯನ್ನು ಹೆಚ್ಚಿಸಲು ಕೈಗೊಂಡಿರುವ ಕ್ರಮಗಳ ಬಗ್ಗೆ ಬರೆಯತಕ್ಕದ್ದು.

೨.೬ ಸಮಿತಿಯು ತನ್ನ ನಾಲ್ಕನೇ ಭಾಗದಲ್ಲಿ ದೇಶದ ವಿವಿಧೆಡೆಗಳಲ್ಲಿರುವ ಕೇಂದ್ರಸರ್ಕಾರಿ ಕಛೇರಿಗಳು ಹಾಗೂ ಅಧೀನ ಕಛೇರಿಗಳಲ್ಲಿ ಹಿಂದೀ ಬಳಕೆಯ ಬಗ್ಗೆ ಶಿಫಾರಸ್ಸುಗಳನ್ನು ನೀಡಿದೆ. ಈ ವರದಿಯನ್ನು ರಾಷ್ಟ್ರಪತಿಗಳಿಗೆ ನವೆಂಬರ್ ೧೯೮೯ರಲ್ಲಿ ಸಲ್ಲಿಸಲಾಯಿತು. ಈ ವರದಿಯನ್ನು ಎಲ್ಲಾ ರಾಜ್ಯಸರ್ಕಾರಗಳಿಗೂ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೂ ಕಳುಹಿಸಿ ಕೊಡಲಾಯಿತು. ಈ ವರದಿಗೆ ಸಂಬಂಧೀಸಿದಂತೆ ಬಂದ ಸಲಹೆಗಳನ್ನು ಪರಿಗಣಿಸಿ ಈ ವರದಿಯನ್ನು ಸಂಪೂರ್ಣವಾಗಿ ಅಥವಾ ಸಲಹೆಗಳನ್ನು ಸೇರಿಸಿ ಸರ್ಕಾರ ಅಂಗೀಕರಿಸಿತು. ಇದರ ಕುರಿತಂತೆ ಆಡಳಿತ ಭಾಷಾ ಇಲಾಖೆಯು ೨೪ನೇ ಜನವರಿ ೧೯೯೨ ರಂದು ಆದೇಶ ಸಂಖ್ಯೆ: ೧೨೦೧೯/೧೦/೯೧-OL(Int)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು.

೨.೭ ಸಮಿತಿಯು ತನ್ನ ಐದನೇ ವರದಿಯಲ್ಲಿ ವಿವಿಧ ನ್ಯಾಯಾಲಗಳು ಹಾಗೂ ನ್ಯಾಯಮಂಡಳಿಗಳಲ್ಲಿ ಉಪಯೋಗಿಸುವ ಭಾಷೆಗಳ ಬಗ್ಗೆ ಶಿಫಾರಸ್ಸುಗಳನ್ನು ನೀಡಿತು. ಈ ವರದಿಯನ್ನು ರಾಷ್ಟ್ರಪತಿಗಳಿಗೆ ಮಾರ್ಚ್ ೧೯೯೩ರಲ್ಲಿ ಸಲ್ಲಿಸಲಾಯಿತು. ಈ ವರದಿಯನ್ನು ಎಲ್ಲಾ ರಾಜ್ಯಸರ್ಕಾರಗಳಿಗೂ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಕಳುಹಿಸಿಕೊಡಲಾಯಿತು. ಈ ವರದಿಗೆ ಸಂಬಂಧೀಸಿದಂತೆ ಬಂದ ಸಲಹೆಗಳನ್ನು ಪರಿಗಣಿಸಿ ಈ ವರದಿಯ ಕೆಲವು ಶಿಫಾರಸ್ಸುಗಳನ್ನು ಇಡಿಯಾಗಿ, ಕೆಲವನ್ನು ಭಾಗಶಃ ಪರಿಗಣಿಸಿ ಹಾಗೂ ಕೆಲವನ್ನು ತಿರಸ್ಕರಿಸಿ ಸರ್ಕಾರ ಸ್ವೀಕರಿಸಿತು. ಇದರ ಕುರಿತಂತೆ ಆಡಳಿತ ಭಾಷಾ ಇಲಾಖೆಯು ೨೪ನೇ ನವೆಂಬರ್ ೧೯೯೮ ರಂದು ಆದೇಶ ಸಂಖ್ಯೆ: I/೨೦೦೧೨/೪/೯೨-O.L.(P-I)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು. ನ್ಯಾಯಾಲಯಗಳ ವ್ಯವಹಾರಗಳಲ್ಲಿ ಬಳಸಬೇಕಾಗಿರುವ ಭಾಷೆಯ ಬಗ್ಗೆ ೫ ಹಾಗೂ ೬ನೇ ವರದಿಯಲ್ಲಿ ಮಾತನಾಡಲಾಗಿದೆ. ಕೆಲವು ಸಲಹೆಗಳನ್ನು ಸಂಪೂರ್ಣವಾಗಿ ಸ್ವೀಕರಿಸಲಾಗಿದೆ. ಈ ಶಿಫಾರಸ್ಸುಗಳಂತೆ ಕೆಲವು ನ್ಯಾಯಾಲಯಗಳು ತಮ್ಮ ತೀರ್ಪುಗಳನ್ನು ಹಿಂದೀಯಲ್ಲಿ ನೀಡುತ್ತಿದ್ದವು, ಆದರೆ ಕಾಲ ಸರಿದಂತೆ ಮತ್ತೆ ಇಂಗ್ಲೀಶ್ ಭಾಷೆಯನ್ನು ಬಳಸುತ್ತಿವೆ. ಆದ್ದರಿಂದ ಸಮಿತಿಯು ನ್ಯಾಯಾಲಯಗಳಲ್ಲಿ ಹಿಂದೀಬಳಕೆಯನ್ನು ಹೆಚ್ಚಿಸಬೇಕೆಂದು ಒತ್ತಾಯಿಸುತ್ತದೆ. ‘‘ಎ’’ ವಲಯದಲ್ಲಿರುವ ಕೋರ್ಟ್‌ಗಳ ಮೂಲಕ ಇದನ್ನ ಶುರು ಮಾಡಿ, ನಂತರ ಬೇರೆ ವಲಯಗಳಿಗೆ ವಿಸ್ತರಿಸಬೇಕು.

೨.೮ ಸಮಿತಿ ತನ್ನ ಆರನೇ ವರದಿಯಲ್ಲಿ ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಉಪಯೋಗಿಸುವ ಬಗ್ಗೆ, ರಾಜ್ಯ ಹಾಗೂ ಕೇಂದ್ರಸರ್ಕಾರಗಳ ನಡುವೆ ಸಂವಹನಕ್ಕಾಗಿ ಹಿಂದೀ ಭಾಷೆಯ ಉಪಯೋಗ, ವಿದೇಶದಲ್ಲಿರುವ ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಬಳಕೆಯ ಬಗ್ಗೆ ಶಿಫಾರಸ್ಸುಗಳನ್ನು ನೀಡಿತು. ಇದರ ಕುರಿತಂತೆ ಆಡಳಿತ ಭಾಷಾ ಇಲಾಖೆಯು ೧೭ನೇ ಸೆಪ್ಟಂಬರ್ ೨೦೦೪ ರಂದು ಸಂಖ್ಯೆ: ೧೨೦೨೧/೦೨/೨೦೦೩–OL(Imp.2)ನ್ನು ರಾಷ್ಟ್ರಪತಿಗಳ ಅಂಕಿತದೊಂದೀಗೆ ಹೊರಡಿಸಿತು. ಆಡಳಿತಾ ಭಾಷಾ ಇಲಾಖೆಯು ಸಮಿತಿಯ ಶಿಫಾರಸ್ಸಿನ ಆಧಾರದ ಮೇಲೆ ‘‘ಹಿಂದೀ ಸಲಹಾ ಸಮಿತಿ’’ಯ ಸಭೆಯನ್ನು ವರ್ಷಕ್ಕೊಮ್ಮೆ ನಡೆಸುವುದು ತನ್ನ ಉದ್ದೇಶ ಪೂರೈಸಲು ಸಾಲದು, ಹಾಗಾಗಿ ಇಲಾಖೆಯ ಸಚಿವರುಗಳ ಮಟ್ಟದದಲ್ಲಿ ಎರಡು ಸಭೆಗಳನ್ನು ನಡೆಸಬೇಕು ಎಂದು

ಹೊರಡಿಸಿದ್ದ ಆದೇಶವನ್ನು ಸಮಿತಿಯು ಒಪ್ಪದೆ ಮೂರುಬಾರಿಯಾದರೂ ಸಭೆ ಸೇರಿಸಬೇಕೇಂದ ತನ್ನ ಸಲಹೆಯನ್ನು ಪುನರುಚ್ಚರಿಸಿತು.

೨.೯ ಸಮಿತಿಯು ತನ್ನ ಏಳನೇ ವರದಿಯಲ್ಲಿ ೪ ವಿಭಾಗಗಳಲ್ಲಿ ಶಿಫಾರಸ್ಸುಗಳನ್ನು ನೀಡಿದೆ. ಈ ಶಿಫಾರಸ್ಸುಗಳು ಆಡಳಿತ ಭಾಷಾ ಕಾಯ್ದೆಯ ಅನುಷ್ಠಾನದ ಮೇಲ್ವಿಚಾರಣೆಗಾಗಿ ವಿವಿಧ ಸಮಿತಿಗಳ ರಚನೆಗೆ ಸಂಬಂಧೀಸಿದ್ದಾಗಿದೆ. ಈ ಕುರಿತು ೨೦೦೨ರಲ್ಲಿ I/೨೦೦೧೨/೦೫/೨೦೦೨-OL(P-1)ರ ಮೂಲಕ ಆದೇಶವನ್ನು ಹೊರಡಿಸಲಾಗಿದೆ. ಇದರೊಟ್ಟಿಗೆ ಇಲಾಖಾವಾರು, ವಲಯವಾರು ಪರಿವೀಕ್ಷಣೆ ಮಾಡಿದ ೯೩೮ ಕಛೇರಿಗಳ ಬಗ್ಗೆಯೂ ಮೌಖಿಕವಾಗಿ ಸಮೀಕ್ಷಿಸಲ್ಪಟ್ಟ ೨೬೯ಕ್ಕೂ ಹೆಚ್ಚು ಗಣ್ಯರ ಸಮೀಕ್ಷಾ ಮಾಹಿತಿ ಇದೆ. ಈ ಭಾಗದಲ್ಲಿ ಮೂಲ ಹಿಂದೀ ಬರಹವನ್ನು ಹೆಚ್ಚಿಸುವುದರ ಬಗ್ಗೆಯೂ ವರದಿಯಿದೆ. ಜಾಗತೀಕರಣದ ಆಯಾಮವನ್ನು ಪರಿಗಣಿಸಿ ಹಿಂದೀಯನ್ನು ಬಳಸುವ ಬಗ್ಗೆ ಈ ವರದಿಯಲ್ಲಿ ಹೇಳಲಾಗಿದೆ.

೨.೯.೧ ಎಂಟನೇ ವರದಿಯಲ್ಲಿ ನಾಲ್ಕು ವಿಭಾಗಗಳಿವೆ. ಮೊದಲೆರಡು ವಿಭಾಗಗಳಲ್ಲಿ ಪರಿಚಯದ ನಂತರ ಇಲಾಖಾವಾರು ಹಾಗೂ ವಲಯವಾರು ಹಿಂದೀಬಳಕೆಯ ಬಗ್ಗೆ ಪರಾಮರ್ಶಿಸಲಾಗಿದೆ. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಎಷ್ಟರಮಟ್ಟಿಗೆ ಕಾಯ್ದೆ ೩(೩)ನ್ನು ಪಾಲನೆ ಮಾಡಲಾಗುತ್ತಿದೆಯೆಂದು ಇದರಲ್ಲಿದೆ. ಹಿಂದೀ ಪ್ರಸಾರದ ಉಪಸಮಿತಿಗಳು ಮತ್ತು ತಾಲ್ಲೂಕು ಮಟ್ಟದ ಹಿಂದೀ ಕಾರ್ಯಕಾರಿ ಸಮಿತಿ(ಟೋಲಿಕ್)ಗಳ ಬಗ್ಗೆಯೂ ಇದರಲ್ಲಿದೆ.
ಸಮಿತಿಯು ಈ ಕೆಳಗಿನ ವಿಷಯಗಳ ಬಗ್ಗೆ ವಿಮರ್ಶೆ ನಡೆಸುತ್ತದೆ:

೧. ಕೇಂದ್ರ ಕಛೇರಿಗಳಲ್ಲಿ ಪುಸ್ತಕ ಖರೀದಿಸುವದು.
೨. ಗಣಕೀಕರಣ ಹಾಗೂ ಹಿಂದೀ.
೩. ನೇಮಕಾತಿಯಲ್ಲಿ ಕಡ್ಡಾಯವಾಗಿ ಹಿಂದೀ ಬಳಕೆ.
೪. ಕೇಂದ್ರಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಾನ.
೫. ಶೈಕ್ಷಣಿಕ ಹಾಗೂ ತರಬೇತಿ ಕೇಂದ್ರಗಳಲ್ಲಿ ಹಿಂದೀ ಮಾಧ್ಯಮದ ಲಭ್ಯತೆ.
೬. ಸಾರ್ವಜನಿಕ ಉದ್ದಿಮೆಗಳ ಜಾಹಿರಾತಿಗಾಗಿ ಹಿಂದೀ ಬಳಕೆ.

೭. ಜಾಹೀರಾತಿಗಾಗಿ ಕೇಂದ್ರ ಸರ್ಕಾರದ ಕಛೇರಿಗಳು ಮಾಡುವ ಖರ್ಚಿನ ಲೆಕ್ಕ ಹಿಂದೀಯಲ್ಲಿ.

೨.೯.೨ ಎಂಟನೇ ವರದಿಯು ೧೭ ವಿಭಾಗಳನ್ನು ಹೊಂದಿದೆ ಹಾಗೂ ಆಳವಾದ ಅಧ್ಯಯನದ ನಂತರ ೭೫ ಶಿಫಾರಸ್ಸುಗಳನ್ನು ಮಾಡಲಾಗಿದೆ. ಈ ವರದಿಯ ನಾಲ್ಕನೇ ಭಾಗದಲ್ಲಿ ಅವುಗಳನ್ನು ಕೊಡಲಾಗಿದೆ.

೨.೯.೩ ಸಮಿತಿ ಮತ್ತದರ ಮೂರು ಉಪಸಮಿತಿಗಳು ತಮ್ಮ ಕೆಲಸವನ್ನು ಧಿಡೀರ್ ಭೇಟಿಗಳ ಮೂಲಕ ಪ್ರಾಮಾಣಿಕವಾಗಿ ಮಾಡುತ್ತಿವೆ. ತಮ್ಮ ಭೇಟಿಯ ಸಮಯದಲ್ಲಿ ಹಿಂದೀಬಳಕೆಯ ಬಗ್ಗೆ ತೆಗೆದುಕೊಂಡಿರುವ ಕ್ರಮಗಳನ್ನು ಪರೀಕ್ಷಿಸಿವೆ. ಇದರ ಆಧಾರದ ಮೇಲೆ ಇದುವರೆಗೂ ಏಳು ವರದಿಗಳನ್ನು ನೀಡಿದ್ದು ಅವುಗಳಲ್ಲಿ ಆರರ ಕುರಿತು ರಾಷ್ಟ್ರಪತಿಗಳ ಅಂಕಿತದ ಆದೇಶ ಹೊರಬಿದ್ದಿದೆ. ಈ ಆದೇಶವನ್ನು ಇನ್ನೂ ಹಲವಾರು ಸಂಸ್ಥೆಗಳು ಪಾಲಿಸಿಲ್ಲದಿರುವುದು ಗಮನಕ್ಕೆ ಬಂದೀದ್ದು ರಾಷ್ಟ್ರಪತಿಗಳ ಆದೇಶವನ್ನು ಪಾಲಿಸುವುದನ್ನು ಇಲಾಖೆಗಳಿಗೆ ಕಡ್ಡಾಯಪಡಿಸಬೇಕು. ಇನ್ನೂ ಜಾರಿಯಾಗದ ಪರಿಶೀಲನೆಯಲ್ಲಿರುವ ಎಲ್ಲಾ ಸಲಹೆಗಳನ್ನು ಶೀಘ್ರವಾಗಿ ಅಂಗೀಕರಿಸಬೇಕು. ಗೃಹಸಚಿವಾಲಯವು ಈ ದಿಕ್ಕಿನಲ್ಲಿ ಕಾರ್ಯೋನ್ಮುಖವಾಗತಕ್ಕದ್ದು.

## ೩. ವರದಿಯ ಎಂಟನೇ ಭಾಗ

೩.೧ ೧೯೭೬ರಲ್ಲಿ ರಚಿಸಲಾದ ಸಂಸತ್ ಸಮಿತಿಯು ಕೇಂದ್ರಸರ್ಕಾರಿ ಇಲಾಖೆಗಳು ಮತ್ತು ಕಛೇರಿಗಳಲ್ಲಿ ಹಿಂದೀಬಳಕೆಯ ಬಗ್ಗೆ ಅಧ್ಯಯನ ಮಾಡಿ ಶಿಫಾರಸ್ಸುಗಳ ಸಹಿತವಾಗಿ ವರದಿಗಳನ್ನು ಕಾಲದಿಂದ ಕಾಲಕ್ಕೆ ರಾಷ್ಟ್ರಪತಿಗಳಿಗೆ ಸಲ್ಲಿಸುತ್ತಿದೆ. ಅದರ ಆಧಾರದ ಮೇರೆಗೆ ರಾಷ್ಟ್ರಪತಿಗಳು ಆದೇಶಗಳನ್ನೂ ನೀಡಿದ್ದಾರೆ. ಏಳನೆ ಭಾಗದ ವರದಿಗೆ ಸಂಬಂಧೀಸಿದಂತೆ ಇನ್ನೂ ಆದೇಶಗಳನ್ನು ನೀಡಿಲ್ಲ. ಇದುವರೆಗೆ ನೀಡಲಾದ ಸಲಹೆಗಳನ್ನು ಮತ್ತು ಆದೇಶಗಳನ್ನು ಒಂದೆಡೆ ಪಟ್ಟಿ ಮಾಡಿ ಅನುಬಂಧದಲ್ಲಿ ಕೊಡಲಾಗಿದೆ.

೩.೧.೧ ಸಮಿತಿಯು ತಾನು ಮಾಡಿರುವ ಶಿಫಾರಸ್ಸುಗಳ ಆಧಾರದ ಮೇರೆಗೆ ರಾಷ್ಟ್ರಪತಿಗಳು ಹೊರಡಿಸಿರುವ ಆದೇಶಗಳು ಪರಿಣಾಮಕಾರಿಯಾಗಿರುವುದನ್ನು ಕಂಡುಕೊಂಡಿದೆ. ಆಡಳಿತ ಭಾಷೆ ಕಾಯ್ದೆ ೧೯೬೩ ಹಾಗೂ ಆಡಳಿತ ಭಾಷೆ

ಕಾಯ್ದೆ, ೧೯೭೬ರಲ್ಲಿ ಮಾಡಿರುವ ನಿಯಮಗಳನ್ನು ಜಾರಿಗೆ ತರಲು ಇರುವ ತೊಡಕುಗಳನ್ನು ನಿವಾರಿಸುವಲ್ಲಿ ಇದು ಸಾಕಷ್ಟು ಯಶಸ್ವಿಯಾಗಿದೆ.

೩.೧.೨ ಭಾರತದಲ್ಲಿ ಸರ್ಕಾರಿ ಕಛೇರಿಗಳಲ್ಲಿ ಹಂತ ಹಂತವಾಗಿ ಹಿಂದೀಯ ಬಳಕೆಯನ್ನು ಹೆಚ್ಚಿಸಲು ಗೃಹ ಮಂತ್ರಾಲಯ ಹಾಗೂ ಆಡಳಿತ ಭಾಷಾ ಇಲಾಖೆಗಳಲ್ಲದೇ ಇನ್ನೂ ಅನೇಕ ಸಮಿತಿಗಳು ಈ ಕೆಲಸದಲ್ಲಿ ಸಹಕರಿಸುತ್ತಿವೆ. ಆದರೆ ಆಡಳಿತ ಭಾಷಾ ಸಂಸತ್ ಸಮಿತಿಯು ( Committee of Parliament on Official Language) ಮಾತ್ರಾ ಈ ವಿಷಯವನ್ನು ಭಿನ್ನವಾಗಿ ಸಮಗ್ರವಾದ ದೃಷ್ಟಿಯಿಂದ ನೋಡುತ್ತದೆ. ಸಮಿತಿಯು ಹಿಂದೀಯ ಪ್ರಚಾರಕ್ಕಾಗಿ ಎಲ್ಲಾ ಆಯಾಮವನ್ನು ಒಳಗೊಳ್ಳುವಂತೆ ನೋಡುತ್ತದೆ, ಅವರು ಹಿಂದೀ ಅಥವಾ ಹಿಂದೀಯೇತರ ಜನರಿರಬಹುದು, ಹಿಂದೀ/ ಹಿಂದೀಯೇತರ ಪ್ರದೇಶಗಳಿರಬಹುದು, ಕೆಲಸದ ವಿಧಾನ, ಪ್ರಚಾರಕ್ಕೆ ಪರಿಸ್ಥಿತಿ ಸರಿಯಾಗಿದೆಯೋ ಇಲ್ಲವೋ... ಈ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನದಲ್ಲಿಟ್ಟುಕೊಂಡು, ಪ್ರತಿಯೊಂದು ಸಮಸ್ಯೆಗೂ ಪರಿಹಾರ ಕಂಡುಹಿಡಿಯುವ ಪ್ರಯತ್ನ ಮಾಡಲಾಗಿದೆ. ಇದಾದ ನಂತರ ಸಮಿತಿಯು ತನ್ನ ವರದಿಯನ್ನು ಶಿಫಾರಸ್ಸುಗಳ ಮೂಲಕ ರಾಷ್ಟ್ರಪತಿಗಳಿಗೆ ಸಲ್ಲಿಸಿದೆ. ಇದರ ಜೊತೆಗೆ ಸಮಿತಿಯು ಕೇಂದ್ರ ಸರ್ಕಾರದ ಉನ್ನತಮಟ್ಟದ ಅಧಿಕಾರಿಗಳ ಜೊತೆ, ಗೃಹ ಮಂತ್ರಾಲಯ ಹಾಗೂ ಆಡಳಿತ ಭಾಷೆ ಇಲಾಖೆಯ ಜೊತೆ ಮಾತುಕತೆ ನಡೆಸಿ ತಕ್ಷಣದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನಿಸಿದೆ.

೩.೧.೩ ರಾಷ್ಟ್ರಪತಿಗಳಿಗೆ ಸಲ್ಲಿಸುವ ವರದಿಯನ್ನು ತಯಾರು ಮಾಡುವಾಗ ಸಮಿತಿಯು  ಹಿಂದೀಭಾಷೆಯ ಬಳಕೆಯನ್ನು ತಿಳಿಯಲು ಹಲವಾರು ರೀತಿಯಲ್ಲಿ ಪರಿಶೀಲನೆ ನಡೆಸುತ್ತದೆ. ಉದಾಹರಣೆಗೆ ಸಮಿತಿಯು ತನ್ನ ಮೂರು ಉಪ ಸಮಿತಿಗಳ ಮೂಲಕ ದೇಶಾದ್ಯಂತ ಕಛೇರಿಗಳಿಗೆ, ಅಧೀನ ಸಂಸ್ಥೆಗಳಿಗೆ, ಬ್ಯಾಂಕ್‌ಗಳಿಗೆ, ತರಬೇತಿ ಕೇಂದ್ರಗಳಿಗೆ ಭೇಟಿ ನೀಡಿ ಖುದ್ದು ಸ್ಥಳ ಪರೀಶಿಲನೆ ನಡೆಸುತ್ತದೆ. ಇದಲ್ಲದೇ ವಿವಿಧ ಇಲಾಖೆಗಳ ಮುಖ್ಯಕಾರ್ಯದರ್ಶಿಗಳು, ವಿಶ್ವವಿದ್ಯಾಲಯದ ಕುಲಪತಿಗಳು, ರಾಜ್ಯಗಳ ಮುಖ್ಯಮಂತ್ರಿಗಳು, ರಾಜ್ಯಪಾಲರು, ಶಿಕ್ಷಣ ತಜ್ಞರನ್ನು ಮಾತನಾಡಿಸಿ ಅವರಿಂದ ಸಲಹೆ ಸೂಚನೆಗಳನ್ನು ಪಡೆಯಲಾಗಿದೆ. ಇದಲ್ಲದೇ ತಾಲ್ಲೂಕುಮಟ್ಟದ ಆಡಳಿತಭಾಷಾ ಸಮಿತಿ(ಟೋಲಿಕ್)ಗಳಂತಹ ವಿವಿಧ ಸಮಿತಿಗಳನ್ನು ರಚಿಸಿ ಅವುಗಳ ಮೂಲಕ

ಹಿಂದೀಯನ್ನು ದೇಶಾದ್ಯಂತ ಆಡಳಿತ ಭಾಷೆಯನ್ನಗಿ ಉಪಯೋಗಿಸಲಾಗುತ್ತಿದೆಯೇ ಎನ್ನುವುದರ ಬಗ್ಗೆ ವಿಚಾರಿಸಲಾಗುತ್ತಿತ್ತು.

೩.೧.೪ ಈ ವರದಿಯನ್ನು ತಯಾರಿಸಲು ಕರಡು ಹಾಗೂ ಸಾಕ್ಷಿ ಉಪಸಮಿತಿ ಮತ್ತು ಸಂಸತ್ ಸಮಿತಿಯ ಮೂರು ಉಪಸಮಿತಿಗಳು ಸೇರಿ ಕೇಂದ್ರಸರ್ಕಾರದ ೧೨೦೫ ಕಛೇರಿಗಳಿಗೆ ಭೇಟಿ ಕೊಟ್ಟು ಪರೀಶಿಲಿಸಿವೆ. ಪ್ರಶ್ನೆಗಳ ಮೂಲಕ ಮಾಹಿತಿಯನ್ನು ಕಲೆಹಾಕಲಾಗುತ್ತಿತ್ತು. ಇದರ ಜೊತೆಗೆ ಕರಡು ಮತ್ತು ಸಾಕ್ಷಿ ಉಪಸಮಿತಿ ಅಲ್ಲಿಯ ಊರಿನ ಆಡಳಿತ ಭಾಷಾ ಅನುಷ್ಠಾನ ಸಮಿತಿಯ ಮುಖ್ಯಸ್ಥರನ್ನು ಭೇಟಿ ಮಾಡಿ ಅವರಿಂದ ಬೇಡಿಕೆ ಹಾಗೂ ಸೂಚನೆಗಳನ್ನು ಪಡೆಯಲಾಗುತ್ತಿತ್ತು. ಸಂಸತ್ ಸಮಿತಿಯು ರಾಜ್ಯಸಚಿವರನ್ನು, ಕೇಂದ್ರಾಡಳಿತದ ಅಧಿಕಾರಿಗಳನ್ನು, ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳ ಮುಖ್ಯ ಕಾರ್ಯದರ್ಶಿಗಳನ್ನು ಭೇಟಿ ಮಾಡಿ ಅವರಿಂದ ಹಿಂದೀ ಅನುಷ್ಠಾನದ ಬಗ್ಗೆ ಮಾಹಿತಿ ಪಡೆಯಿತು. ಹೀಗೆ ಇದರಿಂದ ಸಮಿತಿಗೆ ಸಚಿವಾಲಯವಾರು ಹಾಗೂ ಪ್ರಾದೇಶಿಕವಾರು ಮಾಹಿತಿ ಕಲೆ ಹಾಕಿತು ಹಾಗೂ ಈ ಮಾಹಿತಿಯನ್ನು ಪರಿಶೀಲಿಸಿತು. ಮಾಹಿತಿ ಪರಿಶೀಲನೆಯ ನಂತರ ಇಲಾಖಾವಾರು ಪಟ್ಟಿಯನ್ನು ಸಮಿತಿ ತಯಾರಿಸಿದೆ.

೩.೨ ತನ್ನ ೮ನೇ ವರದಿಯನ್ನು ತಯಾರಿಸಲು ಸಮಿತಿಯು ತನ್ನ ಎಲ್ಲಾ ಸದಸ್ಯರ ಸಭೆಯನ್ನು ೧೩–೮–೨೦೦೪ರಲ್ಲಿ ಕರೆಯಿತು. ಹಿಂದೀಭಾಷೆಯನ್ನು ಸರಿಯಾಗಿ ಹಾಗೂ ಉಪಯುಕ್ತವಾಗಿ ಬಳಸುವಂತೆ ಮಾಡಲು ಇರುವ ಇಂದಿನ ತೊಡಕುಗಳನ್ನು ಅರಿತು ಅದಕ್ಕೆ ತಕ್ಕಂತೆ ಶಿಫಾರಸ್ಸುಗಳನ್ನು ರಾಷ್ಟ್ರಪತಿಗಳಿಗೆ ಸಲ್ಲಿಸಲು ತೀರ್ಮಾನಿಸಲಾಯಿತು. ಇದಾದ ನಂತರ ಇನ್ನೆರೆಡು ಬಾರಿ ಸಭೆ ಸೇರಿದ ಸಮಿತಿ ತನ್ನ ವರದಿಯನ್ನು ೧೬–೫–೨೦೦೫ರಂದು ಅಂತಿಮಗೊಳಿಸಿತು.

೩.೩ ಎಂಟನೇ ವರದಿಯಲ್ಲಿ ನಾಲ್ಕು ವಿಭಾಗಗಳಿವೆ. ಮೊದಲೆರಡು ವಿಭಾಗಗಳಲ್ಲಿ ಪರಿಚಯದ ನಂತರ ಇಲಾಖಾವಾರು ಹಾಗೂ ವಲಯವಾರು ಹಿಂದೀಬಳಕೆಯ ಬಗ್ಗೆ ಪರಾಮರ್ಶಿಸಲಾಗಿದೆ. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಎಷ್ಟರಮಟ್ಟಿಗೆ ಕಾಯ್ದೆ ೩(೩)ನ್ನು ಪಾಲನೆ ಮಾಡಲಾಗುತ್ತಿದೆಯೆಂದು ಇದರಲ್ಲಿದೆ. ಹಿಂದೀ ಪ್ರಸಾರದ ಉಪಸಮಿತಿಗಳು ಮತ್ತು ತಾಲ್ಲೂಕು ಮಟ್ಟದ ಹಿಂದೀ ಕಾರ್ಯಕಾರಿ ಸಮಿತಿ(ಟೋಲಿಕ್)ಗಳ ಬಗ್ಗೆಯೂ ಇದರಲ್ಲಿದೆ.

ಸಮಿತಿಯು ಈ ಕೆಳಗಿನ ವಿಷಯಗಳ ಬಗ್ಗೆ ವಿಮರ್ಶೆ ನಡೆಸುತ್ತದೆ:

೧. ಕೇಂದ್ರ ಕಛೇರಿಗಳಲ್ಲಿ ಪುಸ್ತಕ ಖರೀದಿಸುವದು.

೨. ಗಣಕೀಕರಣ ಹಾಗೂ ಹಿಂದೀ.

೩. ನೇಮಕಾತಿಯಲ್ಲಿ ಕಡ್ಡಾಯವಾಗಿ ಹಿಂದೀ ಬಳಕೆ.

೪. ಕೇಂದ್ರಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಾನ.

೫. ಶೈಕ್ಷಣಿಕ ಹಾಗೂ ತರಬೇತಿ ಕೇಂದ್ರಗಳಲ್ಲಿ ಹಿಂದೀ ಮಾಧ್ಯಮದ ಲಭ್ಯತೆ.

೬. ಸಾರ್ವಜನಿಕ ಉದ್ದಿಮೆಗಳ ಜಾಹಿರಾತಿಗಾಗಿ ಹಿಂದೀ ಬಳಕೆ.

೭. ಜಾಹೀರಾತಿಗಾಗಿ ಕೇಂದ್ರ ಸರ್ಕಾರದ ಕಛೇರಿಗಳು ಮಾಡುವ ಖರ್ಚಿನ ಲೆಕ್ಕ ಹಿಂದೀಯಲ್ಲಿ.

೩.೪ ವಿವಿಧ ಅಧ್ಯಾಯಗಳ ಅಳವಾದ ಅಧ್ಯಯನದ ನಂತರ ಹೊರ ಬಂದ ಸಾಮಾನ್ಯ ಹಾಗೂ ನಿರ್ದಿಷ್ಟವಾದ ನಿರ್ಣಯಗಳನ್ನು ರಾಷ್ಟ್ರಪತಿಗಳಿಗೆ ಸಲ್ಲಿಸಿದ ಶಿಫಾರಸ್ಸಿನಲ್ಲಿ ಬಳಸಿಕೊಳ್ಳಲಾಗಿದೆ. ಈ ಶಿಫಾರಸ್ಸುಗಳೇ ಈ ವರದಿಯ ೪ನೇ ಭಾಗವಾಗಿದೆ. ಎಂಟನೇ ಭಾಗದಲ್ಲಿ ೧೭ ಅಧ್ಯಾಯಗಳಿದ್ದು, ಅವುಗಳ ಅಧಾರದ ಮೇಲೆ ೭೫ ಶಿಫಾರಸ್ಸುಗಳನ್ನು ಮಾಡಲಾಗಿದೆ.

೩.೫ ಸಮಿತಿಯು ತಾನು ಸಲ್ಲಿಸಿರುವ ವರದಿಯಲ್ಲಿರುವ ವಿವಿಧ ಸಮಸ್ಯೆಗಳು ಹಾಗೂ ಅವುಗಳ ನಿವಾರಣೆಗೆ ಮಾಡಿರುವ ಶಿಫಾರಸ್ಸುಗಳು ದೇಶಾದ್ಯಂತ ಎಲ್ಲಾ ಕಛೇರಿಗಳಲ್ಲಿ ಹಿಂದೀಬಳಕೆ ಮತ್ತಷ್ಟು ಹೆಚ್ಚಿಸಲು ಅನುಕೂಲಕರವಾಗಿರಲಿದೆ ಎಂದು ಆಶಿಸುತ್ತದೆ. ಈ ಶಿಫಾರಸ್ಸುಗಳ ಅನುಷ್ಠಾನಕ್ಕಾಗಿ ಮಾಡಲಾಗಿರುವ ರಾಷ್ಟ್ರಪತಿಗಳ ಆದೇಶವನ್ನು ಕಟ್ಟುನಿಟ್ಟಾಗಿ ಪಾಲಿಸಲು ಸಮಿತಿಯು ಆಗ್ರಹಿಸುತ್ತದೆ. ಇದನ್ನು ಎಲ್ಲಾ ಇಲಾಖೆಗಳು ಮತ್ತು ಕಛೇರಿಗಳು ತಪ್ಪದೇ ಪಾಲಿಸಬೇಕು ಹಾಗೂ

ಹಿಂದೀ ತರಬೇತಿ, ಹಿಂದೀ ಬೆರಳಚ್ಚು, ಹಿಂದೀ ಶೀಘ್ರಲಿಪಿ ತರಬೇತಿ ಹಾಗೂ ಗಣಕಯಂತ್ರಗಳಲ್ಲಿ ಹಿಂದೀಬಳಕೆಯನ್ನು ಸಮಯದ ಚೌಕಟ್ಟಿನೊಳಗೆ ಮುಗಿಸಬೇಕು.

೩.೬ ಈ ಭಾಗವನ್ನು ತಯಾರಿಸುವಾಗ ಸಮಿತಿಗೆ ಹಿಂದೀನ ಏಳು ಭಾಗಗಳ ಅನುಷ್ಠಾನದ ಮಟ್ಟವನ್ನು ತಿಳಿಯಬಯಸಿತು. ಹಿಂದೀನ ಏಳು ಭಾಗಗಳಲ್ಲಿ ಮಾಡಲಾಗಿದ್ದ ಶಿಫಾರಸ್ಸುಗಳು ಯಾವ ಮಟ್ಟದಲ್ಲಿ ಇಂದಿನ ದಿನಕ್ಕೆ ಅನುಗುಣವಾಗಿವೆ ಎನ್ನುವುದನ್ನು ಸಮಿತಿಯು ಪರೀಕ್ಷಿಸಲು ನಿರ್ಧರಿಸಿತು. ಹಿಂದೀನ ಸಮಿತಿಯ ಕೆಲವು ಶಿಫಾರಸ್ಸುಗಳನ್ನು ಪಾಲಿಸಲಾಗಿರಲಿಲ್ಲ ಹಾಗಾಗಿ ಇನ್ನೊಂದು ಸಾರಿ ಆ ಶಿಫಾರಸ್ಸುಗಳ ಮೇಲೆ ರಾಷ್ಟ್ರಪತಿಗಳ ಆದೇಶ ಹೊರಡಿಸಬೇಕು. ಕೊಟ್ಟಿರುವ ಗುರಿಗಳಲ್ಲಿ ಅನೇಕ ಕಡೆಗಳಲ್ಲಿ ಹಿಂದುಳಿದಿರುವುದು ಸಮಿತಿಗೆ ಕಂಡುಬಂತು. ಹಾಗಾಗಿ ಸಮಿತಿಗೆ ಗುರಿ ಮುಟ್ಟಲು ಇರುವ ಅಡೆತಡೆಗಳನ್ನು ತಿಳಿಯಲು ಭೇಟಿ ಹಾಗೂ ಮಾತುಕತೆಯ ಕಾರ್ಯಯೋಜನೆಗಳನ್ನು ಮುಂದುವರೆಸುವುದು ಸೂಕ್ತ ಅನ್ನಿಸಿತು. ಈ ಹಿನ್ನೆಲೆಯಲ್ಲಿ ಎಲ್ಲಾ ಇಲಾಖೆಗಳಿಂದ ಸಾಕ್ಷಿಗಳನ್ನು ತಗೆದುಕೊಳ್ಳುವುದು ಅವಶ್ಯಕ. ಇಂದಿನ ಜಾಗತೀಕರಣದ ಈ ದಿನಗಳಲ್ಲಿ ಅನೇಕ ಕಛೇರಿಗಳು/ ಬ್ಯಾಂಕ್‌ಗಳು ತಮ್ಮ ಕಾರ್ಯಗಳನ್ನು ಹೊರದೇಶದಲ್ಲಿ ವಿಸ್ತರಿಸುತ್ತಿವೆ. ಅಲ್ಲಿ ಕೂಡ ಆಡಳಿತ ಭಾಷೆಯ ಬಳಕೆನ್ನು ಪರೀಕ್ಷಿಸುವುದು ಅವಶ್ಯಕ. ಸಮಿತಿಯು ಪರೀಕ್ಷಿಸಿದ ೧೨೦೫ ಕಛೇರಿಗಳಲ್ಲಿ ೬೨ ಶೈಕ್ಷಣಿಕ ಕೇಂದ್ರಗಳು ಸೇರಿವೆ. ಆಡಳಿತ ಭಾಷೆ ಹಿಂದೀಯನ್ನು ಶೈಕ್ಷಣಿಕ ಹಾಗೂ ತರಬೇತಿ ಕೇಂದ್ರಗಳಲ್ಲಿ ಕಲಿಕಾ ಮಾಧ್ಯಮವನ್ನಾಗಿ ಹೇಗೆ ಮಾಡುವುದು ಮತ್ತು ತಂತ್ರಜ್ಞಾನ ಹಾಗೂ ಶೋಧನಾ ಸಂಸ್ಥೆಗಳಲ್ಲಿ ಹಿಂದೀಯನ್ನು ಮೂಲಭಾಷೆಯನ್ನಾಗಿ ಒಪ್ಪಿಕೊಳ್ಳುವುದು ಹೇಗೆ ಅನ್ನುವುದರ ಬಗ್ಗೆ ಆಳವಾದ ಅಧ್ಯಯನದ ಅವಶ್ಯಕತೆ ಇದೆ. ಕೇಂದ್ರಸರ್ಕಾರದ ಜಾಹೀರಾತು ಸೂತ್ರವನ್ನು ಸಮಿತಿಯು ಸೆಪ್ಟಂಬರ್ ೨೦೦೪ರಲ್ಲಿ ಪರಶೀಲಿಸಿದೆ. ಆದರೆ ಸಮಿತಿಗೆ ಬೇಕಾದ ಪೂರ್ಣ ಮಾಹಿತಿ ದೊರೆಯದ ಕಾರಣ ಸಮಿತಿಗೆ ಯಾವುದೇ ನಿರ್ಧಾರವನ್ನು ತಗೆದುಕೊಳ್ಳಲು ಆಗಿಲ್ಲ.

೩.೭ ಭೇಟಿ ನೀಡಿ ಪರಿಶೀಲನೆ ನಡೆಸುವುದು ಇನ್ನೂ ಕೂಡ ಅಗತ್ಯವಾಗಿದೆ. ಸಮಿತಿಯು ಇನ್ನೂ ಹಲವಾರು ವಿಷಯಗಳನ್ನು ಪರಿಶೀಲಿಸಿಲ್ಲ. ಹಾಗಾಗಿ ಸಮಿತಿಯು ತನ್ನ ಕೆಲಸವನ್ನು ಮುಂದುವರೆಸಿಕೊಂಡು ಹೋಗಬೇಕು ಹಾಗೂ

ಉಳಿದ ವಿಷಯಗಳ ಬಗ್ಗೆ ಮುಂದೀನ ವರದಿಯಲ್ಲಿ ಶಿಫಾರಸ್ಸುಗಳನ್ನು ನೀಡಬೇಕು.

## ೪. ಕೃತಜ್ಞತೆಗಳು/ ನೆನಕೆಗಳು

ಈ ಭಾಗದಲ್ಲಿ ಕೃತಜ್ಞತೆಗಳನ್ನು ಸಲ್ಲಿಸಿ, ಕೊಡುಗೆ ನೀಡಿದವರನ್ನು ನೆನೆಯಲಾಗಿದೆ.

## ೫. ಅಂಕಿಅಂಶಗಳು

ಸಂಸತ್ ಸಮಿತಿಯು ೧ನೇ ಜನವರಿ ೨೦೦೨ರಿಂದ ೩೧ನೇ ಮಾರ್ಚ್ ೨೦೦೫ರವರೆಗೆ ವಿವಿಧ ಸಚಿವಾಲಯಗಳ ಕಛೇರಿಗಳಿಗೆ ಭೇಟಿ ನೀಡಿ ಹಿಂದೀಯನ್ನು ಆಡಳಿತದಲ್ಲಿ ಬಳಸುತ್ತಿರುವ ಬಗ್ಗೆ ಒಂದು ಅಂಕಿಅಂಶಗಳ ಪಟ್ಟಿಯನ್ನು ತಯಾರಿಸಿತು. ಈ ಪಟ್ಟಿಯನ್ನು ತಯಾರಿಸುವಾಗ ಸಮಿತಿಯು ಇಟ್ಟುಕೊಂಡ ಮಾನದಂಡಗಳನ್ನು ಇಲ್ಲಿ ಕೊಡಲಾಗಿದೆ.

೧. ಪ್ರತಿಯೊಂದು ಸಚಿವಾಲಯದಲ್ಲೂ ಇರುವ ಒಟ್ಟು ಸಿಬ್ಬಂದಿಗಳ ಸಂಖ್ಯೆ ಹಾಗೂ ಆ ಸಿಬ್ಬಂದಿಗಳಲ್ಲಿ ಸುಲಭವಾಗಿ ಹಿಂದೀಯನ್ನು ಆಡಳಿತದಲ್ಲಿ ಬಳಸಬಹುದಾದ ಉದ್ಯೋಗಿಗಳ ಸಂಖ್ಯೆ.

೨. ಕೇವಲ ಇಂಗ್ಲೀಶಿನಲ್ಲಿ ಇರುವ ಸೂಚನೆಗಳು/ ನಿಯಮಗಳು/ ಕೈಪಿಡಿಗಳ ಸಂಖ್ಯೆ.

೩. ಇಂಗ್ಲೀಶಿನಲ್ಲಿ ತಲೆಬರಹ ಹೊಂದಿರುವ ರಿಜಿಸ್ಟರ್‌ಗಳ ಸಂಖ್ಯೆ

೪. ಕೇವಲ ಇಂಗ್ಲೀಶಿನಲ್ಲೇ ಬರೆಯಲಾಗಿರುವ ರಿಜಿಸ್ಟರ್‌ಗಳ ಸಂಖ್ಯೆ

೫. ಕೇವಲ ಇಂಗ್ಲೀಶಿನಲ್ಲೇ ಇರುವ ಶೇಕಡವಾರು ಸೀಲುಗಳ, ಸೂಚನಾ ಫಲಕಗಳ, ಬ್ಯಾಡ್ಜ್‌ಗಳ, ನಕ್ಷೆಗಳ, ಮೋನೋಗ್ರಾಮ್‌ಗಳ, ಲೋಗೋಗಳ ಹಾಗೂ ಮತ್ತಿತರ ವಸ್ತುಗಳ ಸಂಖ್ಯೆ.

೬. ‘ಎ’ ಮತ್ತು ‘ಬಿ’ ವಲಯಗಳಿಗೆ ಕಳುಹಿಸಲಾಗಿರುವ ಪತ್ರಗಳ ವಿಳಾಸವನ್ನು ಹಿಂದೀಯಲ್ಲಿ ಬರೆಯಲಾಗಿದೆಯೇ?

೭. ಕಛೇರಿಗಳಲ್ಲಿರುವ ಒಟ್ಟು ಗಣಕಯಂತ್ರ ಸಂಖ್ಯೆ, ಅದರಲ್ಲಿ ಹಿಂದೀ ಮತ್ತು ಇಂಗ್ಲೀಶನ್ನು ಹೊಂದಿರುವ ದ್ವಿಭಾಷಾ ಗಣಕಯಂತ್ರಗಳ ಸಂಖ್ಯೆ ಹಾಗೂ ಈ ದ್ವಿಭಾಷಿಕ ಗಣಕಯಂತ್ರಗಳಲ್ಲಿ ಹಿಂದೀ ಕೆಲಸವನ್ನು ಶೇಕಡ ಎಷ್ಟು ಮಾಡಲಾಗುತ್ತದೆ ಎಂಬ ಬಗ್ಗೆ.

೮. ತರಬೇತಿ ಕೇಂದ್ರಗಳಲ್ಲಿ ಬಳಸುವ ಭಾಷೆಯ ಪ್ರಮಾಣಗಳು. ಉದಾ: ಕೇವಲ ಇಂಗ್ಲೀಶಿನಲ್ಲಿ ನಡೆಸುವ ತರಬೇತಿ ಕಾರ್ಯಕ್ರಮಗಳ ಸಂಖ್ಯೆ, ಕೇವಲ ಹಿಂದೀಯಲ್ಲಿ ನಡೆಸುವ ತರಬೇತಿ ಕಾರ್ಯಕ್ರಮಗಳ ಸಂಖ್ಯೆ, ಹಿಂದೀ ಹಾಗೂ ಇಂಗ್ಲೀಶ್ ಎರಡನ್ನೂ ಬಳಸಿ ನಡೆಸುವ ತರಬೇತಿ ಕಾರ್ಯಕ್ರಮಗಳ ಸಂಖ್ಯೆ.

೯. ಹಿಂದಿನ ಮೂರುವರ್ಷಗಳಲ್ಲಿ ಹಿಂದೀಯಲ್ಲಿ ಜಾರಿಮಾಡಲಾಗಿರುವ ಅಧಿನಿಯಮಗಳು/ ಅವುಗಳ ಅಂತರ್ಗತವಾಗಿ ಮಾಡಲಾಗಿರುವ ನಿಯಮಗಳು/ ಉಪನಿಯಮಗಳ ಅಡಿಯಲ್ಲಿ ಜಾರಿಮಾಡಲಾಗಿರುವ ಆದೇಶಗಳ ಸಂಖ್ಯೆ.

೧೦. ಹಿಂದಿನ ಮೂರುವರ್ಷಗಳಲ್ಲಿ ಪುಸ್ತಕಗಳ ಖರೀದಿಯ ಒಟ್ಟು ಖರ್ಚಿನಲ್ಲಿ ಹಿಂದೀ ಪುಸ್ತಕಗಳನ್ನು ಕೊಳ್ಳಲು ಮಾಡಿರುವ ಖರ್ಚಿನ ಮೊತ್ತವೆಷ್ಟು?

೧೧. ಕಛೇರಿಗಳಲ್ಲಿ ಬಳಸಲಾಗುವ ಮುದ್ರಿತ/ ಕಲ್ಲಚ್ಚಿನ ಇಂಗ್ಲೀಶಿನಲ್ಲಿರುವ ಅರ್ಜಿಗಳ ಸಂಖ್ಯೆ.

೧೨. ಹಿಂದಿನ ಒಂದು ವರ್ಷದಲ್ಲಿ ಆಯೋಜಿಸಲಾಗಿರುವ ಹಿಂದೀ ಕಾರ್ಯಗಾರಗಳ ಮಾಹಿತಿ – ಇದರಲ್ಲಿ ಒಟ್ಟು ಕಾರ್ಯಗಾರಗಳ ಸಂಖ್ಯೆ ಹಾಗೂ ಅದರಲ್ಲಿ ಭಾಗವಹಿಸಿ ತರಬೇತಿ ಪಡೆದ ಸಿಬ್ಬಂದಿಗಳ ಸಂಖ್ಯೆಯನ್ನು ನಮೂದಿಸಲಾಗಿದೆ.

೧೩. ಲಭ್ಯವಿರುವ ಕರಡುಗಳಲ್ಲಿ ಕೇವಲ ಇಂಗ್ಲೀಶಿನಲ್ಲಿರುವ ಕರಡುಗಳ ಸಂಖ್ಯೆ.

೧೪. ಅಖಿಲ ಭಾರತಮಟ್ಟದಲ್ಲಿ ಜಾರಿ ಮಾಡಲಾಗಿರುವ ಜಾಹೀರಾತುಗಳಲ್ಲಿ ಕೇವಲ ಇಂಗ್ಲೀಶಿನಲ್ಲಿ ಜಾರಿ ಮಾಡಲಾಗಿರುವ ಜಾಹೀರಾತುಗಳ ಸಂಖ್ಯೆ.

೧೫. ಹಿಂದೀಯಲ್ಲಿ ತರಬೇತಿ ಹೊಂದದ ಸಿಬ್ಬಂದಿಗಳ ಸಚಿವಾಲಯವಾರು ಅಂಕಿ ಅಂಶಗಳ ಪಟ್ಟಿಯನ್ನೂ ಸಹ ತಯಾರಿಸಲಾಗಿದೆ.

೧೬. ಶೇ೨೫ಕ್ಕಿಂತ ಹೆಚ್ಚು ಹಿಂದೀ ಭಾಷೆಯಲ್ಲಿ ತರಬೇತಿ ಹೊಂದಿರದ ಸಿಬ್ಬಂದಿ ಹೊಂದಿರುವ ಸಚಿವಾಲಯಗಳಿಗೆ ಸಮಿತಿಯು ತನ್ನ ಶಿಫಾರಸ್ಸಿನಲ್ಲಿ ಒಂದು ವರ್ಷದ ಒಳಗೆ ಈ ಸಿಬ್ಬಂದಿಗಳಿಗೆ ತರಬೇತಿ ನೀಡಬೇಕು ಎಂದು ಹೇಳಿದೆ. ಈ ಕೆಲಸಕ್ಕಾಗಿ ಆಡಳಿತ ಭಾಷಾ ಇಲಾಖೆಯ ಸಹಾಯ ಪಡೆಯಲು ತಿಳಿಸಿದೆ.

೧೭. ಸಚಿವಾಲಯಗಳ ‘ಹಿಂದೀಯಲ್ಲಿ ಮೂಲಪತ್ರಗಳ ವ್ಯವಹಾರ’ದ ಪ್ರತಿಶತ ಅಂಕಿ ಅಂಶಗಳ ಪಟ್ಟಿಯನ್ನು ತಯಾರಿಸಲಾಗಿದೆ.

೧೮. ಸಚಿವಾಲಯಗಳಲ್ಲಿ ರಾಜ್‌ಭಾಷಾ ನಿಯಮ-೫ರ (ಹಿಂದೀಯಲ್ಲಿ ಬಂದ ಪತ್ರಗಳಿಗೆ ಹಿಂದೀಯಲ್ಲೇ ಉತ್ತರಿಸುವುದು) ಉಲ್ಲಂಘನೆಯ ಅಂಕಿ ಅಂಶಗಳ ಪಟ್ಟಿಯನ್ನು ತಯಾರಿಸಲಾಗಿದೆ.

೧೯. ಕೇವಲ ಇಂಗ್ಲೀಶಿನಲ್ಲಿ ಇರುವ ಕೋಡ್/ ಕೈಪಿಡಿಗಳ ಬಗ್ಗೆ ಸಚಿವಾಲಯವಾರು ಸ್ಥಿತಿಯ ಬಗ್ಗೆ ಅಂಕಿಅಂಶಗಳ ಪಟ್ಟಿಯನ್ನು ತಯಾರಿಸಲಾಗಿದೆ.

೨೦. ಹಿಂದೀ, ಇಂಗ್ಲೀಶ್ ಹಾಗೂ ದ್ವಿಭಾಷೆಯಲ್ಲಿ ಪ್ರಕಾಶಿಸಿರುವ ಬಗ್ಗೆ ಮಾಹಿತಿಗಳ ಪಟ್ಟಿಯನ್ನು ನೀಡಲಾಗಿದೆ.

೨೧. ಸಚಿವಾಲಯಗಳಲ್ಲಿ ಹಿಂದೀ/ ಇಂಗ್ಲೀಶಿನ ಪ್ರಕಾಶನಗಳ ಬಗ್ಗೆ ಪಟ್ಟಿಯನ್ನು ನೀಡಲಾಗಿದೆ.

## ೬. ವಲಯವಾರು ವಿಶ್ಲೇಷಣೆ

೬.೧ ಆಡಳಿತ ಭಾಷೆ ಹಿಂದೀಯನ್ನು ಬಳಕೆಯ ಆಧಾರದ ಮೇಲೆ, ಇಡೀ ದೇಶವನ್ನು 'ಎ' 'ಬಿ' ಮತ್ತು 'ಸಿ' ಎನ್ನುವ ಮೂರು ವಲಯಗಳನ್ನಾಗಿ ವಿಂಗಡಿಸಲಾಗಿದೆ. 'ಎ' ವಲಯದಲ್ಲಿ ಬಿಹಾರ, ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯಪ್ರದೇಶ, ರಾಜಸ್ಥಾನ ಹಾಗೂ ಉತ್ತರಪ್ರದೇಶ ಮತ್ತು ಕೇಂದ್ರಾಡಳಿತ ಪ್ರದೇಶಗಳಾಗಿರುವ ಅಂಡಮಾನ್ ನಿಕೋಬಾರ್ ದ್ವೀಪ ಹಾಗೂ ದೆಹಲಿ ಇವೆ. 'ಬಿ' ವಲಯದಲ್ಲಿ ಗುಜರಾತ್, ಮಹಾರಾಷ್ಟ್ರ ಹಾಗೂ ಪಂಜಾಬ ಮತ್ತು ಕೇಂದ್ರಾಡಳಿತ ಪ್ರದೇಶವಾದ ಚಂಡೀಗಡಗಳಿವೆ. 'ಸಿ' ವಲಯದಲ್ಲಿ 'ಎ' ಹಾಗೂ 'ಬಿ' ವಲಯಗಳಲ್ಲಿರದ ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಇವೆ.

ಜನವರಿ ೨೦೦೨ ರಿಂದ ಮಾರ್ಚ್ ೨೦೦೫ರವರೆಗೆ ಈ ಎಲ್ಲಾ ವಲಯಗಳನ್ನು ಒಳಗೊಂಡಂತೆ ಸಮಿತಿಯು ಒಟ್ಟು ೧೨೦೫ ಕೇಂದ್ರಸರ್ಕಾರಿ ಕಛೇರಿಗಳನ್ನು ಪರಿಶೀಲಿಸಲಾಗಿದೆ. ಈ ಸಂದರ್ಭದಲ್ಲಿ ಹಲವು ರಾಜ್ಯಗಳ ಮುಖ್ಯಮಂತ್ರಿಗಳು ಸೇರಿದಂತೆ ಹಲವಾರು ಗಣ್ಯರು ಹಾಗೂ ಹಲವು ಸಚಿವಾಲಯದ ಮುಖ್ಯಕಾರ್ಯದಶಿಗಳನ್ನು (ಒಟ್ಟು ೭೨ ಜನರನ್ನು) ಮಾತನಾಡಿಸಲಾಗಿದೆ. ಒಟ್ಟಾಗಿ ಪಡೆದಿರುವ ಮಾಹಿತಿಯನ್ನು ವಲಯವಾರು ವಿಂಗಡಿಸಲಾಗಿದೆ. ಕಲೆಹಾಕಿರುವ ಮಾಹಿತಿಯಿಂದ ಕಂಡುಕೊಂಡಿರುವ ಕೆಲವು ಪ್ರಮುಖ ಸಂಗತಿಗಳನ್ನು ಕೊಡಲಾಗಿದೆ.

೬.೨ ಸಮಿತಿಯು 'ಎ' ವಲಯದಲ್ಲಿರುವ ಒಟ್ಟು ೫೨೯ ಕಛೇರಿಗಳನ್ನು ವೀಕ್ಷಣೆಗೆ ಒಳಪಡಿಸಲಾಗಿದೆ. ಈ ಕಛೇರಿಗಳಲ್ಲಿ ಒಟ್ಟು ೧,೫೯,೧೦೪ ಸಿಬ್ಬಂದಿಗಳಿದ್ದರು. ಇದರಲ್ಲಿ ೫೧,೮೨೬ ಸಿಬ್ಬಂದಿಗೆ ಹಿಂದೀ ಭಾಷೆಯಲ್ಲಿ ಆಡಳಿತ ನಡೆಸುವಷ್ಟು ಮಾತ್ರಾ ಜ್ಞಾನವಿತ್ತು. ೧.೦೭,೧೪೮ ಸಿಬ್ಬಂದಿಗಳು ಹಿಂದೀ ಭಾಷೆಯಲ್ಲಿ ಪರಿಣಿತರಾಗಿದ್ದಾರೆ. 'ಬಿ' ವಲಯದಲ್ಲಿ ಒಟ್ಟು ೨೩೨ ಕಛೇರಿಗಳನ್ನು ವೀಕ್ಷಣೆಗೆ ಒಳಪಡಿಸಲಾಗಿತ್ತು. ಈ ಕಛೇರಿಗಳಲ್ಲಿ ಒಟ್ಟು ೧,೧೧,೯೭೪ ಸಿಬ್ಬಂದಿಗಳಿದ್ದರು. ಇದರಲ್ಲಿ ೮೬,೧೩೭ ಸಿಬ್ಬಂದಿಗಳಿಗೆ ಹಿಂದೀಭಾಷೆಯಲ್ಲಿ ಆಡಳಿತ ನಡೆಸುವಷ್ಟು

ಮಾತ್ರಾ ಜ್ಞಾನವಿತ್ತು. ೧೯,೦೭೭ ಸಿಬ್ಬಂದಿಗಳಿಗೆ ಹಿಂದೀಭಾಷೆಯಲ್ಲಿ ಪರಿಣಿತರಾಗಿದ್ದರು. 'ಸಿ' ವಲಯದಲ್ಲಿ ಒಟ್ಟು ೪೪೪ ಕಛೇರಿಗಳನ್ನು ವೀಕ್ಷಣೆಗೆ ಒಳಪಡಿಸಲಾಗಿತ್ತು. ಇದರಲ್ಲಿ ಒಟ್ಟು ೧,೪೨,೬೯ ಸಿಬ್ಬಂದಿಗಳಿದ್ದರು. ಇದರಲ್ಲಿ ೬೨,೯೬೩ ಸಿಬ್ಬಂದಿಗಳಿಗೆ ಹಿಂದೀ ಭಾಷೆಯಲ್ಲಿ ಆಡಳಿತ ನಡೆಸುವಷ್ಟು ಮತ್ರಾ ಜ್ಞಾನವಿತ್ತು. ೧೫,೦೩೨ ಸಿಬ್ಬಂದಿಗಳಿಗೆ ಹಿಂದೀ ಭಾಷೆಯಲ್ಲಿ ಪರಿಣಿತರಾಗಿದ್ದರು.

೬.೩ ಹಿಂದೀ ಭಾಷೆಯಲ್ಲಿ ಪ್ರಾವೀಣ್ಯತೆ ಪಡೆದಿರುವ ಹಾಗೂ ಶೇ೭೫ಕ್ಕಿಂತ ಹೆಚ್ಚು ಕೆಲಸವನ್ನು ಹಿಂದೀಯಲ್ಲೇ ನಡೆಸುವ ಸಿಬ್ಬಂದಿಗಳ ವಿವರ ಹಾಗೂ ಶೇಕಡವಾರೂ ಮಾಹಿತಿ ಈ ರೀತಿ ಇದೆ:

'ಎ' ವಲಯ - ೨೪,೯೩೪ - ೪೮%

'ಬಿ' ವಲಯ - ೧೧,೧೮೪ - ೫೯%

'ಸಿ' ವಲಯ - ೩,೩೪೫ - ೨೨%

೬.೪ ಈ ಪರಿವೀಕ್ಷಣೆಯಲ್ಲಿ ಹಿಂದೀಭಾಷೆಯಲ್ಲಿ ಎ, ಬಿ, ಸಿ ವಲಯಗಳ ಕಛೇರಿಗಳಲ್ಲಿ ಹೊರಡಿಸಿರುವ ಆದೇಶಗಳ ಪ್ರಮಾಣದ ಬಗ್ಗೆ ಇದೆ. ಇದರಲ್ಲಿ ಹಿಂದೀಯಲ್ಲಿ ಪ್ರಾವೀಣ್ಯತೆ ಇದ್ದೂ ೨೫%ಕ್ಕಿಂತ ಕಡಿಮೆ ಹಿಂದೀಯನ್ನು ಬಳಸುವವರಿಗೆ ಹೆಚ್ಚು ಹಿಂದೀ ಬಳಸಲು ಸೂವನೆ ನೀಡಲಾಯಿತು ಎಂಬ ವಿವರವೂ ಇದೆ.

೬.೫ 'ಎ', 'ಬಿ', 'ಸಿ' ವಲಯಗಳಲ್ಲಿ ದ್ವಿಭಾಷಿಕ ಉಪಕರಣಗಳಲ್ಲಿ (ಟೆಲೆಕ್ಸ್, ಟೆಲಿಪ್ರಿಂಟರ್, ಇಲೆಕ್ಟ್ರಾನಿಕ್ ಟೈಪ್ ರೈಟರ್, ಗಣಕಯಂತ್ರ) ಹಿಂದೀ ಬಳಕೆಯನ್ನು ಸರಾಸರಿಯಾಗಿ ೩೯%, ೩೪% ಹಾಗೂ ೨೪% ಪ್ರಮಾಣದಲ್ಲಿ ಮಾಡಲಾಗಿದೆ.

೬.೬ ಹಿಂದೀ ಭಾಷೆಯಲ್ಲಿ ಕಳುಹಿಸಿರುವ ಸರಾಸರಿ ಪತ್ರಗಳು

| ವಲಯ | ‘ಎ’ ವಲಯಕ್ಕೆ ಕಳುಹಿಸಿರುವ ಸರಾಸರಿ ಪತ್ರಗಳು | ’ಬಿ’ ವಲಯಕ್ಕೆ ಕಳುಹಿಸಿರುವ ಸರಾಸರಿ ಪತ್ರಗಳು | ’ಸಿ’ ವಲಯಕ್ಕೆ ಕೆಳುಹಿಸಿರುವ ಸರಾಸರಿ ಪತ್ರಗಳು | ಕೊಡಲಾಗಿದ್ದ ಗುರಿ<br>ಎ ಬಿ ಸಿ |
|---|---|---|---|---|
| ಎ | ೬೩% | ೫೦% | ೩೨% | ೧೦೦% ೧೦೦% ೬೫% |
| ಬಿ | ೪೮% | ೪೫% | ೨೮% | ೯೦% ೯೦% ೫೫% |
| ಸಿ | ೩೦% | ೨೪% | ೨೩% | ೫೫% ೫೫% ೫೫% |

೬.೭ ವೀಕ್ಷಣೆಯಲ್ಲಿ ಸಮಿತಿಗೆ ತಿಳಿದುಬಂದ ಅಂಶವೆಂದರೆ ‘ಎ’ ವಲಯದ ಕಛೇರಿಗಳಲ್ಲಿ ೨೦೫ ಹಿಂದೀ ಹುದ್ದೆಗಳು ಖಾಲಿಯಿದ್ದವು ಹಾಗೂ ೪೫ ಕಛೇರಿಗಳಲ್ಲಿ ಹಿಂದೀ ಹುದ್ದೆಗಳು ಪ್ರಮಾಣಕ್ಕೆ ತಕ್ಕಂತೆ ಇರಲಿಲ್ಲ. ‘ಬಿ’ ವಲಯದಲ್ಲಿ ೧೩೯ ಹಿಂದೀ ಹುದ್ದೆಗಳು ಖಾಲಿ ಇದ್ದವು ಹಾಗೂ ೧೯ ಕಛೇರಿಗಳಲ್ಲಿ ಹಿಂದೀ ಹುದ್ದೆಗಳು ಪ್ರಮಾಣಕ್ಕೆ ತಕ್ಕಂತೆ ಇರಲಿಲ್ಲ. ‘ಸಿ’ ವಲಯದಲ್ಲಿ ೧೯೧ ಹಿಂದೀ ಹುದ್ದೆಗಳು ಖಾಲಿ ಇದ್ದವು ಹಾಗೂ ೪೮ ಕಛೇರಿಗಳಲ್ಲಿ ಹಿಂದೀ ಹುದ್ದಗಳು ಪ್ರಮಾಣಕ್ಕೆ ತಕ್ಕಂತೆ ಇರಲಿಲ್ಲ.

೬.೮ ಈಗಲೂ ಇಂಗ್ಲೀಶ್ ಭಾಷೆಯನ್ನು ಉಪಯೋಗಿಸುತ್ತಿರುವ ಸೇವಾ ಪುಸ್ತಕ / ಸೇವಾ ಕಡತಗಳ ಸಂಖ್ಯೆ.

ವಲಯ ‘ಎ’ - ೪೧,೧೮೮

ವಲಯ ‘ಬಿ’ - ೫೭,೦೦೧

ವಲಯ ‘ಸಿ’ - ೧,೩೮,೩೪೧

೬.೯ ಇಂಗ್ಲೀಶ್ ಭಾಷೆಯಲ್ಲಿರುವ ಸಿದ್ಧ ಕರಡುಗಳು ಹಾಗೂ ಅರ್ಜಿಗಳ ಸಂಖ್ಯೆ ಈ ರೀತಿ ಇದೆ

| ವಲಯ | ಸಿದ್ಧ ಕರಡುಗಳು | ಅರ್ಜಿಗಳು |
|---|---|---|
| ಎ | ३११ | ೬೧೨ |
| ಬಿ | ११३३ | ೬೯೯ |
| ಸಿ | ೧೦೩೫ | ೧೪೭೮ |

೬.೧೦ ಎಲ್ಲಾ ಮೂರು ವಲಯಗಳಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಕೈಪಿಡಿಗಳು ಇಂಗ್ಲೀಶ್ ಭಾಷೆಯಲ್ಲಿವೆ

೬.೧೧ ವಲಯವಾರು ಸಮೀಕ್ಷೆಯಲ್ಲಿ ಕಂಡುಬಂದ ಅಂಶವೆಂದರೆ ದಾಖಲೆ ಪುಸ್ತಕಗಳಲ್ಲಿ ಇಂಗ್ಲೀಶಿನಲ್ಲಿ ಬರೆದಿರುವುದನ್ನು ಗಮನಿಸಲಾಗಿದೆ. ವಲಯ 'ಎ', 'ಬಿ', 'ಸಿ' ಯಲ್ಲಿ ಇಂತಹ ದಾಖಲೆ ಪುಸ್ತಕಗಳ ಸಂಖ್ಯೆ ಕ್ರಮವಾಗಿ ೧೫,೧೭೨, ೯೬೩೭, ೨೨,೭೮೮. ಒಳಗಿನ ಬರಹವಷ್ಟನ್ನಲ್ಲದೆ, ಪುಸ್ತಕಗಳ ಹೆಸರು ಹಾಗೂ ವಿಷಯಗಳನ್ನು ಕೂಡಾ ಇಂಗ್ಲೀಶಿನಲ್ಲಿ ಬರೆದಿರುವ ಪುಸ್ತಕಗಳ ಸಂಖ್ಯೆ ೫೦೫, ೨೩೮ ಹಾಗೂ ೪೧೭೭ ಕ್ರಮವಾಗಿವೆ.

೬.೧೨ ಆಡಳಿತ ಭಾಷೆ ನಿಯಮಗಳು, ೧೯೭೬ರ ನಿಯಮ-೫ನ್ನು ಎಲ್ಲಾ ಮೂರೂವಲಯಗಳು ಉಲ್ಲಂಘಿಸಿವೆ. ಕಛೇರಿಗಳಿಗೆ ಬಂದ ಹಿಂದೀ ಪತ್ರಗಳಿಗೆ ಇಂಗ್ಲೀಶಿನಲ್ಲಿ ಉತ್ತರ ಬರೆದಿರುವ ಪ್ರಮಾಣ: ವಲಯ 'ಎ', 'ಬಿ', 'ಸಿ'ಯಲ್ಲಿ ಕ್ರಮವಾಗಿ ೩೦೬೧, ೭೪೮ ಹಾಗೂ ೭೫೬. ಪರೀಕ್ಷಿಸಿದಾಗ ತಿಳಿದುಬಂದ ಅಂಶವೆಂದರೆ ವಲಯ 'ಎ' ಕಛೇರಿಗಳಲ್ಲೇ ಹಿಂದೀಪತ್ರಗಳಿಗೆ ಉತ್ತರವನ್ನು ಇಂಗ್ಲೀಶಿನಲ್ಲಿ ಅತಿಹೆಚ್ಚು ಬರೆಯಲಾಗಿದೆ. ಆದರೆ ಅತಿ ಹೆಚ್ಚು ನಿಯಮ ಉಲ್ಲಂಘನೆ ಮಾಡಿರುವ ಕಛೇರಿಗಳಿರುವುದು 'ಸಿ' ವಲಯದಲ್ಲಿಯೇ.

೬.೧೩ ಆಡಳಿತಭಾಷಾ ಇಲಾಖೆಯು ಕಛೇರಿಗಳಲ್ಲಿರುವ ಎಲ್ಲಾ ಯಂತ್ರಗಳು ದ್ವಿಭಾಷಾ ಯಂತ್ರಗಳಾಗಿರಬೇಕು ಎನ್ನುವ ಆದೇಶವನ್ನು ನೀಡಿದೆ. ಆದರೆ ಈ ಅದೇಶವನ್ನು ಮೂರೂವಲಯಗಳಲ್ಲಿ ಸಂಪೂರ್ಣವಾಗಿ ಪಾಲಿಸಲಾಗಿಲ್ಲ. 'ಎ' ವಲಯದ ೩೨,೬೯೮ ಗಣಕಯಂತ್ರಗಳಲ್ಲಿ ಶೇ ೯೧ರಲ್ಲಿ ಮಾತ್ರ ದ್ವಿಭಾಷೆಯ ಸೌಲಭ್ಯಗಳಿದ್ದವು. 'ಬಿ'ವಲಯದ ೨೫,೮೧೪ ಗಣಕಯಂತ್ರಗಳಲ್ಲಿ ಶೇ ೬೬ರಲ್ಲಿ ಹಾಗೂ 'ಸಿ'ವಲಯದ ೨೦,೬೯೬ ಗಣಕಯಂತ್ರಗಳಲ್ಲಿ ಶೇ ೭೪ರಲ್ಲಿ ಮಾತ್ರಾ

ದ್ವಿಭಾಷಾ ಸೌಲಭ್ಯಗಳಿದ್ದವು. ಗಣಕಯಂತ್ರಗಳಲ್ಲಿ ಹಿಂದೀಯಲ್ಲಿ ಕೆಲಸ ಮಾಡುತ್ತಿರುವ ಪ್ರಮಾಣ ಕ್ರಮವಾಗಿ ೩೯%, ೩೪% ಹಾಗೂ ೨೪%.

೬.೧೪ 'ಎ' ವಲಯದಲ್ಲಿ ಹಿಂದೀ ಟೈಪಿಸ್ಟ್/ಸ್ಟೆನೋಗ್ರಾಫರ್‌ಗಳ ಸೇವೆಯನ್ನು ಹಿಂದೀ ಟೈಪಿಂಗ್/ಸ್ಟೆನೋಗ್ರಫಿಗಾಗಿ ಶೇ೫೫ ಬಳಸಿಕೊಳ್ಳಲಾಗಿದೆ. 'ಬಿ' ಹಾಗೂ 'ಸಿ' ವಲಯಗಳಲ್ಲಿ ಇವರ ಬಳಕೆ ಕ್ರಮವಾಗಿ ಶೇ ೫೩ ಹಾಗೂ ಶೇ ೨೭ರಷ್ಟು ಮಾತ್ರಾ.

೬.೧೫ 'ಎ' ವಲಯದ ೧೨೧ ಪರೀಕ್ಷೆಗಳಲ್ಲಿ/ ಸಂದರ್ಶನಗಳಲ್ಲಿ ಹಿಂದೀ ಮಾಧ್ಯಮವನ್ನು ನೀಡಲಾಗಿರಲಿಲ್ಲ. ಇದೇ ರೀತಿ 'ಬಿ' ಹಾಗೂ 'ಸಿ' ವಲಯಗಳಲ್ಲಿ ಇದರ ಸಂಖ್ಯೆಯು ಕ್ರಮವಾಗಿ ೪೯ ಹಾಗೂ ೩೧೩ ಆಗಿದೆ. ಇದಲ್ಲದೇ ಸಮಿತಿಯು ವೀಕ್ಷಿಸಿದ ಕಛೇರಿಗಳಲ್ಲಿ ಅಖಿಲ ಭಾರತ ಮಟ್ಟದ ಜಾಹೀರಾತುಗಳನ್ನು ಕೇವಲ ಇಂಗ್ಲೀಶಿನಲ್ಲಿ ನೀಡಿರುವ ಸಂಖ್ಯೆ 'ಎ', 'ಬಿ', 'ಸಿ' ವಲಯಗಳಲ್ಲಿ ಕ್ರಮವಾಗಿ ೪೪೧, ೩೬೬ ಹಾಗೂ ೨೪೨ ಮಾತ್ರಾ ಆಗಿದೆ.

೬.೧೬ ತಮ್ಮ ಕೆಲಸವನ್ನು ಸಂಪೂರ್ಣವಾಗಿ ಹಿಂದೀಯಲ್ಲಿ ಮಾಡಿರುವ ಶೇಕಡವಾರು ಅಂಕಿಗಳು 'ಎ', 'ಬಿ', 'ಸಿ' ವಲಯಗಳಲ್ಲಿ ಕ್ರಮವಾಗಿ ೯%, ೧೧% ಹಾಗೂ ೧೧%

೬.೧೭ ಪ್ರಕಾಶನಗಳಲ್ಲಿ ಅತಿ ಹೆಚ್ಚು ಉಲ್ಲಂಘನೆ 'ಎ' ವಲಯದ ಕಛೇರಿಗಳಲ್ಲಿ ಮಾಡಲಾಗಿದೆ. ಹಿಂದೀಯಲ್ಲಿ ೫೩೦ ಪ್ರಕಾಶನಗಳನ್ನು ಹಾಗೂ ಇಂಗ್ಲೀಶಿನಲ್ಲಿ ೧೮೯೧ ಪ್ರಕಾಶನಗಳನ್ನು ಹೊರತರಲಾಗಿದೆ. 'ಬಿ' ವಲಯದ ಕಛೇರಿಗಳಲ್ಲಿ ಪರಿಸ್ಥಿತಿ ಸ್ವಲ್ಪ ಉತ್ತಮವಾಗಿದ್ದು ಹಿಂದೀಯಲ್ಲಿ ೧೪೦ ಹಾಗೂ ಇಂಗ್ಲೀಶಿನಲ್ಲಿ ಕೇವಲ ೪೩ ಪ್ರಕಟಣೆಗಳನ್ನು ಮಾಡಲಾಗಿದೆ. 'ಸಿ' ವಲಯದಲ್ಲಿ ಹಿಂದೀಯಲ್ಲಿ ೨೧೧ ಹಾಗೂ ಇಂಗ್ಲೀಶಿನಲ್ಲಿ ೨೪೯ ಪ್ರಕಟಣೆಗಳನ್ನು ಮಾಡಲಾಗಿದೆ.

೬.೧೮ ಹಿಂದೀ ದಿವಸ/ ಹಿಂದೀ ಸಪ್ತಾಹದ ಸಮಯದಲ್ಲಿ ಹಿಂದೀ ಬಳಕೆ ಹೆಚ್ಚಿರುವುದನ್ನು ಸಮಿತಿಯು ಗಮನಿಸಿದೆ. ಮೂರೂ ವಲಯಗಳಲ್ಲಿ ಆಗಿರುವ ಶೇಕಡವಾರು ಹೆಚ್ಚಳ ಕ್ರಮವಾಗಿ ೯%, ೧೧% ಹಾಗೂ ೧೧% ಆಗಿದೆ.

೬.೧೯ ‘ಎ’ ವಲಯದ ೨೩ ಕಛೇರಿಗಳಲ್ಲಿ, ‘ಬಿ’ ವಲಯದ ೯ ಹಾಗೂ ‘ಸಿ’ ವಲಯದ ೨೬ ಕಛೇರಿಗಳಲ್ಲಿ ಆಡಳಿತ ಭಾಷೆ ಅನುಷ್ಠಾನ ಸಮಿತಿಯನ್ನು ಇನ್ನೂ ರಚಿಸದಿರುವುದನ್ನು ಸಮಿತಿಯು ಗಮನಿಸಿದೆ. ಈ ಹಿನ್ನೆಲೆಯಲ್ಲಿ ಹೆಚ್ಚಿನ ಉಲ್ಲಂಘನೆಯು ‘ಎ’ ವಲಯದ ಕಛೇರಿಗಳಲ್ಲಿಯೇ ಆಗಿದೆ.

೬.೨೦ ಆಡಳಿತ ಭಾಷಾ ಕಾಯ್ದೆ ೧೯೬೩ರ ವಿಭಾಗ ೩(೩)ರನ್ನು ಮೂರೂ ವಲಯಗಳಲ್ಲೂ ಉಲ್ಲಂಘಿಸಿರುವುದು ವಲಯವಾರು ಅಂಕಿ ಅಂಶಗಳಲ್ಲಿ ಕಂಡುಬಂದೀದೆ. ಈ ಕಾಯ್ದೆಯ ಅಡಿಯಲ್ಲಿ ಬರುವ ಎಲ್ಲಾ ದಾಖಲೆಗಳು ದ್ವಿಭಾಷಿಕವಾಗಿರಬೇಕು ಎನ್ನುವ ನಿಯಮವನ್ನು ಉಲ್ಲಂಘಿಸಲಾಗಿದೆ. ಈ ಉಲ್ಲಂಘನೆಯು ಹೆಚ್ಚಾಗಿ ‘ಸಿ’ ವಲಯದಲ್ಲಾಗಿದೆ. ಇದನ್ನು ತಡೆಗಟ್ಟಲು ಅವಶ್ಯಕವಾದ ಕ್ರಮಗಳನ್ನು ಕೈಗೊಳ್ಳುವುದು ಅತ್ಯಗತ್ಯವಾಗಿದೆ. ಬಹುತೇಕ ಸೇವಾಪುಸ್ತಕ/ ದಾಖಲೆಗಳಲ್ಲಿ ಇಂಗ್ಲೀಶ್ ಬಳಕೆ ಕಾಣಸಿಗುತ್ತದೆ. ಈ ಸನ್ನಿವೇಶವು ’ಸಿ’ ವಲಯದ ಕಛೇರಿಗಳಲ್ಲಿ ಗಂಭೀರವಾಗಿದೆ. ಸೇವಾ ಪುಸ್ತಕ/ ದಾಖಲೆಗಳು ಪ್ರಮುಖವಾಗಿ ವಾರ್ಷಿಕ ಬಡ್ತಿ, ಬಡ್ತಿ, ರಜೆ, ರಜಾ ಪ್ರವಾಸ ಭತ್ಯೆ, ಹಾಗೂ ಸೇವಾ ಪರೀಕ್ಷಣೆಗೆ ಸಂಬಂಧೀಸಿದ್ದಾಗಿವೆ. ಇದಕ್ಕೆ ಸಂಬಂಧೀಸಿದ ವಾಕ್ಯಗಳು ಒಂದೇ ರೀತಿಯದಾಗಿದ್ದು ಪ್ರಮಾಣಿಕೃತವಾಗಿವೆ. ಸಮಿತಿಯು ಹಿಂದೀ ಅಥವಾ ದ್ವಿಬಾಷೆಯಲ್ಲಿ ರಬ್ಬರ್‌ಸ್ಟಾಂಪ್‌ಗಳನ್ನು ಎಲ್ಲಾ ಕಛೇರಿಗಳಲ್ಲಿ ಬಳಕೆ ಮಾಡಲು ಸೂಚಿಸಿದೆ. ಇದು ಸೇವಾ ಪುಸ್ತಕಗಳು ಹಿಂದೀಯಲ್ಲಿರುವುದನ್ನು ಖಚಿತಪಡಿಸುತ್ತದೆ. ಸದರಿ ಶಿಫಾರಸ್ಸನ್ನು ಅನುಷ್ಠಾನಗೊಳಿಸಿದ್ದೇ ಆದಲ್ಲಿ ’ಸಿ’ ವಲಯದ ಕಛೇರಿಗಳಲ್ಲಿ ‘ಹಿಂದೀ ಬಳಕೆ ಆದಷ್ಟುಮಟ್ಟಿಗೆ ಆಗಬೇಕು’ ಎನ್ನುವ ವಾಕ್ಯವನ್ನು ತೆಗೆದು ಹಾಕಬಹುದು.

ಮೂರೂವಲಯಗಳಲ್ಲಿ ಹಿಂದೀಯಲ್ಲಿ ಮೂಲಪತ್ರವ್ಯವಹಾರ ಸಮಾಧಾನ ತರುವಂತಿಲ್ಲ. ಎಲ್ಲಾ ವಲಯಗಳಲ್ಲೂ ಹಿಂದೀ ಪತ್ರ ವ್ಯವಹಾರ ಕೊಟ್ಟಿರುವ ಗುರಿಗಿಂತ ಕೆಳಗಿರುವುದರಿಂದ ಈ ದಿಸೆಯಲ್ಲಿ ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಆಡಳಿತ ಭಾಷೆಯಾಗಿ ಹಿಂದೀ ಬಳಕೆಯನ್ನು ಹೆಚ್ಚಿಸುತ್ತಲೇ ಇರಲು ಹಿಂದೀಘಟಕಗಳನ್ನು ಗಟ್ಟಿಗೊಳಿಸಬೇಕಾಗಿದೆ ಎನ್ನುವುದು ಸಮಿತಿಯ ನಿಲುವು. ಇದಕ್ಕಾಗಿ ಅದ್ಯತೆಯ ಮೇರೆಗೆ ಹಿಂದೀ ಹುದ್ದೆಗಳನ್ನು ಸೃಷ್ಟಿಸಬೇಕು ಹಾಗೂ

ಈಗಾಗಲೇ ಖಾಲಿ ಇರುವ ಹಿಂದೀ ಹುದ್ದೆಗಳನ್ನು ಕೂಡಲೇ ಭರ್ತಿ ಮಾಡಬೇಕು. ಈ ದಿಸೆಯಲ್ಲಿ ವಲಯವಾರು ಕಛೇರಿಗಳಲ್ಲಿ ನಿರೀಕ್ಷಿತ ಮಟ್ಟದಲ್ಲಿ ಕೆಲಸವಾಗಿಲ್ಲ. 'ಎ' ವಲಯದ ಕಛೇರಿಗಳಲ್ಲಿ ೨೦೫ ಹಿಂದೀ ಹುದ್ದೆಗಳು ಖಾಲಿ ಇವೆ. ಸಮಿತಿಯ ದೃಷ್ಟಿಯಲ್ಲಿ ಹಿಂದೀ ಹುದ್ದೆಗಳನ್ನು ಸೃಷ್ಟಿಸುವ ಪ್ರಕ್ರಿಯೆಯನ್ನು ಸರಳೀಕರಿಸಬೇಕು ಹಾಗೂ ಹಿಂದೀ ಹುದ್ದೆಗಳ ಸೃಷ್ಟಿಸುವಿಕೆಯ ಮೇಲೆ ಯಾವುದೇ ನಿಷೇಧವಿರಬಾರದು.

ಮೂರೂ ವಲಯಗಳಲ್ಲಿ ಹೆಚ್ಚಿನ ಕಡೆಗಳಲ್ಲಿ ಸಂಬಂಧೀಸಿದ ನಿಯಮಗಳನ್ನು ಉಲ್ಲಂಘಿಸಿರುವುದು ಸ್ಪಷ್ಟವಾಗಿದೆ. ಅದರಲ್ಲೂ 'ಎ' ವಲಯದಲ್ಲಿ ಅತಿ ಹೆಚ್ಚು ಉಲ್ಲಂಘನೆಯಾಗಿದೆ. ಇದನ್ನು ಸರಿಪಡಿಸಲು ವಿಶೇಷ ಗಮನನೀಡಬೇಕೆಂದು ಸಮಿತಿಯು ಅಭಿಪ್ರಾಯಪಡುತ್ತದೆ.

'ಸಿ' ವಲಯದ ಬಹುತೇಕ ಕಛೇರಿಗಳ ಕಡತಗಳಲ್ಲಿ ಹಿಂದೀ ಉಪಯೋಗ ೩೩%ಕ್ಕಿಂತ ಹೆಚ್ಚಿರುವುದನ್ನು ಸಮಿತಿ ಗಮನಿಸಿದೆ. ಭಾರಿ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ಯಮಗಳ ಸಚಿವಾಲಯ, ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆ ಹಾಗೂ ಮಾನವ ಸಂಪನ್ಮೂಲ ಸಚಿವಾಲಯಗಳ ಅಧೀನದಲ್ಲಿರುವ ಕೆಲವು ಕಛೇರಿಗಳಲ್ಲಿ ಹಿಂದೀ ಬಳಕೆ ೬೦% ಕ್ಕಿಂತ ಹೆಚ್ಚಿದೆ. ಹಾಗಾಗಿ ಸಮಿತಿಯು 'ಸಿ' ವಲಯದ ಕಛೇರಿಗಳಲ್ಲಿ ಇಂತಿಷ್ಟೇ ಪ್ರಮಾಣದಲ್ಲಿ ಹಿಂದೀ ಜಾರಿ ಮಾಡುವಂತೆ ಗುರಿಯನ್ನು ನಿಗದಿಪಡಿಸಬೇಕು ಮತ್ತು ಇದುವರೆಗೂ ಇದ್ದ "ಆದಷ್ಟುಮಟ್ಟಿಗೆ" ಎಂಬುದನ್ನು ತೆಗೆದು ಹಾಕಬೇಕು.

೬.೨೧ ಆಡಳಿತ ಭಾಷಾ ಸಂಸತ್ ಸಮಿತಿಯ ಮೂರು ಉಪಸಮಿತಿಗಳು ೧.೧.೨೦೦೨ರಿಂದ ೩೧.೩.೨೦೦೫ರವರೆಗೆ ೧೨೦೫ ಕಛೇರಿಗಳನ್ನು ವೀಕ್ಷಿಸಿವೆ. ಪ್ರತಿಯೊಂದು ವಲಯದಲ್ಲಿನ ಹಿಂದೀ ಬಳಕೆಯ ಮತ್ತು ಸೌಕರ್ಯಗಳ ಪ್ರಮಾಣಗಳ ಬಗ್ಗೆ ವರದಿ ಮಾಡಲಾಗಿದೆ.

**'ಎ' ವಲಯ:**

- ೮೩% ಸಿಬ್ಬಂದಿಗಳಿಗೆ ಹಿಂದೀ ಭಾಷೆಯ ಜ್ಞಾನವಿದೆ.

- ೯೧% ಗಣಕಯಂತ್ರಗಳು ದ್ವಿಭಾಷಿಕವಾಗಿವೆ.

- ಈ ಕಛೇರಿಗಳಿಗೆ ಮಂಜೂರಾಗಿರುವ ೧೬೪೨ ಆಡಳಿತ ಭಾಷಾ ಹುದ್ದೆಗಳಲ್ಲಿ ೧೪% ಖಾಲಿ ಇವೆ.

- ೫೬% ಟೈಪಿಸ್ಟ್ ಹಾಗೂ ಸ್ಟೆನೋಗ್ರಾಫರ್‌ಗಳಿಗೆ ಹಿಂದೀಯಲ್ಲಿ ಟೈಪಿಂಗ್ ಹಾಗೂ ಸ್ಟೆನೋಗ್ರಾಫಿ ಮಾಡಲು ಬರುತ್ತದೆ.

- ೫೨೯ ಕಛೇರಿಗಳಲ್ಲಿ ೧೪೪೭ ಹಿಂದೀ ಕಾರ್ಯಾಗಾರಗಳನ್ನು ನಡೆಸಲಾಗಿದೆ.

- ಶೇ೯೩ರಷ್ಟು ಆಡಳಿತ ಭಾಷಾ ಅನುಷ್ಠಾನ ಸಮಿತಿ ಸಭೆಗಳನ್ನು ನಡೆಸಲಾಗಿದೆ.

- ೧೦೮೩ ಕೈಪಿಡಿಗಳು ಇಂಗ್ಲೀಶಿನಲ್ಲಿವೆ

- ಹಿಂದೀ ಕಾರ್ಯಾಗಾರ ಹಾಗೂ ಹಿಂದೀ ಸಾಪ್ತಾಹಗಳನ್ನೂ ನಡೆಸಿದರೂ ಸಹ 'ಎ' ವಲಯದ ಕಛೇರಿಗಳಲ್ಲಿ ಆಡಳಿತ ಭಾಷಾ ಕಾಯ್ದೆಯ ವಿಭಾಗ ೩(೩)ನ್ನೂ ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲಾಗಿಲ್ಲ, ಇದರ ಅನುಷ್ಠಾನದ ಪ್ರಮಾಣ ಶೇ ೯೪ ರಷ್ಟಿದೆ.

- ಹಿಂದೀಯಲ್ಲಿ ಪತ್ರ ವ್ಯವಹಾರ ಪ್ರಾರಂಭಿಸುವಿಕೆ ಗುರಿಗಿಂತ ಬಹಳ ಹಿಂದಿದೆ.

- ‘ಎ’ ವಲಯದಿಂದ ಬೇರೆ ವಲಯದ ಕಛೇರಿಗಳಿಗೆ ಹಿಂದೀಯಲ್ಲಿ ಪತ್ರ ವ್ಯವಹಾರ ನಡೆಸಿರುವುದರ ಪ್ರಮಾಣ ಕ್ರಮವಾಗಿ ೬೩%, ೫೦% ಹಾಗೂ ೩೨% ಇದೆ.

- ನಿಯಮ ೫ರ ಉಲ್ಲಂಘಿಸಲಾಗಿದ್ದೂ ಶೇ೧೬ರಷ್ಟಿದೆ.

- ಹಿಂದೀ ಪ್ರಕಟಣೆಗಳ ಸ್ಥಿತಿ ಕೂಡ ಸಂತೃಪ್ತವಾಗಿಲ್ಲ.

- ಕೇವಲ ೪೪% ಪ್ರಕಟಣೆಗಳನ್ನು ಮಾತ್ರಾ ಹಿಂದೀಯಲ್ಲಿ ಪ್ರಕಟಿಸಲಾಗಿದೆ.

**‘ಬಿ’ ವಲಯ:**

- ಒಟ್ಟು ೨೩೨ ಕಛೇರಿಗಳನ್ನು ವೀಕ್ಷಿಸಲಾಗಿದೆ.

- ಶೇ ೯೫ ರಷ್ಟು ಸಿಬ್ಬಂದಿಗಳಿಗೆ ಹಿಂದೀ ಜ್ಞಾನವಿದೆ.

- ಶೇ ೪೬ ಟೈಪಿಸ್ಟ್ ಹಾಗೂ ಸ್ಟೆನೋಗ್ರಾಫರ್‌ಗಳಿಗೆ ಹಿಂದೀಯಲ್ಲಿ ತರಬೇತಿಗೊಳಿಸಲಾಗಿದೆ.

- ೬೬% ಗಣಕಯಂತ್ರಗಳು ದ್ವಿಭಾಷಿಕವಾಗಿವೆ.

- ೭೭೮ ಆಡಳಿತ ಭಾಷಾ ಹುದ್ದೆಗಳು ಇದ್ದು, ೧೮% ಹುದ್ದೆಗಳು ಖಾಲಿ ಇವೆ.

- ೪೮೧ ಹಿಂದೀ ಕಾರ್ಯಾಗಾರವನ್ನು ನಡೆಸಲಾಗಿದೆ ಹಾಗೂ ಶೇ೯೩ ಆಡಳಿತ ಭಾಷಾ ಅನುಷ್ಠಾನ ಸಮಿತಿಯ ಸಭೆಗಳನ್ನು ನಡೆಸಲಾಗಿದೆ.

- ಆಡಳಿತ ಭಾಷಾ ಕಾಯ್ದೆಯ ವಿಭಾಗ ೩(೩)ನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲಾಗಿಲ್ಲ. ಸದ್ಯಕ್ಕೆ ಇದರ ಅನುಷ್ಠಾನ ೯೩% ನಷ್ಟಿದೆ. ಆದರೆ ಕೊಟ್ಟಿರುವ ಗುರಿ ೧೦೦%.

- 'ಬಿ' ವಲಯದಿಂದ 'ಎ', 'ಬಿ' ಮತ್ತು 'ಸಿ' ವಲಯದ ಕಛೇರಿಗಳಿಗೆ ಹಿಂದೀಯಲ್ಲಿ ಪತ್ರ ವ್ಯವಹಾರ ನಡೆಸಿರುವುದರ ಪ್ರಮಾಣ ಕ್ರಮವಾಗಿ ೪೮%, ೪೫% ಹಾಗೂ ೨೮% ಇದೆ. ಆದರೆ ಕೊಟ್ಟಿದ್ದ ಗುರಿ ಕ್ರಮವಾಗಿ ೯೦%, ೯೦% ಹಾಗೂ ೫೫%.

- ಈ ವಲಯದ ಕಛೇರಿಗಳಲ್ಲಿ ನಿಯಮ ೫ರ ಉಲ್ಲಂಘನೆ ಆಗಿರುವುದು ಕಂಡುಬಂದೀದ್ದು, ಇದರ ಪ್ರಮಾಣ ಶೇ೮ ರಷ್ಟಿದೆ.

**'ಸಿ' ವಲಯ:**

- ಒಟ್ಟು ೪೪೪ ಕಛೇರಿಗಳನ್ನು ವೀಕ್ಷಿಸಲಾಗಿದೆ.

- ಶೇ ೫೫ ರಷ್ಟು ಸಿಬ್ಬಂದಿಗಳಿಗೆ ಹಿಂದೀ ಭಾಷೆಯ ಜ್ಞಾನವಿದೆ.

- ೨೬% ಟೈಪಿಸ್ಟ್ ಹಾಗೂ ಸ್ಟೆನೋಗ್ರಾಫರ್‌ಗಳಿಗೆ ಹಿಂದೀ ಟೈಪಿಂಗ್ ಹಾಗೂ ಸ್ಟೆನೋಗ್ರಫಿ ಬರುತ್ತದೆ.

- ೯೪೯ ಹಿಂದೀ ಹುದ್ದೆಗಳಿದ್ದು ಇದರಲ್ಲಿ ಶೇ೨೦ ರಷ್ಟು ಹುದ್ದೆಗಳು ಖಾಲಿ ಇವೆ.

- ೮೨೬ ಹಿಂದೀ ಕಾರ್ಯಾಗಾರಗಳನ್ನು ನಡೆಸಲಾಗಿದೆ ಹಾಗೂ ಶೇ೯೨ ಆಡಳಿತ ಭಾಷಾ ಅನುಷ್ಠಾನ ಸಮಿತಿಯ ಸಭೆಗಳನ್ನು ನಡೆಸಲಾಗಿದೆ.

- ೭೧೭ ಕಡತಗಳು ಇಂಗ್ಲೀಶಿನಲ್ಲಿವೆ.

- ೭೪% ಗಣಕಯಂತ್ರಗಳು ದ್ವಿಭಾಷಿಕವಾಗಿವೆ.

- ಆಡಳಿತ ಭಾಷಾ ಕಾಯ್ದೆಯ ವಿಭಾಗ ೩(೩)ನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರಲಾಗಿಲ್ಲ. ಸದ್ಯಕ್ಕೆ ಇದರ ಅನುಷ್ಠಾನ ೮೭% ನಷ್ಟಿದೆ.

- 'ಸಿ' ವಲಯದಿಂದ 'ಎ', 'ಬಿ' ಮತ್ತು 'ಸಿ' ವಲಯದ ಕಛೇರಿಗಳಿಗೆ ಹಿಂದೀಯಲ್ಲಿ ಪತ್ರ ವ್ಯವಹಾರ ನಡೆಸಿರುವುದರ ಪ್ರಮಾಣ ಕ್ರಮವಾಗಿ ೩೦%, ೨೪% ಹಾಗೂ ೨೩% ಇದೆ. ಆದರೆ ಕೊಟ್ಟಿದ್ದ ಗುರಿ ಎಲ್ಲಾದಕ್ಕೂ ೫೫%.

- ಈ ವಲಯದ ಕಛೇರಿಗಳಲ್ಲಿ ನಿಯಮ ೫ರ ಉಲ್ಲಂಘನೆ ಆಗಿರುವುದು ಕಂಡುಬಂದೀದ್ದು, ಇದರ ಪ್ರಮಾಣ ಶೇ೩೩ ರಷ್ಟಿದೆ.

- ಕೇವಲ ೧೩% ನಷ್ಟು ಪ್ರಕಟಣೆಗಳು ಮಾತ್ರ ಹಿಂದೀ/ ದ್ವಿಭಾಷೆಯಲ್ಲಿವೆ.

೬.೨೨ ಮೇಲಿನ ಅಂಶಗಳಿಂದ ತಿಳಿಯುವುದೇನೆಂದರೆ 'ಎ' ವಲಯದ ಕಛೇರಿಗಳಲ್ಲಿ ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಬಳಸಲು ಒಳ್ಳೆಯ ಮೂಲಭೂತ ಸೌಕರ್ಯಗಳಿದ್ದರೂ ಸಿಬ್ಬಂದಿಗಳಲ್ಲಿ ಹಿಂದೀ ಬಳಸಬೇಕೆಂಬ ಮನೋಭಾವ ಇಲ್ಲದಿರುವುದು ಕಾಣುತ್ತದೆ.

೬.೨೩ ಮೇಲೆ ಹೇಳಿರುವಂತೆ 'ಬಿ' ವಲಯದ ಕಛೇರಿಗಳಲ್ಲಿರುವ ಕೊರತೆಯಿಂದಾಗಿ ಸಂಪೂರ್ಣವಾಗಿ ಹಿಂದೀ ಅನುಷ್ಠಾನ ಮಾಡಲು ಸಾಧ್ಯವಾಗಿಲ್ಲ.

೬.೨೪ 'ಸಿ' ವಲಯ ಹಿಂದೀ ಮಾತನಾಡುವ ಪ್ರದೇಶವಲ್ಲದಿದ್ದರೂ, ಶೇ೫೫ರಷ್ಟು ಸಿಬ್ಬಂದಿಗಳು ಹಿಂದೀ ಜ್ಞಾನವನ್ನು ಹೊಂದಿದ್ದಾರೆ. ಇಲ್ಲಿ ದ್ವಿಭಾಶಾ ಗಣಕಯಂತ್ರಗಳ ಸಂಖ್ಯೆ 'ಬಿ' ವಲಯಕ್ಕಿಂತ ಉತ್ತಮವಾಗಿದೆ. ಇಲ್ಲಿ ಆದ್ಯತೆಯ ಮೇಲೆ ಹಿಂದೀ ಹುದ್ದೆಗಳನ್ನು ಭರ್ತಿ ಮಾಡಬೇಕು ಹಾಗೂ ಎಲ್ಲಾ ಗಣಕಯಂತ್ರಗಳನ್ನೂ ದ್ವಿಭಾಷಾ ಗಣಕಯಂತ್ರಗೆ ಬದಲಿಸಬೇಕು.

೬.೨೫ ಹೊಸದಾಗಿ ರಚಿಸಲ್ಪಟ್ಟಿರುವ ರಾಜ್ಯಗಳಾದ ಚತ್ತೀಸ್‌ಗಡ್, ಉತ್ತರಾಂಚಲ್ ಹಾಗೂ ಜಾರ್ಖಂಡ್‌ಗಳಲ್ಲಿ ಎಲ್ಲಾ ಸಿಬ್ಬಂದಿಗಳಿಗೆ ಹಿಂದೀ ಜ್ಞಾನವಿದ್ದು, ಎಲ್ಲಾ ಕೆಲಸವನ್ನು ಹಿಂದೀಯಲ್ಲೇ ಮಾಡುತ್ತಾರೆ. ೨೦೦೨ರಲ್ಲಿ ರಚನೆಯಾದ ಉತ್ತರಾಂಚಲದ ಸಂಪೂರ್ಣ ವ್ಯವಹಾರ ಹಿಂದೀಯಲ್ಲೇ ನಡೆಯುತ್ತಿದೆ. ೨೦೦೩ರಲ್ಲಿ ರಚನೆಯಾದ ಜಾರ್ಖಂಡ್ ಹೊಸದಾಗಿ ಆಡಳಿತ ಬಾಷೆಯ ಬಗ್ಗೆ ಘೋಷಣೆ ಮಾಡಿಲ್ಲ ಮತ್ತು ಹಿಂದೀನ ಬಿಹಾರದ ನೀತಿಯನ್ನೇ ಅನುಸರಿಸುತ್ತಿದೆ. ಇಲ್ಲಿಯೂ ಎಲ್ಲಾ ವ್ಯವಹಾರ ಹಿಂದೀಯಲ್ಲೇ ನಡೆಯುತ್ತಿದೆ. ಹಿಂದೀ ಬಾಷೆಯ ಪತ್ರಗಳಿಗೆ ಮಾತ್ರವಲ್ಲದೆ ಇಂಗ್ಲೀಶಿನ ಪತ್ರಗಳಿಗೂ ಇಲ್ಲಿ ಹಿಂದೀಯಲ್ಲೇ ಉತ್ತರವನ್ನು ಬರೆಯಲಾಗುತ್ತಿದೆ. ರಾಜ್ಯಸರ್ಕಾರಿ ನೌಕರಿಯ ನೇಮಕಾತುಃಗೆ ಹಿಂದೀ ಭಾಷೆಯ ಅರಿವಿರಬೇಕಾದ್ದು ಕಡ್ಡಾಯವಾಗಿದೆ ಎಂಬುದನ್ನು ಸಮಿತಿಯು ಗಮನಕ್ಕೆ ತೆಗೆದುಕೊಂಡಿದೆ. ಈ ಹಿಂದೆ ಈ ರಾಜ್ಯಗಳು 'ಎ' ವಲಯದ ರಾಜ್ಯಗಳ ಭಾಗವಾಗಿದ್ದವು ಆದರೆ ಹೊಸರಾಜ್ಯಗಳಾಗಿದ್ದರಿಂದ ತಾಂತ್ರಿಕವಾಗಿ ಈಗ ಈ ರಾಜ್ಯಗಳು 'ಸಿ' ವಲಯದಲ್ಲಿವೆ. ಇದು ಅಸಂಬದ್ಧ ಮತ್ತು ಸರಿಯಿಲ್ಲ. ಹಾಗಾಗಿ ಸಮಿತಿಯು ಈ ರಾಜ್ಯಗಳನ್ನು 'ಎ' ವಲಯಕ್ಕೆ ಸೇರಿಸಬೇಕೆಂದು ಶಿಫಾರಸ್ಸು ಮಾಡುತ್ತದೆ.

ಸಮಿತಿಯು ಮೇಲೆ ಕಂಡುಕೊಂಡಿರುವ ನಿರ್ಣಯಗಳ ಮೇಲೆ ಈ ಕೆಳಗಿನ ಶಿಫಾರಸ್ಸುಗಳನ್ನು ಸೂಚಿಸುತ್ತವೆ:

೧. ಹಿಂದೀ/ ದ್ವಿಭಾಷಿಕ ರಬ್ಬರ್ ಸ್ಟಾಂಪಿನ ಮೂಲಕ ಸೇವಾ ಪುಸ್ತಕ/ಕಡತಗಳಲ್ಲಿ ದಿನಪ್ರತಿದಿನದ ದಾಖಲೆಗಳನ್ನು ಮಾಡಬೇಕು. ಈ ಸ್ಟಾಂಪುಗಳನ್ನು ದೇಶದ ಎಲ್ಲೆಡೆ ಬಳಸುವಂತೆ ಮಾಡಲು ಏಕರೂಪ ಪದ್ಧತಿಯನ್ನು ತರಬೇಕು. ವಲಯಗಳ ಆಧಾರದ ಮೇರೆಗೆ ನಿಯಮದಲ್ಲಿ ಕೊಡಮಾಡಿರುವ "ಆದಷ್ಟುಮಟ್ಟಿಗೆ" ಎಂಬ ರಿಯಾಯಿತಿಯನ್ನು ತಗೆದುಹಾಕಬೇಕು.

೨. ಆಡಳಿತ ಭಾಷಾ ಹುದ್ದೆಗಳನ್ನು ಸೃಷ್ಟಿಸಲು ಇರುವ ಪ್ರಕ್ರಿಯೆಯನ್ನು ಸರಳೀಕರಿಸುವ ಮೂಲಕ ಅತಿ ಕಡಿಮೆ ಸಮಯದಲ್ಲಿ ಈ ಹುದ್ದೆಗಳನ್ನು ತುಂಬುವಂತಾಗಬೇಕು ಹಾಗೂ ಹಿಂದೀ ಹುದ್ದೆಗಳ ಸೃಷ್ಟಿಯ ಮೇಲೆ ಯಾವುದೇ ನಿಷೇಧ ಇರಬಾರದು.

೩. 'ಸಿ' ವಲಯದ ರಿಜಿಸ್ಟರ್‌ಗಳಲ್ಲಿ ಇಂತಿಷ್ಟು ಪ್ರತಿಶತ ದಾಖಲೆಗಳನ್ನು ಹಿಂದೀಯಲ್ಲಿಯೇ ಮಾಡಬೇಕು ಎನ್ನುವುದನ್ನು ನಿಗದಿಗೊಳಿಸಬೇಕು ಹಾಗೂ ರಿಜಿಸ್ಟರ್‌ಗಳಲ್ಲಿರುವ "ಆದಷ್ಟುಮಟ್ಟಿಗೆ ಎಂಬ ರಿಯಾಯಿತಿಯನ್ನು ತೆಗೆದುಹಾಕಬೇಕು.

೪. ಹೊಸದಾಗಿ ಸ್ಥಾಪಿಸಲಾಗಿರುವ ಚತ್ತೀಸ್‌ಗಡ್, ಉತ್ತರಾಂಚಲ್ ಹಾಗೂ ಜಾರ್ಖಂಡ್ ರಾಜ್ಯಗಳೂ ಈ ಮೊದಲು 'ಎ' ವಲಯದ ರಾಜ್ಯಗಳ ಭಾಗಗಳಾಗಿದ್ದವು ಹಾಗೂ ಈ ರಾಜ್ಯಗಳಲ್ಲಿ ಎಲ್ಲಾ ಕೆಲಸವು ಹಿಂದೀಯಲ್ಲಿ ಮಾಡಲಾಗುತ್ತಿದೆ. ಹಾಗಾಗಿ ಈ ರಾಜ್ಯಗಳನ್ನು 'ಎ' ವಲಯಕ್ಕೆ ಸೇರಿಸಬೇಕು. ಆಡಳಿತ ಭಾಷೆ ಇಲಾಖೆಯು ಈ ನಿಟ್ಟಿನಲ್ಲಿ ಆಡಳಿತ ಭಾಷೆ ಕಾಯ್ದೆ, ೧೯೭೬ರಲ್ಲಿ ಬೇಕಾಗಿರುವ ಬದಲಾವಣೆ ಮಾಡಲು ಮುಂದಾಗಬಹುದು.

## ೭. ಆಡಳಿತ ಭಾಷಾ ಕಾಯ್ದೆ, ೧೯೬೩ ರ ವಿಭಾಗ ೩(೩)ರ ಪಾಲನೆ

೭.೧ ಕೇಂದ್ರದ ಆಡಳಿತ ಭಾಷಾ ಕಾಯ್ದೆಯನ್ನು ಸಂವಿಧಾನದ ಈ ಕೆಳಗಿನ ವಿಧಿಗಳನ್ವಯ ಪಾಲನೆ ಮಾಡಲಾಗುತ್ತಿದೆ. ೧೨೦ (ಭಾಗ ೫), ೨೧೦ (ಭಾಗ ೬), ೩೪೩, ೩೪೪ ಹಾಗೂ ಸಂವಿಧಾನದ ೩೪೮ರಿಂದ ೩೫೭ರ ವಿಧಿಯವರೆಗೂ. ಹಿಂದೀಯನ್ನು ಆಡಳಿತ ಭಾಷೆಯನ್ನಾಗಿ ಉಪಯೋಗಿಸಲು ನಡೆಯುತ್ತಿದ್ದ ಚರ್ಚೆಯಲ್ಲಿ ಹಿಂದೀ ಬಳಕೆಯನ್ನು ಸುಲಭಗೊಳಿಸಲು ಸಂವಿಧಾನ ಜಾರಿಯಾದ ದಿನದಿಂದ ನಂತರದ ೧೫ ವರ್ಷಗಳವರೆಗೂ ಇಂಗ್ಲೀಶ್ ಭಾಷೆಯನ್ನು ಉಪಯೊಗಿಸಲು ಅನುಮತಿ ನೀಡಲಾಗಿತ್ತು.

೭.೨ ಬಹು ಚರ್ಚೆಯ ನಂತರ ಬದಲಾವಣೆಯ ಸಮಯವನ್ನು ೧೫ ವರ್ಷಗಳವರೆಗೂ ವಿಸ್ತರಿಸಲಾಯಿತು. ಸಂವಿಧಾನ ಬರೆದವರಿಗೆ ಹಿಂದೀಯನ್ನು ಎಲ್ಲಾ ವಲಯಗಳಲ್ಲೂ ಸಂಪೂರ್ಣವಾಗಿ ಜಾರಿಮಾಡಲು ೧೫ ವರ್ಷಗಳ ಕಾಲಾವಧಿಯಾದರೂ ಬೇಕೇ ಬೇಕೆನ್ನಿಸಿತ್ತು. ಈ ೧೫ ವರ್ಷಗಳಲ್ಲಿ ಇಂಗ್ಲೀಶಿನ ಜೊತೆಗೆ ಹಿಂದೀಯ ಬಳಕೆಯನ್ನು ಕ್ರಮೇಣವಾಗಿ ಬಳಸಲು ಅವಕಾಶ ನೀಡಬೇಕು ಇದರಿಂದ ಬದಲಾವಣೆಗೆ ಸುಲಭವಾಗುತ್ತದೆ. ಇದಕ್ಕೆ ಬೇಕಾದ ಅವಶ್ಯಕ ಕ್ರಿಯೆ

ಹಾಗೂ ತೀರ್ಮಾನಗಳನ್ನು ಕೈಗೊಳ್ಳಲು ಸರ್ಕಾರಕ್ಕೆ ಬಿಡಲಾಗಿತ್ತು. ೩೪೩(೨)ನೇ ವಿಧಿಯು ಆಡಳಿತಾತ್ಮಕ ಕೆಲಸಗಳಿಗಾಗಿ ಬೇಕೆಂದಲ್ಲಿ ಇಂಗ್ಲೀಶಿನ ಜೊತೆಗೆ ಹಿಂದೀಯನ್ನು ಉಪಯೋಗಿಸುವುದನ್ನು ನಿರ್ದೇಶಿಸಲು ರಾಷ್ಟ್ರಪತಿಗಳಿಗೆ ಅಧಿಕಾರವನ್ನು ನೀಡುತ್ತದೆ ಹಾಗೂ ೩೪೩(೩)ನೇ ವಿಧಿಯು ಸಂಸತ್ತಿಗೆ ಇಂಗ್ಲೀಶ್ ಬಳಕೆಯನ್ನು ೧೯೬೫ರ ನಂತರ ವಿಸ್ತರಿಸಲು ಅಧಿಕಾರ ನೀಡುತ್ತದೆ.

೭.೩ ಸಂಸತ್ತಿನಲ್ಲಿ ಅನುಮೋದನೆಗೊಂಡಿರುವ ಆಡಳಿತ ಭಾಷಾ ಕಾಯ್ದೆ, ೧೯೬೩ರ ವಿಭಾಗ–೩ ೧೯೬೫ರ ನಂತರ ಹಿಂದೀಯ ಜೊತೆಯಲ್ಲಿ ಇಂಗ್ಲೀಶನ್ನು ಬಳಸಲು ಅವಕಾಶ ನೀಡುತ್ತದೆ.

'ಉಪವಿಭಾಗ (೧)ನ್ನು ಹೊರತು ಪಡಿಸಿ ಹಿಂದೀ ಹಾಗೂ ಇಂಗ್ಲೀಶ್ ಭಾಷೆಗಳನ್ನು ಈ ಕೆಳಕಂಡ ಕೆಲಸಗಳಿಗೆ ಉಪಯೋಗಿಸತಕ್ಕದ್ದು:

೧. ಕೇಂದ್ರಸರ್ಕಾರ ಅಥವಾ ಸಚಿವಾಲಯ ಅಥವಾ ಕೇಂದ್ರಸರ್ಕಾರ ಸ್ವಾಮ್ಯದ ಕಛೇರಿಗಳ ನಿರ್ಣಯಗಳು, ಸಾಮಾನ್ಯ ಆದೇಶಗಳು, ನಿಯಮಗಳು, ಅಧಿಸೂಚನೆಗಳು, ಆಡಳಿತ ವರದಿಗಳು ಅಥವಾ ಇತರೇ ವರದಿಗಳು ಅಥವಾ ಪತ್ರಿಕಾ ಪ್ರಕಟಣೆಗಳು.

೨. ಸಂಸತ್ತಿನ ಮುಂದೆ ಇಡಲಾಗುವ ಆಡಳಿತ ಹಾಗೂ ಇತರೇ ವರದಿಗಳು ಮತ್ತು ಸರ್ಕಾರಿ ಕಡತಗಳು.

೩. ಕೇಂದ್ರಸರ್ಕಾರಿ ಅಥವಾ ಸಚಿವಾಲಯ ಅಥವಾ ಕೇಂದ್ರಸರ್ಕಾರಿ ಸ್ವಾಮ್ಯದ ಕಛೇರಿಗಳ ಕರಾರು ಮತ್ತು ಒಪ್ಪಂದಗಳು, ಪರವಾನಿಗೆಗಳು, ಟೆಂಡರ್ ಪ್ರಕಟಣೆಗಳು ಹಾಗೂ ಅರ್ಜಿ ನಮೂನೆಗಳು.

೭.೪ ಆಡಳಿತ ಭಾಷಾ ಕಾಯ್ದೆ, ೧೯೬೩ ರ ವಿಭಾಗ ೪(೧) ರ ಅಡಿಯಲ್ಲಿ ಆಡಳಿತ ಭಾಷಾ ಸಂಸತ್ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ಮುಖ್ಯ ಉದ್ದೇಶ ಕೇಂದ್ರಸರ್ಕಾರದ ಕಛೇರಿಗಳಲ್ಲಿ ಹಿಂದೀ ಬಳಕೆಯ ಪ್ರಮಾಣವನ್ನು ಪರಾಮರ್ಶಿಸುವುದು. ಈ ಸಮಿತಿಯು ತನ್ನ ಕರ್ತವ್ಯ ಮಾಡುವುದರ ಜೊತೆಗೆ

ದೇಶಾದ್ಯಂತ ಇರುವ ಕಛೇರಿಗಳಿಗೆ ಭೇಟಿ ನೀಡಿತು. ಈ ಸಮಿತಿಯು ಅನೇಕ ಸಲಹೆಗಳನ್ನು ನೀಡಿರುವುದರ ಜೊತೆಯಲ್ಲಿ ಕಾಯ್ದೆಯ ವಿಭಾಗ ೩(೩)ಕ್ಕೆ ಬದ್ಧವಾಗಿರಬೇಕು ಎನ್ನುವುದರ ಬಗ್ಗೆ ಒತ್ತುಕೊಟ್ಟಿದೆ.

೭.೫ ಸಮಿತಿಯು ೧.೧.೨೨೦೨ರಿಂದ ೩೧.೩.೨೦೦೫ರವರೆಗೂ ವಿವಿಧ ಸಚಿವಾಲಯಗಳು, ಸಾರ್ವಜನಿಕ ಉದ್ದಿಮೆ, ಬ್ಯಾಂಕ್‌ಗಳು, ಕಾರ್ಪೋರೇಷನ್‌ಗಳು ಇತ್ಯಾದಿಗಳಿಗೆ ಭೇಟಿ ನೀಡಿ ವಿಭಾಗ ೩(೩)ಕ್ಕೆ ಅವು ಬದ್ಧವಾಗಿರುವ ಬಗ್ಗೆ ತಮ್ಮ ವರದಿಯಲ್ಲಿ ಹೇಳಿವೆ. ಇಲ್ಲಿ ४३ ಸಚಿವಾಲಯಗಳು ಹೇಗೆ ನಿಯಮಗಳನ್ನು ಪಾಲಿಸುತ್ತಿವೆ ಎಂಬ ಬಗ್ಗೆ ಒಂದು ಪಟ್ಟಿಯನ್ನೂ ನೀಡಿದ್ದಾರೆ. ಒಟ್ಟು ४३ ಇಲಾಖೆಗಳಿದ್ದು ಅವುಗಳಲ್ಲಿ ೧೩ ಇಲಾಖೆಗಳು ೧೦೦% ಪಾಲಿಸುತ್ತಿವೆ, ೧೮ ಇಲಾಖೆಗಳು ೯೦%ಕ್ಕಿಂತಲೂ ಹೆಚ್ಚು, ೧೯ ಇಲಾಖೆಗಳು ೮೦%ಕ್ಕಿಂತಲೂ ಹೆಚ್ಚು ಪಾಲನೆ ಮಾಡುತ್ತಿವೆ. ೩ ಇಲಾಖೆಗಳಲ್ಲಿ ಮಾತ್ರಾ ೬೩%~೮೦%ರಷ್ಟು ಪಾಲನಾ ಪ್ರಮಾಣವಿದೆ.

೭.೬ ಸಮಿತಿಯು ಹಿಂದೀ ಬಳಕೆಯನ್ನು ಅಳೆಯುತ್ತಿರುವುದರಿಂದಾಗಿ ಮೇಲೆ ಹೇಳಿರುವ ಪಟ್ಟಿಯಲ್ಲಿ ವಿಭಾಗ ೩(೩) ಅಡಿಯಲ್ಲಿ ಹಿಂದೀಯಲ್ಲಿ ಮಾತ್ರವೇ ಇರುವ ಕಡತಗಳು ಸೇರಿವೆ.

೭.೭ ವಿಭಾಗ ೩(೩)ರ ಪಾಲನೆ ಶೇ೧೦೦ ಇರಬೇಕಾಗಿದ್ದರೂ ಕೂಡಾ ಮೇಲೆ ತಿಳಿಸಿದ ಮಾಹಿತಿಯಿಂದ ಹಲವಾರು ಕೇಂದ್ರಸರ್ಕಾರಿ ಕಛೇರಿಗಳು ನಿಯಮ ಉಲ್ಲಂಘಿಸಿರುವುದನ್ನು ಕಾಣಬಹುದಾಗಿದೆ. ಆಡಳಿತ ಭಾಷಾ ನಿಯಮಗಳ ನಿಯಮ ೬ರ ಪ್ರಕಾರ ಯಾವ ಅಧಿಕಾರಿ ಇಂತಹ ಕಡತಗಳಿಗೆ ಸಹಿ ಹಾಕಿರುತ್ತರೋ ಅವರೇ ಉಲ್ಲಂಘನೆಯ ಜವಾಬ್ದಾರಿ ಹೊರಬೇಕಾಗುತ್ತದೆ. ಆದರೆ ಸಮಿತಿಯ ವಿಚಾರಣೆಯಲ್ಲಿ ಅಧಿಕಾರಿಗಳು ನಿಯಮ ಉಲ್ಲಂಘಿಸಿದ್ದರೂ ಸರ್ಕಾರದ ನೀತಿಯಾದ ಹಿಂದೀ ಬಳಕೆಯನ್ನು ಪ್ರೋತ್ಸಾಹದ ಮೂಲಕ ಹೆಚ್ಚಿಸಬೇಕು ಎನ್ನುವುದಕ್ಕೆ ಗೌರವಕೊಟ್ಟು ಅವರ ವಿರುದ್ಧ ಯಾವ ಕ್ರಮವನ್ನು ಕೈಗೊಂಡಿಲ್ಲ. ಇಂಗ್ಲೀಶನ್ನು ಹಿಂದೀಗೆ ಬದಲಾಗಿ ಬಳಸುತ್ತಾ ಶಾಸನಾತ್ಮಕ ಉಲ್ಲಂಘನೆಯನ್ನು ಮಾಡಿರುವುದನ್ನು ಮಾತ್ರಾ ಸಮಿತಿಯು ಗಂಭೀರವಾಗಿ ಪರಿಗಣಿಸುತ್ತದೆ.

೭.೮ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ ಮತ್ತು ಸಂಸ್ಥೆಗಳ ವ್ಯವಹಾರ ಸಚಿವಾಲಯಗಳಲ್ಲಿ ವಿಭಾಗ ೩(೩)ರ ಅನುಸರಣೆ ಶೇ೭೦ಕ್ಕಿಂತ ಕಡಿಮೆಯಿದೆ.

೭.೮ ತಮ್ಮ ಪ್ರಶ್ನಾವಳಿಗಳ ಮೂಲಕ ಸಮಿತಿಯು ಕಂಡುಕೊಂಡಿರುವ ಅಂಶಗಳೆಂದರೆ ವಿಭಾಗ ೩(೩)ರ ಅನುಸರಣೆಯನ್ನು ಈ ಕೆಳಗೆ ತಿಳಿಸಿರುವ ವರ್ಗದ ದಾಖಲೆಗಳಲ್ಲಿ ಉಲ್ಲಂಘಿಸಲಾಗಿದೆ.

೧. ಸಾಮಾನ್ಯ ಆದೇಶಗಳು (೮೭೮೫೫)

೨. ಪರವಾನಗಿಗಳು (೨೩೯೯೫)

೩. ಕರಾರುಗಳು (೧೫೨೦೨)

| ಕ್ರಮ ಸಂಖ್ಯೆ | ಕಡತಗಳು | ಕೇವಲ ಇಂಗ್ಲೀಶಿನಲ್ಲಿ | ಕೇವಲ ಹಿಂದೀಯಲ್ಲಿ |
|---|---|---|---|
| ೧ | ಸಾಮಾನ್ಯ ಆದೇಶಗಳು | ೪೪೫೭೨ | ೪೩೨೮೩ |
| ೨ | ಅಧಿಸೂಚನೆಗಳು | ೯೬೨ | ೧೩೦ |
| ೩ | ಪತ್ರಿಕಾ ಪ್ರಕಟಣೆಗಳು | ೩೮೫ | ೨೧೮೭ |
| ೪ | ಕರಾರುಗಳು | ೧೪೦೬೨ | ೧೧೪೦ |
| ೫ | ಒಪ್ಪಂದಗಳು | ೧೫೧೫ | ೧೮೨ |
| ೬ | ಲೈಸನ್ಸ್ | ೨೨೪೧ | ೫೦೭ |
| ೭ | ಪರವಾನಗಿಗಳು | ೨೩೪೨೮ | ೧೬೭ |
| ೮ | ಟೆಂಡರುಗಳ ಸೂಚನಾಪತ್ರ ಮತ್ತು ಅರ್ಜಿಗಳು | ೧೮೩೭ | ೫೬೪ |
| ೯ | ಗೊತ್ತುವಳಿಗಳು | ೮ | ೫ |
| ೧೦ | ನಿಯಮಗಳು | ೨೦ | ೬ |
| ೧೧ | ಸಂಸತ್ತಿನ ಮುಂದೆ ಇಡಲಾಗಿರುವ ಕಾರ್ಯಾಲಯ ಪತ್ರಗಳು | ೫೧ | ೯ |

| | | | |
|---|---|---|---|
| ೧೨ | ಸಂಸತ್ತಿನ ಮುಂದೆ ಇಡಲಾಗಿರುವ ಆಡಳಿತ ಮತ್ತು ಇತರೆ ವರದಿಗಳು | ೮ | ೧ |
| ೧೩ | ಆಡಳಿತ ಮತ್ತು ಇತರೆ ವರದಿಗಳು | ೨೦೩ | ೧೬೪೪ |

ಇವಲ್ಲದೆ ಹೈದರಾಬಾದಿನ ವಿಮಾ ನಿಯಂತ್ರಣ ಮತ್ತು ಅಭಿವೃದ್ಧಿ ಪ್ರಾಧಿಕಾರವು ೧೪೨,೩೪೪ ಪರವಾನಿಗೆಗಳನ್ನು ಕೇವಲ ಇಂಗ್ಲೀಶಿನಲ್ಲಿ ನೀಡಿರುತ್ತದೆ.

೭.೧೦ ಕೇವಲ ಹಿಂದೀಯಲ್ಲಿ ಕಡತಗಳನ್ನು ನೀಡುವ ಬಹುತೇಕ ಕಛೇರಿಗಳು 'ಎ' ವಲಯದಲ್ಲಿದ್ದರೆ, ಕೇವಲ ಇಂಗ್ಲೀಶಿನಲ್ಲಿ ಕಡತಗಳನ್ನು ನೀಡುವ ಕಛೇರಿಗಳು 'ಸಿ' ವಲಯದಲ್ಲಿವೆ.

೭.೧೧ 'ಎ', 'ಬಿ' ಮತ್ತು 'ಸಿ' ವಲಯಗಳ ಕಛೇರಿಗಳಲ್ಲಿ ವಿಭಾಗ ೩(೩)ರ ಪಾಲನೆಯ ಪಟ್ಟಿಯನ್ನು ಕೆಳಗೆ ನೀಡಲಾಗಿದೆ

| ಪ್ರಾಂತ | ೧-೧- ೧೯೯೭ರಿಂದ ೩೧-೧೨-೨೦೦೧ | ೧-೧-೨೦೦೨ರಿಂದ ೩೧-೩-೨೦೦೫ |
|---|---|---|
| ಎ | ೮೬% | ಸುಮಾರು ೭೪% |
| ಬಿ | ೬೭% | ಸುಮಾರು ೭೮% |
| ಸಿ | ೬೦% | ಸುಮಾರು ೯೩% |

ಬಿ ಮತ್ತು ಸಿ ವಲಯದಲ್ಲಿ ಹಿಂದೀ ಬಳಕೆ ಹೆಚ್ಚಿದೆ.

೭.೧೩ ಅಧಿಕಾರಿಗಳು ವಿಭಾಗ ೩(೩) ರ ಅನುಸರಣೆ ಮಾಡದಿರುವುದಕ್ಕೆ ನೀಡುವ ಕಾರಣಗಳು:

- ಆ ವಲಯದಲ್ಲಿ ಹಿಂದೀ ದಿನಪತ್ರಿಕೆಗಳು ಲಭ್ಯವಿಲ್ಲ.
- ಹಿಂದೀ ಬಲ್ಲ ಅಧಿಕಾರಿ/ ಸಿಬ್ಬಂದಿಗಳು ಲಭ್ಯವಿಲ್ಲ.

- ಹೊರದೇಶಗಳು/ ಸಂಸ್ಥೆಗಳ ಜೊತೆ ಮಾಡಿಕೊಳ್ಳುವ ಒಪ್ಪಂದಗಳು ಹಾಗೂ ನಿಲುವಳಿಗಳು ಕೇವಲ ಇಂಗ್ಲೀಶಿನಲ್ಲಿ ಇರುವುದು.
- ಹಿಂದೀ ಕೆಲವು ರಾಜ್ಯಗಳ ಆಡಳಿತ ಭಾಷೆಯಾಗಿದ್ದು, ಕೇವಲ ಹಿಂದೀಯಲ್ಲಿ ದಾಖಲೆಗಳನ್ನು ನೀಡುವುದು ವಿಭಾಗ ೩(೩)ರ ಪಾಲನೆ ಮಾಡಿದಂತೆ ಎಂದು ಭಾವಿಸಿರುವುದು

೭.೧೪ ಕಾಯ್ದೆ ಜಾರಿಯಾಗಿ ೪೦ ವರ್ಷಗಳಾಗುತ್ತಾ ಬಂದಿದ್ದರೂ ನಿಯಮ ೩(೩)ರ ಪಾಲನೆಯ ಪ್ರಮಾಣ ತೃಪ್ತಿಕರವಾಗಿಲ್ಲ. ಆದ್ದರಿಂದ ಸಮಿತಿಯು ಕೆಳಗಿನ ಕ್ರಮಗಳನ್ನು ಕೈಗೊಳ್ಳಬೇಕು ಎಂದು ಶಿಫಾರಸ್ಸು ಮಾಡುತ್ತದೆ.

೧. ವಿಭಾಗ ೩(೩)ರ ಅನುಸರಣೆಯನ್ನು ನೋಡಿಕೊಳ್ಳಲು ಹಿರಿಯ ಅಧಿಕಾರಿಗಳ ಮಟ್ಟದಲ್ಲಿ ಚೆಕ್‌ಪಾಯಿಂಟ್‌ಗಳಿರಬೇಕು ಹಾಗೂ ಅನುಸರಣೆಯನ್ನು ನೋಡಿಕೊಳ್ಳಲು ಬಲವಾದ ಮೇಲ್ವಿಚಾರಣೆಯನ್ನು ಹೊಂದಿರಬೇಕು.

೨. ಶೇ೯೦ಕ್ಕಿಂತ ಕಡಿಮೆ ಪಾಲನೆಮಾಡುತ್ತಿರುವ ಸಚಿವಾಲಯಗಳಲ್ಲಿ ಕಾರ್ಯದರ್ಶಿಗಳು ಇದರ ಬಗ್ಗೆ ಖುದ್ದು ಗಮನ ಹರಿಸಬೇಕು.

೩. ಹಿಂದೀ ಕಾರ್ಯಾಗಾರಗಳ ಸಮಯದಲ್ಲಿ ವಿಭಾಗ ೩(೩)ರ ಕಡ್ಡಾಯ ಪಾಲನೆಯ ಬಗ್ಗೆ ಅಧಿಕಾರಿಗಳಿಗೆ ಮನವರಿಕೆ ಮಾಡಿಕೊಡಬೇಕು.

೪. ಸಮಿತಿಯು ತನ್ನ ವರದಿಯ ನಾಲ್ಕನೇ ಭಾಗದಲ್ಲಿ ಸಂಸತ್ತಿನ ಮುಂದೆ ಇಡುವ ದಾಖಲೆಗಳನ್ನು ಹೊರತುಪಡಿಸಿ 'ಎ' ವಲಯದ ಎಲ್ಲಾ ದಾಖಲೆಗಳು ಕೇವಲ ಹಿಂದೀಯಲ್ಲಿ ಮಾತ್ರಾ ಇರಬೇಕು ಎಂದು ಶಿಫಾರಸ್ಸು ಮಾಡಿದೆ. 'ಎ' ವಲಯದಲ್ಲಿನ ಸದ್ಯದ ಪರಿಸ್ಥಿತಿಯನ್ನು ಗಮನಿಸಿದರೆ, ಮೇಲೆ ತಿಳಿಸಿರುವ ದಾಖಲಾತಿಗಳನ್ನು ಹೊರತುಪಡಿಸಿ ಉಳಿದಂತೆ ವಿಭಾಗ ೩(೩)ರ ಅನ್ವಯ ಈಗಿರುವ ಇಂಗ್ಲೀಶಿನ ಕಡ್ಡಾಯ ಬಳಕೆಯನ್ನು ಇಡೀ 'ಎ' ವಲಯದಲ್ಲಿ ಕೈಬಿಡಬೇಕೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ. ಕೇಂದ್ರ ಗೃಹಇಲಾಕೆಯು ಹಿಂದೀ ಆಡಳಿತ

ಭಾಷೆಯಾಗಿರದ ರಾಜ್ಯಗಳಲ್ಲಿ ತಮ್ಮ ಭಾಷೆಯ ಜೊತೆಗೆ ಹಿಂದೀಭಾಷೆಗೂ ಸಹ ಆಡಳಿತ ಭಾಷೆಯ ಸ್ಥಾನವನ್ನು ನೀಡುವಂತೆ ಆ ರಾಜ್ಯಗಳನ್ನು ಒಪ್ಪಿಸಬೇಕು.

## ೮. ಹಿಂದೀ ಪ್ರಸಾರಕ್ಕಾಗಿ ಇರುವ ಸಂಸ್ಥೆಗಳು/ ಇಲಾಖೆಗಳು

ಈ ಭಾಗದಲ್ಲಿ ತಾಲ್ಲೂಕು ಆಡಳಿತ ಭಾಷಾ ಜಾರಿ ಸಮಿತಿ(TOLIC)ಯ ಕಾರ್ಯಚಟುವಟಿಕೆಗಳ ಬಗ್ಗೆ ಮಾತನ್ನಾಡಲಾಗಿದೆ. ತಾಲ್ಲೂಕು ಮಟ್ಟದಲ್ಲಿ ಹಿಂದೀಯನ್ನು ಹೇಗೆ ಹರದಬೇಕೆನ್ನುವ ಬಗ್ಗೆ, ಈಗಾಗಲೇ ಹೇಗೆ ಜಾರಿಯಾಗಿದೆ ಎನ್ನುವುದರ ಬಗ್ಗೆ, ಟೋಲಿಕ್‌ಗಳು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಹೇಳಲಾಗಿದೆ. ಟೋಲಿಕ್‌ಗಳಿಗೆ ಒದಗಿಸಬೇಕಾದ ಸೌಕರ್ಯಗಳ ಬಗ್ಗೆ ಸಲಹೆಗಳನ್ನೂ ನೀಡಲಾಗಿದೆ.

ಒಟ್ಟು ೨೪೯ ತಾಲ್ಲೂಕು ಆಡಳಿತ ಭಾಷಾ ಜಾರಿ ಸ್ಮಿತಿಗಳಿವೆ. ಯಾವುದೇ ಊರಿನಲ್ಲಿ ಹತ್ತಕ್ಕಿಂತ ಹೆಚ್ಚು ಸಂಖ್ಯೆಯ ಕೇಂದ್ರಸರ್ಕಾರಿ/ ಅಧೀನ ಸಂಸ್ಥೆಗಳ ಕಛೇರಿಗಳಿದ್ದರೆ ಅಲ್ಲೊಂದು ಟೋಲಿಕ್ ಇರಬೇಕೆನ್ನುವ ನಿಯಮವಿದೆ. ಪ್ರತಿವರ್ಷ ಎರಡು ಸಭೆಯನ್ನು ನಡೆಸುವುದು ಕಡ್ಡಾಯವಾಗಿದೆ. ಪ್ರತಿ ಸಭೆಗೆ ಆಡಳಿತ ಭಾಷಾ ಇಲಾಖೆಯು ಹಣವನ್ನು ಕೊಡುತ್ತದೆ. ಇದನ್ನು ಹೆಚ್ಚಿಸಬೇಕೆಂಬ ಬೇಡಿಕೆಯ ಬಗ್ಗೆ ಚರ್ಚಿಸಲಾಗಿದೆ.

ತಾಲ್ಲೂಕು ಆಡಳಿತ ಭಾಷಾ ಜಾರಿ ಸಮಿತಿಗಳ ಮಹತ್ವದ ಬಗ್ಗೆ ಪ್ರಸ್ತಾಪಿಸಲಾಗಿದೆ. ಭಾಷಾನೀತಿಯನ್ನು ಜಾರಿ ಮಾಡುವಲ್ಲಿ ಇವುಗಳ ಪಾತ್ರ ಹಿರಿದೆಂದು ಕೊಂಡಾಡಲಾಗಿದೆ. ಆಡಳಿತ ಭಾಷೆಗೆ ಸಂಬಂಧಪಟ್ಟ ಎಲ್ಲಾ ನೀತಿ, ನಿಯಮ, ಕಾನೂನು ಕಟ್ಟಳೆಗಳ ಬಗ್ಗೆ ನಗರಗಳ ಮಟ್ಟದಲ್ಲಿ ಒಂದೇ ಸೂರಿನಡಿಯಲ್ಲಿ ಮಾಹಿತಿ ಸಿಗುವಲ್ಲಿ ಟೋಲಿಕ್‌ಗಳ ಪಾತ್ರ ಹಿರಿದೆನ್ನಲಾಗಿದೆ.

ಹಿಂದೀ ಜಾರಿಯಲ್ಲಿ ಎದುರಾಗುವ ತೊಡರುಗಳನ್ನು ಟೋಲಿಕ್ ಸಭೆಯಲ್ಲಿ ಚರ್ಚಿಸಿ ಪರಿಹಾರ ಕಂಡುಕೊಳ್ಳುವುದು ಸಾಧ್ಯವಾಗಿದೆಯೆಂದು ಮೆಚ್ಚುಗೆ ಸೂಚಿಸಲಾಗಿದೆ.
ಟೋಲಿಕ್‌ಗಳ ಬಗ್ಗೆ ವಲಯವಾರು ಸಾರವನ್ನು ಕೊಡಲಾಗಿದೆ. ಟೋಲಿಕ್‌ಗಳು ಎದುರಿಸುತ್ತಿರುವ ತೊಡಕುಗಳ ಬಗ್ಗೆ ಚರ್ಚಿಸಲಾಗಿದೆ.

**ಕರ್ನಾಟಕದಲ್ಲಿನ ಟೋಲಿಕ್‌ಗಳು:** ಕರ್ನಾಟಕದಲ್ಲಿ ಬೆಂಗಳೂರು (ಬ್ಯಾಂಕುಗಳ ಟೋಲಿಕ್), ಮೈಸೂರು ಮತ್ತು ಮಂಗಳೂರು(ಬ್ಯಾಂಕುಗಳ ಟೋಲಿಕ್) ಗಳಲ್ಲಿರುವ ಟೋಲಿಕ್‌ಗಳ ಚಟುವಟಿಕೆಗಳ ಬಗ್ಗೆ ಬರೆಯಲಾಗಿದೆ. ಬೆಂಗಳೂರಿನ ಟೋಲಿಕ್‌ನ ಅಧ್ಯಕ್ಷರು ಸಿಂಡಿಕೇಟ್ ಬ್ಯಾಂಕಿನ ಜನರಲ್ ಮ್ಯಾನೇಜರ್‌ರವರು. ಈ ಕಛೇರಿಯಲ್ಲಿ 'ಮಾಹಿತಿ ತಂತ್ರಜ್ಞಾನ ಮತ್ತು ದ್ವಿಭಾಷಾ ಸಾಫ್ಟ್‌ವೇರ್‌ಗಳು' ಎನ್ನುವ ಸಮ್ಮೇಳನವನ್ನು ನಡೆಸಿದ್ದಾರೆ. ವೈಭವದ ಹಿಂದೀ ದಿನಾಚರಣೆ ಆಚರಿಸಿ, ೨೨ ವೈವಿಧ್ಯಮಯ ಸ್ಪರ್ಧೆಗಳನ್ನು ಅದ್ದೂರಿ ಹಿಂದೀ ಸಾಂಸ್ಕೃತಿಕ ಕಾರ್ಯಕ್ರಮವನ್ನೂ ನಡೆಸಿದ್ದಾರೆ ಎಂದೆಲ್ಲಾ ಮೆಚ್ಚುಗೆ ಸೂಸಲಾಗಿದೆ. ಮೈಸೂರಿನಲ್ಲಿ ಭಾರತೀಯ ಭಾಷಾ ಸಂಸ್ಥೆಯ ಚೇರ್‌ಮನ್ನರು ಟೋಲಿಕ್‌ನ ಮುಖುಸ್ಥರು. ಇಲ್ಲಿ ೮೨ ಸದಸ್ಯ ಕಛೇರಿಗಳಿವೆ. ಆದರೆ ಸಭೆಗೆ ನಿಯಮಿತವಾಗಿ ಬರುವುದು ಬರೀ ಹತ್ತು ಕಛೇರಿಯವರು. ಇಲ್ಲಿನ ಮುಖ್ಯಸ್ಥರು ಟೋಲಿಕ್‌ನ ಸಭೆಗಳಿಗೆ ಹಿಂದೀ ಭಾಷೆಯ ಪ್ರಖ್ಯಾತ ಕವಿಗಳನ್ನು, ಲೇಖಕರನ್ನು ಕರೆಸುವ ಮೂಲಕ ಜನರನ್ನು ಸೆಳೆಯುವ ಬಗ್ಗೆ ಸಲಹೆ ನೀಡಿದ್ದಾರೆ. ಇಲ್ಲಿನ ಕಛೇರಿಗಳಲ್ಲಿ ಹಿಂದೀ ತರ್ಜುಮೆದಾರರು, ಹಿಂದೀ ಸ್ಟೆನೋ, ಹಿಂದೀ ಟೈಪಿಸ್ಟ್ ಮೊದಲಾದ ಹುದ್ದೆಗಳನ್ನು ಕಡ್ಡಾಯಗೊಳಿಸುವಂತೆ ಸಲಹೆ ನೀಡಿದ್ದಾರೆ. ಹಿಂದೀ ಸ್ಟೆನೋಗ್ರಾಫರ್ ಹುದ್ದೆಗೆ ತರಬೇತಿ ನೀಡುವ ವ್ಯವಸ್ಥೆ ಮೈಸೂರಿನಲ್ಲಿಲ್ಲ ಎಂದು ಮರುಗಲಾಗಿದೆ. ಮಂಗಳೂರಿನ ಟೋಲಿಕ್‌ನ ಅಧ್ಯಕ್ಷರು ಇಲ್ಲಿನ ಕಾರ್ಪೋರೇಶನ್ ಬ್ಯಾಂಕಿನ ಸಿಎಂಡಿಯವರೇ ಆಗಿದ್ದಾರೆ. ಇಲ್ಲಿಯೂ ಹಿಂದೀ ಜಾರಿಯ ಪ್ರಯತ್ನಗಳು ಚೆನ್ನಾಗಿ ನಡೆದಿದೆ ಎನ್ನಲಾಗಿದೆ.

**ಟೋಲಿಕ್‌ನ ಸಾಮಾನ್ಯ ಸಮಸ್ಯೆಗಳು:** ಸಭೆಗಳಲ್ಲಿ ಅನೇಕ ಅಧಿಕಾರಿಗಳು ನಿಯಮಿತವಾಗಿ ಭಾಗವಹಿಸುತ್ತಿಲ್ಲ, ಮುಖ್ಯಸ್ಥರು ತಾವೇ ಭಾಗವಹಿಸದೆ ತಮ್ಮ ಪ್ರತಿನಿಧಿಗಳೆಂದು ಟೈಪಿಸ್ಟುಗಳನ್ನು ಕಳಿಸುತ್ತಾರೆ, ಟೋಲಿಕ್‌ನ ಸಭೆಗಳು ಇಂಥಾ ಸಂದರ್ಭಗಳಲ್ಲಿ ಹೆಸರಿಗೆ ಮಾತ್ರಾ ನಡೆದ ಹಾಗಿರುತ್ತದೆ. ಈ ಸಭೆಗಳ ಅಧ್ಯಕ್ಷತೆಯನ್ನು ಹಿರಿಯಿಅ ಅಧಿಕಾರಿಗಳು ತಪ್ಪದೇ ವಹಿಸಬೇಕು. 'ಸಿ' ವಲಯದ ಬಹುತೇಕ ಕಡೆ ಹಿಂದೀ ಟೈಪಿಂಗ್ ಮತ್ತು ಸ್ಟೆನೋಗ್ರಫಿ ವ್ಯವಸ್ಥೆಯೇ ಇಲ್ಲ. ಕೇಂದ್ರಸರ್ಕಾರ ಒದಗಿಸುತ್ತಿರುವ ಹಣಕಾಸು ನೆರವು ಸಾಕಾಗುತ್ತಿಲ್ಲ. ಎಷ್ಟೋ ಕಡೆಗಳಲ್ಲಿ ಹಿಂದೀ ಅಧಿಕಾರಿಗಳಿಲ್ಲ.

ಈ ತೊಡಕುಗಳಿಗೆಲ್ಲಾ ಪರಿಹಾರ ನೀಡುವ ಶಿಫಾರಸ್ಸುಗಳನ್ನು ನಂತರ ಬರೆಯಲಾಗಿದೆ. ಪ್ರತಿಯೊಂದು ಕೇಂದ್ರಸರ್ಕಾರಿ ಕಛೇರಿಯಲ್ಲೂ ಒಬ್ಬರಾದರೂ ಹಿಂದೀ ಅಧಿಕಾರಿಯ ನೇಮಕವನ್ನು ಕಡ್ಡಾಯವಾಗಿ ಮಾಡಬೇಕು, ಹಿಂದೀ ಟೈಪಿಂಗ್ ಮತ್ತು ಸ್ಟೆನೋ ತರಬೇತಿ ಕೇಂದ್ರಗಳನ್ನು ತೆರೆಯಬೇಕು, ಪ್ರತಿಸಭೆಗೆ ನೀಡುವ ೩,೦೦೦/- ರೂಪಾಯಿ ಹಣವನ್ನು ೧೦,೦೦೦ಕ್ಕೆ ಹೆಚ್ಚಿಸಬೇಕು, ಹಿಂದೀಯೇತರ ಪ್ರದೇಶಗಳಲ್ಲಿ ಹಿಂದೀ ದಿನಪತ್ರಿಕೆ, ವಾರಪತ್ರಿಕೆಗಳನ್ನು ಹೊರತರಲು ಮತ್ತು ಜನಪ್ರಿಯಗೊಳಿಸಲು ಹಿಂದೀ ಪತ್ರಿಕೋದ್ಯಮಿಗಳಿಗೆ ಬೆಂಬಲ ನೀಡಬೇಕು.. ಹೀಗೆ ಹತ್ತಾರು ಶಿಫಾರಸ್ಸುಗಳನ್ನು ನೀಡಲಾಗಿದೆ.

## ೯. ವಿಶ್ಲೇಷಣೆ

ರಾಜ್‌ಭಾಷಾ ಅನುಷ್ಠಾನದ ಮೇಲ್ವಿಚಾರಣೆಗೆ ಸಂಸತ್ ಸದಸ್ಯರ ಸಮಿತಿಯನ್ನು ರಾಜ್‌ಭಾಷಾ ಕಾಯಿದೆ ೧೯೬೩ರ ೪ನೇ ಅಧಿನಿಯಮದ ಅನ್ವಯ ನಿಯೋಜಿಸಲಾಯಿತು. ಹಿಂದೀ ಬಳಕೆಯಲ್ಲಾದ ಅಭಿವೃದ್ಧಿಯನ್ನು ಪರಿಶೀಲಿಸಿ ರಾಷ್ಟ್ರಪತಿಗಳಿಗೆ ಶಿಫಾರಸ್ಸುಗಳ ಸಹಿತವಾದ ವರದಿಯನ್ನು ಸಲ್ಲಿಸುವುದು ಸಮಿತಿಯ ಕರ್ತವ್ಯವಾಗಿದೆ. ಈ ನಿಟ್ಟಿನಲ್ಲಿ ಜನವರಿ ೧, ೨೦೦೨ರಿಂದ ಮಾರ್ಚ್ ೩೧, ೨೦೦೫ರವರೆಗೆ ಕೇಂದ್ರಸರ್ಕಾರಿ ಕಛೇರಿಗಳ ಸಮೀಕ್ಷೆ ನಡೆಸಿದ ಸಮಿತಿ ಹಿಂದೀ ಬಳಕೆಯ ಬಗ್ಗೆ ಸಮಗ್ರವಾದ ವಿಶ್ಲೇಷಣೆ ನಡೆಸಿತು.

### ವಾಸ್ತವ ಪರಿಸ್ಥಿತಿ ಮತ್ತು ವಿಶ್ಲೇಷಣೆ

೯.೧ ಸಮೀಕ್ಷೆಯ ಅವಧಿಯಲ್ಲಿ ಕಂಡು ಬಂದ ಮಾಹಿತಿ ಮತ್ತು ವರದಿಯ ಏಳನೇ ಭಾಗದಲ್ಲಿ ನೀಡಲಾದ ಮಾಹಿತಿಯ ತುಲನಾತ್ಮಕ ಪರಿಶೀಲನೆಯಿಂದ ಕಂಡು ಬಂದ ಅಂಶವೆಂದರೆ ಅತಿ ದೊಡ್ಡ ಸಂಖ್ಯೆಯಲ್ಲಿ ಹಿಂದೀಭಾಷೆಯನ್ನು ಚೆನ್ನಾಗಿ ಬಲ್ಲ ಅಧಿಕಾರಿಗಳು/ ಉದ್ಯೋಗಿಗಳು ಇದ್ದರೂ, ೭೫%ಕ್ಕೂ ಹೆಚ್ಚಿನ ಕೆಲಸವನ್ನು ಹಿಂದೀಯಲ್ಲಿ ಮಾಡುವ ಅಧಿಕಾರಿಗಳ/ ಉದ್ಯೋಗಿಗಳ ಪ್ರಮಾಣ ಎಲ್ಲಾ ಸಚಿವಾಲಯದಲ್ಲಿ ತುಂಬಾ ಕಡಿಮೆ ಇದೆ. ೭೫%ಗೂ ಹೆಚ್ಚಿನ ಪ್ರಮಾಣದಲ್ಲಿ ಹಿಂದೀಯಲ್ಲಿ ಕೆಲಸ ಮಾಡುತ್ತಿರುವ ಅತಿ ಹೆಚ್ಚಿನ ಸಂಖ್ಯೆಯ ಉದ್ಯೋಗಿಗಳಿರುವ ಸಚಿವಾಲಯಗಳು ಇಂತಿವೆ. ಪ್ರವಾಸೋದ್ಯಮ ಇಲಾಖೆ (೯೭.೯%), ಭಾರಿ ಕೈಗಾರಿಕೆ ಮತ್ತು ಸಾರ್ವಜನಿಕ ಸಂಸ್ಥೆಗಳ ಸಚಿವಾಲಯ (೯೨.೪%), ಸೂಚನೆ ಮತ್ತು ಪ್ರಸಾರಣ ಸಚಿವಾಲಯ (೬೬.೬%) ಮತ್ತು ರೈಲ್ವೆ ಇಲಾಖೆ (೫೮.೩%). ಆದರೆ ಹಿಂದೀ ಚೆನ್ನಾಗಿ ಗೊತ್ತಿದ್ದರೂ, ಯೋಜನೆ ಇಲಾಖೆ

ಮತ್ತು ಕಾನೂನು ಸಚಿವಾಲಯದಲ್ಲಿ ೭೫%ಗೂ ಹೆಚ್ಚಿನ ಕೆಲಸವನ್ನು ಹಿಂದೀಯಲ್ಲಿ ಮಾಡುತ್ತಿರುವ ಒಬ್ಬೇ ಒಬ್ಬ ಅಧಿಕಾರಿ/ ಉದ್ಯೋಗಿಯಿಲ್ಲ. ವಿದೇಶಾಂಗ ಸಚಿವಾಲಯ, ಆದಿವಾಸಿ ವ್ಯವಹಾರಗಳ ಸಚಿವಾಲಯ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯದಲ್ಲಿ ಈ ಪ್ರಮಾಣ ಕ್ರಮವಾಗಿ ಕೇವಲ ೪.೪%, ೯.೮% ಮತ್ತು ೯.೯% ಆಗಿದೆ. ಈ ಹಿನ್ನೆಲೆಯಲ್ಲಿ ಸಮಿತಿ ಈ ಹಿಂದೀನ ವರದಿಯಲ್ಲಿ ಮಾಡಿರುವ ಶಿಫಾರಸ್ಸಿನಂತೆ ರಾಜ್‌ಭಾಷಾ ಆಯೋಗವು ಹಿಂದೀ ಬಲ್ಲ ಅಧಿಕಾರಿಗಳು/ಉದ್ಯೋಗಿಗಳಿಗೆ ಹಿಂದೀಯಲ್ಲಿ ಇನ್ನೂ ಹೆಚ್ಚಿನ ಪ್ರಾವಿಣ್ಯತೆ ಪಡೆಯುವಂತಹ ಕೋರ್ಸ್ ಗಳನ್ನು ಪ್ರಾದೇಶಿಕ ಅನುಷ್ಠಾನ ಕಛೇರಿಗಳ ಸಹಕಾರದೊಂದೀಗೆ ತಯಾರಿಸಬೇಕು.

೯.೧೧ ಕೇಂದ್ರಸರ್ಕಾರಿ ಕಛೇರಿಗಳು ಸುಲಲಿತವಾಗಿ ಕೆಲಸ ಮಾಡಲು ಅವುಗಳಲ್ಲಿರುವ ನೀತಿ ನಿಯಮಗಳ ಪುಸ್ತಕಗಳು, ಪ್ರಕ್ರಿಯೆ, ಕೋಡ್ಸ್, ಕೈಪಿಡಿಗಳೆಲ್ಲಾ ಹಿಂದೀಯಲ್ಲಿರಬೇಕಾದ್ದು ಬಲುಮುಖ್ಯ. ಇವೆಲ್ಲವುಗಳು ಹಿಂದೀಯಲ್ಲಿಲ್ಲದೆ ಇಂಗ್ಲೀಶಿನಲ್ಲಿದ್ದರೆ ಹಿಂದೀ ಬಲ್ಲವರಿಗೂ, ಹಿಂದೀಯಲ್ಲಿ ಪರಿಣಿತಿ ಪಡೆದವರಿಗೂ ಕೂಡಾ ಹಿಂದೀಯಲ್ಲಿ ಕೆಲಸ ಮಾಡಲು ತೊಡಕಾಗುತ್ತದೆ ಮತ್ತು ಅಂಥವರ ಉತ್ಸಾಹವನ್ನು ಬತ್ತಿಸಿದಂತಾಗುತ್ತದೆ. ಆ ಕಾರಣದಿಂದಲೇ ಎಲ್ಲಾ ಇಲಾಖೆಗಳ ದಾಖಲೆಗಳನ್ನು ಹಿಂದೀ ಮತ್ತು ಇಂಗ್ಲೀಶಿನಲ್ಲಿ ಬರೆದಿರುವುದು ಕಡ್ಡಾಯವೆಂದು ಕಾಯ್ದೆ ೩(೩)ಯಲ್ಲಿ ಹೇಳಲಾಗಿರುವುದು. ಈ ಹಿನ್ನೆಲೆಯಲ್ಲಿ ಇಲಾಖೆಗಳ ಸಿಬ್ಬಂದಿಗಳಿಗೆ ಹಿಂದೀಯಲ್ಲೇ ಕೆಲಸ ಮಾಡಲು ಸೂಚನಾ ಆದೇಶ ನೀಡಿ ಪ್ರೋತ್ಸಾಹಿಸತಕ್ಕದ್ದು.

೯.೧೨ ಕೇಂದ್ರಸರ್ಕಾರಿ ಕಛೇರಿಗಳಲ್ಲಿ ನಡೆಯುವ ಎಲ್ಲಾ ಮೂಲಪತ್ರ ವ್ಯವಹಾರಗಳಲ್ಲಿ ಹಿಂದೀ ಬಳಕೆಯು ಸಮಾಧಾನಕರವಾಗಿಲ್ಲ. ಹಿಂದೀಯಲ್ಲಿ ಪತ್ರ ವ್ಯವಹಾರ ನಡೆಸುವ ಬಗ್ಗೆ ರಾಜ್‌ಭಾಷಾ ಆಯೋಗ ತನ್ನ ವಾರ್ಷಿಕ ಯೋಜನೆಯಲ್ಲಿ ವಲಯ ಎ, ಬಿ ಮತ್ತು ಸಿ ಗಳಿಗೆ ನಿಗದಿಪಡಿಸಿರುವ ಗುರಿಗಳು ಕ್ರಮವಾಗಿ ೧೦೦%, ೯೦% ಮತ್ತು ೫೫% ಆಗಿದೆ. ಆದರೆ ಸಮಿತಿಯ ಅಂದಾಜಿನಂತೆ ಇದರ ಪ್ರಮಾಣ ಕೇವಲ ಕ್ರಮವಾಗಿ ೪೯%, ೪೩% ಮತ್ತು ೩೦% ಆಗಿದೆ. ನವೀಕರಣಗೊಳಿಸಬಹುದಾದ ಶಕ್ತಿಯ ಸಚಿವಾಲಯ ಹಿಂದೀಯಲ್ಲಿ ಪತ್ರ

ವ್ಯವಹಾರಕ್ಕೊಂದು ಮಾದರಿ ಸಚಿವಾಲಯವಾಗಿದೆ. ಅದರ ವಲಯ ಎ,ಬಿ ಮತ್ತು ಸಿಯ ಕಛೇರಿಗಳಲ್ಲಿ ಕ್ರಮವಾಗಿ ೭೮%, ೬೮% ಮತ್ತು ೩೬% ಪತ್ರವ್ಯವಹಾರಗಳು ಹಿಂದೀಯಲ್ಲಿ ನಡೆಯುತ್ತವೆ. ಸಣ್ಣ ಕೈಗಾರಿಕೆ, ಕೃಷಿ ಮತ್ತು ಗ್ರಾಮೀಣ ಕೈಗಾರಿಕೆ ಸಚಿವಾಲಯ ಈ ನಿಟ್ಟಿನಲ್ಲಿ ಕಡೆಯ ಸ್ಥಾನದಲ್ಲಿದೆ. ಅದರ ಎ, ಬಿ ಮತ್ತು ಸಿ ವಲಯಗಳ ಕಛೇರಿಗಳಲ್ಲಿ ಕ್ರಮವಾಗಿ ೨೬%, ೧೬% ಮತ್ತು ೧೮% ಪತ್ರವ್ಯವಹಾರಗಳು ಹಿಂದೀಯಲ್ಲಿ ನಡೆಯುತ್ತವೆ. ಕೃಷಿ ಸಚಿವಾಲಯ, ನವೀಕರಣಗೊಳಿಸಬಹುದಾದ ಶಕ್ತಿ ಮತ್ತು ಪರಿಸರ ಮತ್ತು ಅರಣ್ಯ ಖಾತೆಯ ಸಚಿವಾಲಯಗಳು ಎ ಮತ್ತು ಬಿ ವಲಯಗಳಲ್ಲಿರುವ ತಮ್ಮ ಕಛೇರಿಗಳಲ್ಲಿ ಹೆಚ್ಚಿನ ಪತ್ರ ವ್ಯವಹಾರವನ್ನು ಹಿಂದೀಯಲ್ಲೇ ಮಾಡುತ್ತಿವೆ. ಇದರ ಪ್ರಮಾಣ ಸುಮಾರು ಕ್ರಮವಾಗಿ ೭೮% ಮತ್ತು ೭೭% ಆಗಿದೆ. ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಆಫ್ ಇಂಡಿಯಾ ಸಿ ವಲಯದಲ್ಲಿರುವ ತಮ್ಮ ಕಛೇರಿಯಲ್ಲಿ ಅತಿ ಹೆಚ್ಚಿನ ಪತ್ರ ವ್ಯವಹಾರವನ್ನು ಅಂದರೆ ಸುಮಾರು ೫೯%ರಷ್ಟನ್ನು ಹಿಂದೀಯಲ್ಲೇ ಮಾಡಿದೆ. 'ಎ' ವಲಯದಲ್ಲಿ ಸಣ್ಣ ಕೈಗಾರಿಕೆ, ಕೃಷಿ ಮತ್ತು ಗ್ರಾಮೀಣ ಕೈಗಾರಿಕೆ ಸಚಿವಾಲಯ ಕೇವಲ ೨೬% ಪತ್ರ ವ್ಯವಹಾರವನ್ನು ಹಿಂದೀಯಲ್ಲಿ ಮಾಡಿದ್ದರೆ, ಕಾನೂನು ಮತ್ತು ನ್ಯಾಯ ಸಚಿವಾಲಯ 'ಬಿ ವಲಯದಲ್ಲಿ ಕೇವಲ ೧೫% ಪತ್ರ ವ್ಯವಹಾರವನ್ನು ಹಿಂದೀಯಲ್ಲಿ ಮಾಡಿದೆ, ಹಾಗೆ, 'ಸಿ' ವಲಯದಲ್ಲಿ ಗ್ರಾಮೀಣಾಭಿವೃದ್ಧಿ ಸಚಿವಾಲಯ ಹಿಂದೀಯಲ್ಲಿ ಕಿಂಚಿತ್ತೂ ಪತ್ರವ್ಯವಹಾರ ನಡೆಸಿಲ್ಲ. ಎಲ್ಲಾ ಸಚಿವಾಲಯಗಳು, ಇಲಾಖೆಗಳು ಈ ಬಗ್ಗೆ ತಾವೇ ಗಮನ ಹರಿಸಬೇಕು ಎಂದು ಸಮಿತಿಯ ಅನಿಸಿಕೆಯಾಗಿದೆ. ಸಚಿವಾಲಯದ ಕಛೇರಿಗಳಲ್ಲೇ ಹಿಂದೀಯಲ್ಲಿ ಪತ್ರ ವ್ಯವಹಾರ ಮಾಡದೇ ಇದ್ದಾಗ ಕೆಳಹಂತದ ಕಛೇರಿಗಳಲ್ಲಿ ಇದನ್ನು ನಿರೀಕ್ಷಿಸುವುದು ನಿಜಕ್ಕೂ ಕೆಲಸಕ್ಕೆ ಬಾರದ ವಿಷಯವಾಗಿದೆ.

೯.೧೩ `ಎ' ವಲಯದಲ್ಲಿರುವ ಎಲ್ಲಾ ಸಚಿವಾಲಯ, ಇಲಾಖೆ, ಕಛೇರಿ ಮತ್ತಿತರ ಸಂಸ್ಥೆಗಳಲ್ಲಿ ೫೦% ವಿಭಾಗಗಳು ಹಿಂದೀಯಲ್ಲೇ ತಮ್ಮೆಲ್ಲ ಕೆಲಸಗಳನ್ನು ಮಾಡಬೇಕು, 'ಬಿ' ವಲಯದಲ್ಲಿರುವ ಕಛೇರಿಗಳಲ್ಲಿ ಇದರ ಪ್ರಮಾಣ ೩೦%

ಮತ್ತು 'ಸಿ' ವಲಯದಲ್ಲಿರುವ ಕಛೇರಿಗಳಲ್ಲಿ ೨೦% ವಿಭಾಗಗಳು ತಮ್ಮೆಲ್ಲ ಕೆಲಸಗಳನ್ನು ಹಿಂದೀಯಲ್ಲೇ ಮಾಡಬೇಕೆಂದು ಸಮಿತಿ ಶಿಫಾರಸ್ಸು ಮಾಡುತ್ತದೆ.

೯.೧೪ ೨೦೦೫ರೊಳಗೆ ಹಿಂದೀ ಗೊತ್ತಿಲ್ಲದ ಉದ್ಯೋಗಿಗಳಿಗೆ ಹಿಂದೀಭಾಷಾ ತರಬೇತಿ ನೀಡಬೇಕು ಅನ್ನುವ ಗುರಿಯನ್ನು ರಾಜ್‌ಭಾಷಾ ಆಯೋಗ ವಿಧಿಸಿತ್ತು. ಸಚಿವಾಲಯಗಳ ಸಮೀಕ್ಷೆಯಂತೆ ಸುಮಾರು ೭೦,೯೭೯ ಹಿಂದೀ ಗೊತ್ತಿಲ್ಲದ ಉದ್ಯೋಗಿಗಳಿಗೆ ಇನ್ನೂ ಹಿಂದೀ ತರಬೇತಿ ನೀಡಲಾಗಿಲ್ಲ. ಈ ಗುರಿಯನ್ನು ಈ ವರ್ಷ ಮುಟ್ಟುವ ಸಾಧ್ಯತೆಯೂ ಇಲ್ಲ. ಪ್ರತಿವರ್ಷವೂ ಈ ಗುರಿಯನ್ನು ಮುಂದೂಡುತ್ತ ಬಂದೀರುವುದು ಮತ್ತು ಹಿಂದೀ ತರಬೇತಿ ಬಗೆಗಿನ ಕೆಲಸವೂ ಹಾಗೆಯೇ ಬಾಕಿ ಉಳಿದಿರುವುದು ಸಮಿತಿಯ ಗಮನಕ್ಕೆ ಬಂದೀದೆ. ಈ ನಿಟ್ಟಿನಲ್ಲಿ , ಮುಂಬರುವ ದಿನಗಳಲ್ಲಿ ಕೇಂದ್ರಸರ್ಕಾರಿ ಸೇವೆಗಳಿಗೆ ನೇರ ನೇಮಕಾತಿಯ ಸಮಯದಲ್ಲಿ ಕನಿಷ್ಟ ಮಟ್ಟದ ಹಿಂದೀಜ್ಞಾನವನ್ನು ನಿಗಡಿಪಡಿಸಬೇಕು ಎಂದು ಸಮಿತಿ ಶಿಫಾರಸ್ಸು ಮಾಡುತ್ತದೆ. ಇದಕ್ಕಾಗಿ ಎ, ಬಿ, ಸಿ ಮತ್ತು ಡಿ ದರ್ಜೆಯ ಹುದ್ದೆಗಳ ನೇಮಕಾತಿ ನಿಯಮಗಳಲ್ಲಿ ಕಟ್ಟುಪಾಡುಗಳನ್ನು ಹುಟ್ಟು ಹಾಕಬಹುದು. ಎ, ಬಿ ಮತ್ತು ಸಿ ದರ್ಜೆಯ ಹುದ್ದೆಗಳಿಗೆ ಮೆಟ್ರಿಕ್ಯುಲೇಶನ್ ಮಟ್ಟದ ಹಿಂದೀಜ್ಞಾನ ನಿಗದಿಪಡಿಸಬಹುದು. ಡಿ ದರ್ಜೆಯ ಹುದ್ದೆಗಳಿಗೆ ಈ ಅರ್ಹತೆಯನ್ನು ಕೊಂಚ ಕಡಿಮೆಗೊಳಿಸಬಹುದು.

೯.೧೫ ಹಿಂದೀ ಪುಸ್ತಕಗಳ ಖರೀದಿಗಾಗಿ ಕೇಂದ್ರಸರ್ಕಾರಿ ಕಛೇರಿಗಳು ಮಾಡಿದ ಖರ್ಚು ಅವುಗಳಿಗೆ ಈ ನಿಟ್ಟಿನಲ್ಲಿ ವಿಧಿಸಲಾದ ಗುರಿಯನ್ನು ತಲುಪಿಲ್ಲ ಅನ್ನುವ ಸತ್ಯ ಸಚಿವಾಲಯಗಳ ವಿಶ್ಲೇಷಣೆಯಿಂದ ತಿಳಿದು ಬಂದೀದೆ. ಹೆಚ್ಚಿನ ಸಚಿವಾಲಯಗಳು ಈ ಗುರಿ ತಲುಪುವಲ್ಲಿ ಎಡವಿವೆ. ನಿಗದಿ ಪಡಿಸಿದ ಪ್ರಮಾಣದಲ್ಲಿ ಹಿಂದೀಪುಸ್ತಕಗಳನ್ನು ಖರೀದಿಸುವುದು ಅಧಿಕಾರಿಗಳು/ ಉದ್ಯೋಗಿಗಳು ಹಿಂದೀಯಲ್ಲಿ ಕೆಲಸ ಮಾಡುವಂತೆ ಉತ್ತೇಜನ ನೀಡುತ್ತದೆ ಅನ್ನುವುದು ಸಮಿತಿಯ ಅನಿಸಿಕೆಯಾಗಿದೆ. ಆದ್ದರಿಂದ ಸರಳ ಮತ್ತು ಉಪಯೋಗವಾಗುವಂತಹ ಹಿಂದೀ ಪುಸ್ತಕಗಳ ಖರೀದಿಯತ್ತ ವಿಷೇಷ ಗಮನ ಹರಿಸಬೇಕು ಎಂದು ಸಮಿತಿ ಶಿಫಾರಸ್ಸು ಮಾಡುತ್ತೆ. ಸ್ವಾತಂತ್ರ್ಯ ಹೋರಾಟಗಾರರು, ಅಮರರಾದ ವೀರರ ಆತ್ಮಕಥೆ ಮತ್ತಿತರ ಆಸಕ್ತಿ ಕೆರಳಿಸುವಂತಹ ಪುಸ್ತಕಗಳನ್ನು ಖರೀದಿಸುವುದರಿಂದ ಅಧಿಕಾರಿಗಳು/ ಉದ್ಯೋಗಿಗಳು ಹಿಂದೀ ಪುಸ್ತಕಗಳನ್ನು ಓದಲು ಉತ್ತೇಜನ ನೀಡಬಹುದಾಗಿದೆ.

೯.೧೭ ರಾಜ್‌ಭಾಷಾ ಕಾನೂನು ೧೯೭೬ರ ೫ನೇ ನಿಯಮದ ಪ್ರಕಾರ ಹಿಂದೀಯಲ್ಲಿ ಬಂದ ಪತ್ರಗಳಿಗೆ ಕೇಂದ್ರಸರ್ಕಾರದ ಕಛೇರಿಗಳು ಹಿಂದೀಯಲ್ಲೇ ಉತ್ತರಿಸಬೇಕು. ಬೇರೆ ಬೇರೆ ವಲಯಗಳ ನಡುವೆ ಹೋಲಿಸಿ ನೋಡಿದಾಗ ಈ ನಿಯಮದ ಅತಿ ಹೆಚ್ಚು ಉಲ್ಲಂಘನೆ 'ಸಿ' ವಲಯದಲ್ಲಿ (ಸುಮಾರು ೧೭) ಕಂಡು ಬಂದೀದೆ. 'ಸಿ' ವಲಯದಲ್ಲೇ ಬರುವ ಪಶ್ಚಿಮ ಬಂಗಾಳದ ಸುಮಾರು ೬ ಕಛೇರಿಗಳಲ್ಲಿ ಈ ನಿಯಮದ ಉಲ್ಲಂಘನೆ ಅತಿ ಹೆಚ್ಚಾಗಿರುವುದು ಕಂಡು ಬಂದೀದೆ. ಈ ನಿಯಮವನ್ನು ೫೦%ಗಿಂತಲೂ ಹೆಚ್ಚು ಉಲ್ಲಂಘಿಸುತ್ತಿರುವ ೬ ಕಛೇರಿಗಳು 'ಸಿ' ವಲಯದಲ್ಲಿವೆ. ಆದರೆ ಎಲ್ಲಾಕ್ಕಿಂತ ಹೆಚ್ಚು ಚಿಂತೆಯ ವಿಷಯವೆಂದರೆ ವಲಯ ಎ ಅಲ್ಲಿರುವ ದೆಹಲಿಯ ೯ ಕಛೇರಿಗಳಲ್ಲಿ ಈ ನಿಯಮದ ಉಲ್ಲಂಘನೆಯಾಗಿರುವುದು.

**ಶಿಫಾರಸ್ಸುಗಳು:**
ಈ ಮೇಲೆ ಕಂಡುಕೊಂಡ ಅಂಶಗಳ ಮೇಲೆ, ಸಮಿತಿ ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡುತ್ತದೆ.

೧. ಪಾಸ್‌ಪೋರ್ಟ್‌ಗಳನ್ನು ದ್ವಿಭಾಷೆಯಲ್ಲಿ ನೀಡುವುದಕ್ಕೆ ಅನುಕೂಲವಾಗುವಂತೆ ಎಲ್ಲಾ ಪಾಸ್‌ಪೋರ್ಟ್ ಕಛೇರಿಗಳ ಗಣಕಯಂತ್ರಗಳಲ್ಲಿ ಇಂಗ್ಲೀಶ್ ಜೊತೆ ಹಿಂದೀಯನ್ನು ಬಳಸುವ ವ್ಯವಸ್ಥೆ ಕಲ್ಪಿಸಬೇಕು.

೨. ಖಾಲಿ ಇರುವ ಎಲ್ಲಾ ಹಿಂದೀ ಹುದ್ದೆಗಳನ್ನು ಎಷ್ಟು ಸಾಧ್ಯವೋ ಅಷ್ಟು ಬೇಗನೆ ತುಂಬಿಸಬೇಕು ಮತ್ತು ಹಿಂದೀ ಹುದ್ದೆಗಳ ಸೃಷ್ಟಿಗೆ ಇರುವ ನಿಯಮಾವಳಿಗಳನ್ನು ಇನ್ನಷ್ಟು ಸರಳಗೊಳಿಸಿ, ಈ ನಿಟ್ಟಿನಲ್ಲಿ ಅನಗತ್ಯವಾಗಿ ತಡವಾಗುವುದನ್ನು ತಪ್ಪಿಸಬೇಕು. ಹಣಕಾಸು ಸಚಿವಾಲಯ ಹಿಂದೀ ಹುದ್ದೆಗಳ ಸೃಷ್ಟಿಯ ಮೇಲೆ ಯಾವುದೇ ನಿಷೇಧ ಹೇರಬಾರದು.

೩. ಎಲ್ಲಾ ಸಚಿವಾಲಯ, ಇಲಾಖೆ ಮತ್ತು ಸಂಬಂಧೀತ ಕೆಳಹಂತದ ಕಛೇರಿಗಳಲ್ಲಿ ಪ್ರತಿಯೊಬ್ಬ ಹಿಂದೀ ಬಲ್ಲ ಉದ್ಯೋಗಿಗೂ ತಮ್ಮ ಕೆಲಸವನ್ನು ಹಿಂದೀಯಲ್ಲೇ ಮಾಡುವಂತೆ ಪ್ರತ್ಯೇಕವಾದ ಆದೇಶಯನ್ನು ಹೊರಡಿಸಬೇಕು

ಮತ್ತು ಎಲ್ಲಾ ಹಂತದ ಕೆಲಸವನ್ನು ಹಿಂದೀಯಲ್ಲಿಯೇ ಮಾಡುವಂತೆ ಅವರನ್ನು ಉತ್ತೇಜಿಸಲು ಕ್ರಮ ಕೈಗೊಳ್ಳಬೇಕು.

೪. ಇನ್ನೂ ಮುಂದೆ, ಯಾವುದೇ ಕೈಪಿಡಿಯನ್ನು ಕೇವಲ ಇಂಗ್ಲಿಶಿನಲ್ಲಿ ಮಾತ್ರಾ ಮಾಡಬಾರದು ಮತ್ತು ಈಗಾಗಲೇ ಇಂಗ್ಲಿಶಿನಲ್ಲಿ ಮಾತ್ರವಿರುವ ಕೈಪಿಡಿಗಳನ್ನು ಒಂದು ವರ್ಷದೊಳಗೆ ಹಿಂದೀಯಲ್ಲೂ ತರುವ ಆ ಮೂಲಕ ದ್ವಿಭಾಷೆಯಲ್ಲಿ ದೊರಕಿಸುವ ಕೆಲಸವಾಗಬೇಕು.

೫. 'ಎ' ವಲಯದಲ್ಲಿರುವ ಎಲ್ಲಾ ಸಚಿವಾಲಯ, ಇಲಾಖೆ, ಕಛೇರಿ ಮತ್ತಿತರ ಸಂಸ್ಥೆಗಳಲ್ಲಿ ೫೦% ವಿಭಾಗಗಳು ಹಿಂದೀಯಲ್ಲೇ ತಮ್ಮೆಲ್ಲ ಕೆಲಸಗಳನ್ನು ಮಾಡಬೇಕು, 'ಬಿ' ವಲಯದಲ್ಲಿರುವ ಕಛೇರಿಗಳಲ್ಲಿ ಇದರ ಪ್ರಮಾಣ ೩೦% ಮತ್ತು 'ಸಿ' ವಲಯದಲ್ಲಿರುವ ಕಛೇರಿಗಳಲ್ಲಿ ೨೦% ವಿಭಾಗಗಳು ತಮ್ಮೆಲ್ಲ ಕೆಲಸಗಳನ್ನು ಹಿಂದೀಯಲ್ಲೇ ಮಾಡಬೇಕೆಂದು ಸಮಿತಿ ಶಿಫಾರಸ್ಸು ಮಾಡುತ್ತದೆ. ವಿಭಾಗ ಅನ್ನುವ ಪರಿಕಲ್ಪನೆ ಇಲ್ಲದಿರುವ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳಲ್ಲಿ ಈ ಪ್ರಮಾಣ ಕ್ರಮವಾಗಿ ೫೦%, ೩೦% ಮತ್ತು ೨೦% ರಷ್ಟಿರಬೇಕು.

೬. ಮುಂಬರುವ ದಿನಗಳಲ್ಲಿ ಕೇಂದ್ರಸರ್ಕಾರಿ ಸೇವೆಗಳಿಗೆ ನೇರ ನೇಮಕಾತಿಯ ಸಮಯದಲ್ಲಿ ಕನಿಷ್ಟ ಮಟ್ಟದ ಹಿಂದೀ ಜ್ಞಾನವನ್ನು ನಿಗಡಿಪಡಿಸಬೇಕು ಎಂದು ಸಮಿತಿ ಶಿಫಾರಸ್ಸು ಮಾಡುತ್ತದೆ.  ಇದಕ್ಕಾಗಿ ಎ,ಬಿ,ಸಿ ಮತ್ತು ಡಿ ದರ್ಜೆಯ ಹುದ್ದೆಗಳ ನೇಮಕಾತಿ ನಿಯಮಗಳಲ್ಲಿ ನಿಯಮಗಳನ್ನು ಹುಟ್ಟು ಹಾಕಬಹುದು. ಎ,ಬಿ ಮತ್ತು ಸಿ ದರ್ಜೆಯ ಹುದ್ದೆಗಳಿಗೆ ಮೆಟ್ರಿಕ್ಯುಲೇಶನ್ ಮಟ್ಟದ ಹಿಂದೀ ಜ್ಞಾನ ನಿಗದಿಪಡಿಸಬಹುದು. ಡಿ ದರ್ಜೆಯ ಹುದ್ದೆಗಳಿಗೆ ಇ ಅರ್ಹತೆಯನ್ನು ಕೊಂಚ ಕಡಿಮೆಗೊಳಿಸಬಹುದು.

೭. ಸರಳ, ಸುಲಭ ಮತ್ತು ಉಪಯೋಗವಾಗುವಂತಹ ಹಿಂದೀ ಪುಸ್ತಕಗಳ ಖರೀದಿಯತ್ತ ವಿಷೇಷ ಗಮನ ಹರಿಸಬೇಕು. ಸ್ವಾತಂತ್ರ್ಯ ಹೋರಾಟಗಾರರು, ಅಮರರಾದ ವೀರರ ಆತ್ಮಕಥೆ ಮತ್ತಿತರ ಆಸಕ್ತಿ ಕೆರಳಿಸುವಂತಹ ಪುಸ್ತಕಗಳನ್ನು ಖರೀದಿಸುವುದರಿಂದ ಅಧಿಕಾರಿಗಳು/ಉದ್ಯೋಗಿಗಳು ಹಿಂದೀಪುಸ್ತಕಗಳನ್ನು ಓದಲು ಉತ್ತೇಜನ ನೀಡುತ್ತವೆ.

೮. ದೆಹಲಿಯಲ್ಲಿರುವ (ವಲಯ ಎ) ಕಛೇರಿಗಳಲ್ಲಿ ರಾಜ್‌ಭಾಷಾ ಕಾನೂನು ೧೯೭೬ರ ೫ನೇ ನಿಯಮದ ಉಲ್ಲಂಘನೆಯಾದದ್ದನ್ನು ಒಪ್ಪಲು ಸಾಧ್ಯವೇ ಇಲ್ಲ. ಮಾನವ ಸಂಪನ್ಮೂಲ ಇಲಾಖೆಯ ಕಾರ್ಯದರ್ಶಿ ಈ ಉಲ್ಲಂಘನೆಯ ವಿಷಯವನ್ನು ನವೋದಯ ವಿದ್ಯಾಲಯ ಸಮಿತಿ, ದೆಹಲಿ, ಕೇಂದ್ರೀಯ ವಿದ್ಯಾಲಯ ಸಂಘಟನ್, ದೆಹಲಿ, ಇಂದಿರಾ ಗಾಂಧೀ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ ಮತ್ತು ಕೇಂದ್ರೀಯ ಸಮಾಜ ಕಲ್ಯಾಣ ನಿಗಮದ ಜೊತೆ ಕೈಗೆತ್ತಿಕೊಂಡು ಈ ರೀತಿಯ ಉಲ್ಲಂಘನೆ ಭವಿಷ್ಯದಲ್ಲಿ ಮರುಕಳಿಸದಂತೆ ನೋಡಿಕೊಳ್ಳಬೇಕು. ಹಾಗೆಯೇ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಕಾರ್ಯದರ್ಶಿಗಳು ಕೇಂದ್ರೀಯ ರಸ್ತೆ ಸಂಶೋಧನಾ ಸಂಸ್ಥೆಯ ಜೊತೆಯಲ್ಲೂ, ಸಮಾಜ ಕಲ್ಯಾಣ ಇಲಾಖೆಯ ಕಾರ್ಯದರ್ಶಿಗಳು ಅಲ್ಪಸಂಖ್ಯಾತರ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆಯ ಜೊತೆಯೂ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯದರ್ಶಿಗಳು ಕೇಂದ್ರೀಯ ಆಯುರ್ವೇದ ಮತ್ತು ಸಿದ್ಧ ಸಂಶೋಧನಾ ಕೇಂದ್ರಗಳ ಜೊತೆಯೂ ಮತ್ತು ಕೃಷಿ ಇಲಾಖೆಯ ಕಾರ್ಯದರ್ಶಿ ಸ್ಟೇಟ್ ಫಾರ್ಮ್ ಕಾರ್ಪೊರೇಶನ್ ಆಫ್ ಇಂಡಿಯಾದ ಜೊತೆಯೂ ಮಾತನಾಡಿ ರಾಜ್‌ಭಾಷಾ ಕಾನೂನು ೧೯೭೬ರ ೫ನೇ ನಿಯಮದ ಅನುಷ್ಠಾನ ಸರಿಯಾಗಿ ನಡೆಯುವಂತೆ ನೋಡಿಕೊಳ್ಳಬೇಕು.

೯. ರಾಜ್‌ಭಾಷಾ ಕಾನೂನಿನ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಮತ್ತು ಸಂಸತ್ ಸಮಿತಿಯ ಶಿಫಾರಸ್ಸುಗಳ ಮೇಲೆ ರಾಷ್ಟ್ರಪತಿಗಳು ನೀಡಿರುವ ಆದೇಶಗಳ ಪಾಲನೆಗಾಗಿ ಸಮಿತಿ ಈ ಕೆಳಗಿನ ಶಿಫಾರಸ್ಸು ಮಾಡುತ್ತದೆ. ಕೇಂದ್ರ ರಾಜ್‌ಭಾಷಾ ಅನುಷ್ಠಾನ ಸಮಿತಿ (Central Official Language Implementation Committee (COLIC)ಯ ಸಭೆಗಳನ್ನು ಕ್ಯಾಬಿನೇಟ್ ಸೆಕ್ರೆಟರಿಯ ನೇತೃತ್ವದಲ್ಲಿ ಮತ್ತು ವಿವಿಧ ಇಲಾಖೆ/ ಸಚಿವಾಲಯಗಳ ಕಾರ್ಯದರ್ಶಿಗಳ ಸದಸ್ಯತ್ವದಲ್ಲಿ ನಡೆಸಬೇಕು. ಒಂದು ವೇಳೆ ಕ್ಯಾಬಿನೆಟ್ ಸೆಕ್ರೆಟರಿ ಅವರೇ ಕೇಂದ್ರ ರಾಜ್‌ಭಾಷಾ ಅನುಷ್ಠಾನ ಸಮಿತಿಯ ಚೇರಮನ್ ಆಗಿದ್ದಲ್ಲಿ, ಬೇರೆ ಬೇರೆ ಸಚಿವಾಲಯ,ಇಲಾಖೆಗಳ ಕಾರ್ಯದರ್ಶಿಗಳೇ ರಾಜ್‌ಭಾಷಾ ಕಾಯಿದೆಯ ನಿಯಮಗಳ ಅನುಷ್ಠಾನದ ವಿಷಯಗಳನ್ನು ಕೈಗೆತ್ತಿಕೊಳ್ಳಬಹುದು.

## ೧೦. ಕೇಂದ್ರ ಸರ್ಕಾರಿ ಕಛೇರಿಗಳಲ್ಲಿ ಪುಸ್ತಕ ಖರೀದಿಯ ಕುರಿತು

೧೦.೧ ಭಾರತ ಒಂದು ಅಭಿವೃದ್ಧಿ ಹೊಂದುತ್ತಿರುವ ದೇಶವಾಗಿದೆ. ೮೦% ಕ್ಕೂ ಹೆಚ್ಚಿನ ಜನರು ಹಳ್ಳಿಗಳಲ್ಲಿ ನೆಲೆಸಿದ್ದಾರೆ. ಕೃಷಿ ಆಧಾರಿತ ವ್ಯವಸ್ಥೆಯಾಗಿರುವ ಈ ದೇಶದಲ್ಲಿ ಆರ್ಥಿಕ ಏಳಿಗೆ ಮತ್ತು ಅಭಿವೃದ್ಧಿಗೆ ಕೃಷಿ ಮತ್ತು ಅದಕ್ಕೆ ಸಂಬಂಧ ಪಟ್ಟ ಕ್ಷೇತ್ರಗಳೇ ಮುಖ್ಯವಾಹಿನಿಗಳಾಗಿವೆ. ಹೊಸ ಹೊಸ ಸಂಶೋಧನೆಗಳು ದೂರಸಂಪರ್ಕ, ವಿಜ್ಞಾನ, ಬಾಹ್ಯಾಕಾಶ ಮತ್ತು ಕೃಷಿ ಮುಂತಾದ ಕ್ಷೇತ್ರಗಳ ಅಭಿವೃದ್ಧಿಗೆ ಹೊಸ ಸಾಧನಗಳನ್ನು ಕೊಡುತ್ತವೆ. ಆದರೆ ಎಲ್ಲಾದಕ್ಕೂ ಮುಖ್ಯವಾದ ಸಮಸ್ಯೆ ಅಂದರೆ, ಈ ಎಲ್ಲಾ ಮಾಹಿತಿ ಎಲ್ಲಿಯವರೆಗೆ ಜನಸಾಮಾನ್ಯರನ್ನು ಅವರದೇ ಭಾಷೆಯಲ್ಲಿ ತಲುಪುವುದಿಲ್ಲವೋ, ಅಲ್ಲಿಯವರೆಗೂ ಅಂದುಕೊಂಡ ಗುರಿ ತಲುಪಲು ದೇಶಕ್ಕೆ ಸಾಧ್ಯವಾಗದು.

೧೦.೨ ಸರ್ಕಾರಿ ಕಛೇರಿಗಳಲ್ಲಿ ನಡೆಯುವ ಎಲ್ಲಾ ಮೂಲ ಕೆಲಸಗಳು, ವಿಜ್ಞಾನ-ತಂತ್ರಜ್ಞಾನದ ಕ್ಷೇತ್ರದಲ್ಲಿ ನಡೆಯುವ ಎಲ್ಲಾ ಕೆಲಸಗಳಲ್ಲೂ ಹಿಂದೀ ಬಳಕೆಯನ್ನು ಉತ್ತೇಜಿಸಬೇಕು. ಆ ಮೂಲಕ ಇಲ್ಲಿ ಮಾಡಲಾಗುವ ಸಾಧನೆಯ ಮಾಹಿತಿ ಜನಸಾಮಾನ್ಯರಿಗೂ ದೊರಕಬಹುದು. ಈ ನಿಟ್ಟಿನಲ್ಲಿ ಸಮಿತಿ ರಾಷ್ಟ್ರಪತಿಗಳಿಗೆ ಸಲ್ಲಿಸಿದ ತನ್ನ ನಾಲ್ಕನೇ ವರದಿಯಲ್ಲಿ ಹಿಂದೀಯಲ್ಲಿ ಕೆಲಸ ಮಾಡಲು ಪ್ರಶಸ್ತವಾದ ವಾತಾವರಣ ನಿರ್ಮಿಸುವ ಸಲುವಾಗಿ ಇಂಗ್ಲೀಶ್-ಹಿಂದೀ, ಹಿಂದೀ-ಇಂಗ್ಲೀಶ್ ಪದಕೋಶಗಳು, ಸಹಾಯ ಕೈಪಿಡಿಗಳು, ತಾಂತ್ರಿಕ ಪದಕೋಶಗಳು, ತಾಂತ್ರಿಕ ಸಾಹಿತ್ಯ, ಕಲೆಗೆ ಸಂಬಂಧೀಸಿದ ಸಾಹಿತ್ಯ ಹಾಗೂ ಇನ್ನಿತರ ಸಾಹಿತ್ಯವನ್ನು ಹಿಂದೀಯಲ್ಲಿ ದೊರಕುವಂತೆ ಮಾಡಬೇಕು, ಮಾರುಕಟ್ಟೆಯಲ್ಲಿ ಹಲವಾರು ವಿಷಯಗಳ ಬಗೆಗಿನ ಹಿಂದೀ ಪುಸ್ತಕಗಳ ಬಗ್ಗೆ ವ್ಯಾಪಕವಾದ ಪ್ರಚಾರ ನೀಡಬೇಕು ಮತ್ತು ಈ ಪುಸ್ತಕಗಳನ್ನು ಎಲ್ಲಾ ಸರ್ಕಾರಿ ಕಛೇರಿಗಳಲ್ಲಿ ಉಚಿತವಾಗಿ ಹಂಚಬೇಕು ಎಂದು ಶಿಫಾರಸ್ಸು ಮಾಡಿದೆ. ಈ ನಿಟ್ಟಿನಲ್ಲಿ ಸರ್ಕಾರ ಕೊಡುವ ನಿಧಿಯಲ್ಲಿ ೫೦%ದಷ್ಟನ್ನು ಹಿಂದೀ ಪುಸ್ತಕಗಳ ಖರೀದಿಗೆ ಎತ್ತಿಡಬೇಕು. ಉಪಯುಕ್ತವಾದ ಹಿಂದೀ ಪುಸ್ತಕಗಳನ್ನು ಗುರುತಿಸುವ ಪ್ರಕ್ರಿಯೆಯನ್ನು ನಿರಂತರವಾಗಿ ರಾಜಭಾಷಾ ಆಯೋಗವು ಮಾಡಬೇಕು ಮತ್ತು ಈ ಮೂಲಕ ದೊರಕುವ ಪುಸ್ತಕಗಳ ಪಟ್ಟಿಯನ್ನು ಎಲ್ಲಾ ಸಚಿವಾಲಯ/ ಇಲಾಖೆಗಳು/ ಕಛೇರಿಗಳಿಗೆ ದೊರಕುವಂತೆ ಮತ್ತು ಅವರು ತಮ್ಮ ಗ್ರಂಥಾಲಯಕ್ಕೆ ಈ ಪುಸ್ತಕಗಳನ್ನು ಖರೀದಿಸುವಂತಾಗಬೇಕು.

೧೦.೩ ಹಿಂದೀ ಪುಸ್ತಕಗಳ ಖರೀದಿಗೆ ರಾಜಭಾಷಾ ಆಯೋಗದ ವಾರ್ಷಿಕ ಯೋಜನೆಯಲ್ಲಿ ನಿಗದಿಪಡಿಸುವ ಗ್ರಂಥಾಲಯ ನಿಧಿಯ ೫೦% ಹಣವನ್ನು ಎತ್ತಿಡಬೇಕು ಅನ್ನುವ ಸಮಿತಿಯ ಶಿಫಾರಸ್ಸನ್ನು ಜಾರಿಗೆ ತರುವತ್ತ ರಾಜಭಾಷಾ ಆಯೋಗವು ಜನವರಿ ೬, ೧೯೯೫ರಂದು O.M. No.೧೧/೨೦೦೧೫/ ೨೧/೯೪-OL (K-೨) ರಾಷ್ಟ್ರಪತಿಗಳ ಆದೇಶವನ್ನು ಹೊರಡಿಸಿತು. ಆದರೆ, ೨೦೦೪-೦೫ರ ವಾರ್ಷಿಕ ಯೋಜನೆಯಲ್ಲಿ ಈ ಗುರಿಯನ್ನು ಬದಲಾಯಿಸಲಾಯಿತು. ಗ್ರಂಥಾಲಯ ನಿಧಿಯಲ್ಲಿ ನಿಯತಕಾಲಿಕ, ಸ್ಟಾಂಡರ್ಡ್ ರೆಫರನ್ಸ್ ಪುಸ್ತಕ ಮುಂತಾದವುಗಳನ್ನು ಖರೀದಿಸಲು ವೆಚ್ಚ ಮಾಡುವ ಹಣವನ್ನು ಹೊರತುಪಡಿಸಿ ಉಳಿದಂತೆ ಪುಸ್ತಕಗಳ ಖರೀದಿಗೆ ಮಾಡುವ ವೆಚ್ಚದಲ್ಲಿ ೫೦% ಹಣವನ್ನು ಹಿಂದೀ ಪುಸ್ತಕಗಳ ಖರೀದಿಗೆ ಮೀಸಲಿಡಬೇಕೆಂದು ಬದಲಾಯಿಸಲಾಯಿತು. ಈ ನಿಯಮವನ್ನು ಮತ್ತೆ ಬದಲಾಯಿಸಬೇಕೆಂಬುದು ಸಮಿತಿಯ ಅಭಿಪ್ರಾಯವಾಗಿದೆ. ವಿಜ್ಞಾನ, ಅನ್ವೇಶಣೆ ಮತ್ತು ಸಂಶೋಧನೆಯತ್ತ ಕೆಲಸ ಮಾಡುವ ಕಛೇರಿ/ ಸಂಸ್ಥೆಗಳು ಜರ್ನಲ್, ರೆಫರನ್ಸ್ ಪುಸ್ತಕಗಳ ಖರೀದಿಗೆ ಅಪಾರ ಮೊತ್ತವನ್ನು ವ್ಯಯಿಸುತ್ತಿವೆ. ಹೀಗಾಗಿ ಇಲ್ಲೊಂದು ಬದಲಾವಣೆ ತರದೇ ಹೋದಲ್ಲಿ ಈ ಕಛೇರಿಗಳು ತಮಗೆ ನಿಗದಿಗೊಂಡ ಗ್ರಂಥಾಲಯ ನಿಧಿಯ ಹೆಚ್ಚಿನ ಮೊತ್ತವನ್ನು ಇಂತಹ ಪುಸ್ತಕಗಳ ಖರೀದಿಗೆಂದೇ ವ್ಯಯ ಮಾಡುತ್ತವೆಯೇ ಹೊರತು ಹಿಂದೀಪುಸ್ತಕಗಳ ಖರೀದಿಗಲ್ಲ. ಇದು ಇಂತಹ ಕಛೇರಿಗಳಲ್ಲಿ ಹಿಂದೀ ಪುಸ್ತಕಗಳ ಖರೀದಿಯ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತವೆ.

೧೦.೮ ಹಿಂದೀ ಮಾತನಾಡುವ ಭಾಗದ ತಾಂತ್ರಿಕ ಪರಿಣಿತರು/ ವಿಜ್ಞಾನಿಗಳಿಗೆ ಹಿಂದೀಯಲ್ಲೇ ಎಲ್ಲಾ ಮೂಲ ಸಾಹಿತ್ಯವನ್ನು ಬರೆಯುವಂತೆ ಪ್ರೋತ್ಸಾಹಿಸಬೇಕು. ಹೀಗಾದಾಗ, ಈ ಎಲ್ಲಾ ವಿಷಯಗಳ ಬಗ್ಗೆ ಹಿಂದೀಯಲ್ಲಿ ಸಾಹಿತ್ಯ ಎಲ್ಲೆಡೆ ದೊರಕುವಂತಾಗಬಹುದು. ಈ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಲು, ಸಂಶೋಧನೆ/ ಅನ್ವೇಶಣೆಯ ಕ್ಷೇತ್ರದಲ್ಲಿ ಕ್ರಾಂತಿಕಾರಿ ಬದಲಾವಣೆಯನ್ನು ತರುತ್ತಿರುವ ಭಾರತೀಯ ವಿಜ್ಞಾನಿಗಳು ಈ ವಿಷಯದಲ್ಲಿ ಹೆಗಲು ಕೊಟ್ಟು ಜವಾಬ್ದಾರಿ ಹೊತ್ತು ವಿಜ್ಞಾನ ಮತ್ತು ಇಂಜಿನಿಯರಿಂಗ್ ವಿಷಯಗಳ ಮೂಲ ಪುಸ್ತಕಗಳನ್ನು, ಕೈಪಿಡಿಗಳನ್ನು ಮತ್ತು ಇನ್ನಿತರ ಸಾಹಿತ್ಯವನ್ನು ಹಿಂದೀಯಲ್ಲಿ ತರುವತ್ತ ಕೆಲಸ ಮಾಡಬೇಕು. ಇದು ದೇಶದ ಮತ್ತು ಜನರ ಹಿತ ದೃಷ್ಟಿಯಿಂದ ಮುಖ್ಯವಾದುದು.

**ಸತ್ಯಾಂಶ:**

೧೦.೧೧ ಸಮಿತಿ ೧೨೦೫ ಕಛೇರಿಗಳಲ್ಲಿ ಸಮೀಕ್ಷೆ ನಡೆಸಿತು, ಅದರಲ್ಲಿ ೧೭೩ ಕಛೇರಿಗಳು ವೈಜ್ಞಾನಿಕ, ತಾಂತ್ರಿಕ ಮತ್ತು ಸಂಶೋಧನೆ ತರಹದ ವಿಷಯಗಳನ್ನು ನಿಭಾಯಿಸುತ್ತವೆ. ಈ ಸಂಸ್ಥೆಗಳಲ್ಲಿ ಹೊಸ ತಂತ್ರಜ್ಞಾನ, ಸಂಶೋಧನೆಗಳ ಅಭಿವೃದ್ಧಿ ನಿಯಮಿತವಾಗಿ ನಡೆಯುತ್ತಿರುತ್ತದೆ. ಆದರೆ ಅಲ್ಲಿ ಎಲ್ಲಾ ರೀತಿಯ ಸಾಹಿತ್ಯ ಕೇವಲ ಇಂಗ್ಲಿಶಿನಲ್ಲಿದೆ.

ವಿಜ್ಞಾನ-ತಂತ್ರಜ್ಞಾನ ಸಂಬಂಧೀ ಸಂಸ್ಥೆಗಳು ಇಂತಹ ಪುಸ್ತಕಗಳನ್ನು ತಮ್ಮ ಸಂಶೋಧನೆ ಮುಂದುವರೆಸಲು ನಿಯಮಿತವಾಗಿ ಖರೀದಿಸುತ್ತವೆ. ಹೀಗೆ ಇಂಗ್ಲೀಶಿಗೆ ಸರಿಸಮನಾಗಿ ಹಿಂದೀಸಾಹಿತ್ಯ ಖರೀದಿಸುವುದು ಈ ಸಂಸ್ಥೆಗಳಿಗೆ ಸಾಕಷ್ಟು ತೊಂದರೆಗಳನ್ನು ಹುಟ್ಟುಹಾಕುತ್ತಿದೆ. ಅದು ಅಲ್ಲದೇ ಸಂಶೋಧನೆಗೆ ಸಂಬಂಧೀಸಿದ ವಿದೇಶಿ ನಿಯತಕಾಲಿಕೆಗಳು ಮತ್ತಿತರ ಪುಸ್ತಕಗಳು ಹಿಂದೀ ಪುಸ್ತಕಗಳಿಗೆ ಹೋಲಿಸಿದರೆ ಬಹು ದುಬಾರಿಯಾಗಿದೆ.

ಆದ್ದರಿಂದ ಪ್ರತಿವರ್ಷವೂ ಇಂಗ್ಲೀಶಿನಲ್ಲಿರುವ ಸಾಹಿತ್ಯಕ್ಕೆ ಸರಿಸಮನಾಗಿ ಹಿಂದೀ ಸಾಹಿತ್ಯವನ್ನು ಖರೀದಿಸುವುದು ಈ ಸಂಸ್ಥೆಗಳಿಗೆ ಒಂದು ಸವಾಲಾಗಿದೆ. ಸಮೀಕ್ಷೆಯ ಅವಧಿಯಲ್ಲಿ ಈ ಸಂಸ್ಥೆಗಳ ಮುಖ್ಯಸ್ಥರು ಮತ್ತು ಪ್ರತಿನಿಧಿಗಳು ತಿಳಿಸಿದ ಒಂದು ಅಂಶವೆಂದರೆ ಹಲವಾರು ಸಚಿವಾಲಯಗಳು/ಕಛೇರಿಗಳು ತಾವೇ ತಯಾರು ಮಾಡುವ ತಮ್ಮ ಜಾಹೀರಾತು ಸಾಮಗ್ರಿ, ಮತ್ತಿತರ ಸಾಹಿತ್ಯವನ್ನು ಉಚಿತವಾಗಿ ಸಿಗುವಂತೆ ಮಾಡುತ್ತಿವೆ.

ಇದರಿಂದಾಗಿಯೂ ಹಿಂದೀ ಪುಸ್ತಕಗಳ ಖರೀದಿಯ ಪ್ರಮಾಣ ಬೆಳೆದಿಲ್ಲ. ಆದ್ದರಿಂದ ಹಿಂದೀ ಮತ್ತು ಇಂಗ್ಲೀಶ್ ಪುಸ್ತಕಗಳ ಖರೀದಿಗೆ ಮಾಡಲಾಗುವ ವೆಚ್ಚದಲ್ಲಿ ದೊಡ್ಡ ಮಟ್ಟದ ವ್ಯತ್ಯಾಸವಿದೆ.

ವೈಜ್ಞಾನಿಕ, ತಾಂತ್ರಿಕ ಮತ್ತು ಸಂಶೋಧನಾ ಸಂಸ್ಥೆಗಳು ಹಿಂದೀ ಪುಸ್ತಕಗಳ ಖರೀದಿಗೆ ೫೦% ಹಣವನ್ನು ಬಳಸದಿರಲು ಕಾರಣಗಳು ಮತ್ತು ಅದಕ್ಕೆ ಪರಿಹಾರಗಳು:

**ಕಾರಣ**

೧೦.೧೪ ಇತಿಹಾಸ, ಭೂಗೋಳ, ಭಾಷೆ, ಸಾಹಿತ್ಯ, ಕಲೆ ಮತ್ತು ವಾಣಿಜ್ಯ ಮುಂತಾದ ವಿಷಯಗಳ ಉನ್ನತ ಕಲಿಕೆಯನ್ನು ಹಿಂದೀಯಲ್ಲಿ ಕಲಿಸಲಾಗುತ್ತಿದೆ, ಆದರೆ ವಿಜ್ಞಾನ ಮತ್ತು ತಾಂತ್ರಿಕ ವಿಷಯಗಳ ಉನ್ನತ ಶಿಕ್ಷಣದ ಕಲಿಕೆ ಕೇವಲ ಇಂಗ್ಲಿಶಿನಲ್ಲಾಗುತ್ತಿದೆ. ಇದಕ್ಕೆ ಕಾರಣ ಈ ವಿಷಯಗಳು ಹಿಂದೀಯಲ್ಲಿ ಲಭ್ಯವಾಗದಿರುವುದು ಮತ್ತು ಇದಕ್ಕೊಂದು ಸರಿಯಾದ ಸರ್ಕಾರಿ ನೀತಿ ಇಲ್ಲದಿರುವುದಾಗಿದೆ. ಹಿಂದೀ ಮಾತನಾಡುವ ಭಾಗದ ಹೆಚ್ಚಿನ ವಿಧ್ಯಾರ್ಥಿಗಳು ಕಲಿಕೆಯ ೧೦+೨ ಹಂತವನ್ನು ಹಿಂದೀ ಮಾಧ್ಯಮದಲ್ಲೇ ಕಲಿತರೂ, ಉನ್ನತ ಶಿಕ್ಷಣಕ್ಕೆ ಈ ವಿದ್ಯಾರ್ಥಿಗಳು ಆಯ್ದುಕೊಳ್ಳುವುದು ಇಂಗ್ಲೀಶ್ ಮಾಧ್ಯಮವನ್ನಾಗಿದೆ. ಅದಕ್ಕೆ ಕಾರಣ, ವಿಶ್ವವಿದ್ಯಾಲಯಗಳಲ್ಲಿ ಹಿಂದೀಯಲ್ಲಿ ಈ ವ್ಯವಸ್ಥೆ ಇಲ್ಲದಿರುವುದಾಗಿದೆ. ಇನ್ನೊಂದೆಡೆ, ಸಂಶೋಧನಾ ವಿಷಯಗಳಲ್ಲಿ ವಿಜ್ಞಾನಿಗಳು ಹೆಚ್ಚಿನ ಸಂಶೋಧನೆ ಕೆಲಸವನ್ನು, ತಮ್ಮ ಸಾಧನೆಯನ್ನು ಜಗತ್ತಿನೆಲ್ಲೆಡೆಯಿಂದ ಮಾನ್ಯತೆ ದೊರಕುವುದರಿಂದ ಕೇವಲ ಇಂಗ್ಲಿಶಿನಲ್ಲಿ ಪ್ರಚುರಪಡಿಸಿಕೊಳ್ಳುತ್ತಾರೆ. ಆದರೆ, ದೇಶದ ಜನಸಾಮಾನ್ಯರು ಈ ಮುಖ್ಯ ಸಂಶೋಧನೆಗಳಿಂದ ವಂಚಿತರಾಗಿದ್ದಾರೆ.

**ಪರಿಹಾರ:**

ಹಿಂದೀಯಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧೀಸಿದ ಪುಸ್ತಕಗಳ ಮತ್ತು ವಿಜ್ಞಾನ, ತಂತ್ರಜ್ಞಾನ ಮತ್ತು ಸಂಶೋಧನೆಗೆ ಸಂಬಂಧೀಸಿದ ರೆಫರನ್ಸ್ ಮಾಹಿತಿಯ ಕೊರತೆ ಇರುವ ಕಾರಣ ಮಾನವ ಸಂಪನ್ಮೂಲ ಸಚಿವಾಲಯ, ಕೇಂದ್ರ ಹಿಂದೀ ನಿರ್ದೇಶನಾಲಯ, ರಾಜಭಾಷಾ ಆಯೋಗ, ಕೇಂದ್ರ ಅನುವಾದ ಸಮಿತಿ, ಹಲವಾರು ತಾಂತ್ರಿಕ ಮತ್ತು ವೈಜ್ಞಾನಿಕ ಸಂಶೋಧನಾ ಮಂಡಳಿಗಳು, ಕೃಷಿ ಇಲಾಖೆಯಡಿ ಬರುವ ಸಂಸ್ಥೆಗಳು ಮತ್ತು ಯು.ಜಿ.ಸಿ ಈ ನಿಟ್ಟಿನಲ್ಲಿ ಮುಖ್ಯವಾದ ಪಾತ್ರವಹಿಸಬೇಕು.

೧೦.೧೬ ವಿಜ್ಞಾನಿಗಳು ಕೃಷಿ, ಸಂಪರ್ಕ, ಉಪಗ್ರಹ ವಿಜ್ಞಾನ, ಅಣುಶಕ್ತಿ ಮುಂತಾದ ಕ್ಷೇತ್ರಗಳಲ್ಲಿ ಹಲವಾರು ಸಾಧನೆಗಳನ್ನು ಮಾಡಿದ್ದಾರೆ, ಆದರೆ ಈ ಎಲ್ಲಾ ವಿಷಯಕ್ಕೆ ಸಂಬಂಧೀಸಿದ ಸಾಹಿತ್ಯ ಕೇವಲ ಇಂಗ್ಲಿಶಿನಲ್ಲಿ ಹುಟ್ಟಿಕೊಂಡಿವೆ. ಈ ಎಲ್ಲಾ ಸಂಶೋಧನೆಗಳ ಸಾರವನ್ನು ಹೆಚ್ಚೇನು ಬಳಸದೆಯೂ ರೈತರು ಆಹಾರ ಧಾನ್ಯಗಳ ವಿಷಯದಲ್ಲಿ ಸ್ವಾವಲಂಬನೆ ಸಾಧಿಸಿದ್ದಾರೆ. ಇನ್ನೂ, ಈ ಎಲ್ಲಾ

ವಿಷಯಗಳು ನೂರಕ್ಕೆ ನೂರು ಪ್ರತಿಶತ ಹಿಂದೀ ಅಥವಾ ಅವರದೇ ಭಾಷೆಯಲ್ಲಿದ್ದಿದ್ದರೆ ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಕ್ರಾಂತಿಯೇ ಆಗುತ್ತಿತ್ತೆನೋ! ಹೀಗೆಯೇ, ಹಿಂದೀಯಲ್ಲಿ ಈ ಸಾಹಿತ್ಯ ಲಭಿಸುವಂತಾದರೆ ಬೇರೆ ಬೇರೆ ಕ್ಷೇತ್ರಗಳಲ್ಲೂ ಹೆಚ್ಚಿನ ಫಲಿತಾಂಶ ಪಡೆಯಬಹುದು.

೧೦.೧೭ ಯಾವುದೇ ಸಂಶೋಧನೆಯ ತಿರುಳು ಒಂದು ದೇಶದ ಅಭಿವೃದ್ಧಿಗೆ ಕಾರಣವಾಗಬೇಕಿದ್ದಲ್ಲಿ, ಈ ಮಾಹಿತಿ ದೇಶದ ರೈತರನ್ನು ಮತ್ತಿತರ ಬಳಕೆದಾರರನ್ನು ಅವರದೇ ಭಾಷೆಯಲ್ಲಿ ತಲುಪಬೇಕು. ಆದ್ದರಿಂದ ಉನ್ನತ ಶಿಕ್ಷಣದ ಸಂಸ್ಥೆಗಳಲ್ಲಿ ಹಿಂದೀ ಭಾಷೆಯ ಆಯ್ಕೆಯನ್ನು ಪರಿಚಯಿಸುವುದರ ಮೂಲಕ ಸಂಶೋಧನೆ ಮತ್ತು ಆಧುನಿಕ ತಂತ್ರಜ್ಞಾನದ ಕ್ಷೇತ್ರದಲ್ಲಿನ ಸಂಶೋಧನಾ ಕೆಲಸಗಳು ಹಿಂದೀಯಲ್ಲೇ ನಡೆಯುವಂತೆ ಮಾಡಬೇಕಾಗಿರುವುದು ಈ ಹೊತ್ತಿನ ತುರ್ತು ಅಗತ್ಯವಾಗಿದೆ.

೧೦.೧೮ ವಿಜ್ಞಾನ ಮತ್ತು ಸಂಶೋಧನಾ ಕ್ಷೇತ್ರಗಳಲ್ಲಾಗುತ್ತಿರುವ ಬದಲಾವಣೆಗೆ ಸ್ಪಂದೀಸಲು, ಹೊಂದಿಕೊಳ್ಳಲು ಎಲ್ಲಾ ಸಚಿವಾಲಯ/ ಇಲಾಖೆಗಳು ಕೆಲ ಸಂಶೋಧನೆ, ತರಬೇತಿ ಸಂಬಂಧೀತ ಸಂಸ್ಥೆಗಳನ್ನು ತಮ್ಮ ಆಧೀನದಲ್ಲಿ ಹೊಂದಿವೆ. ಆದರೆ ಇಲ್ಲಿ ಖರೀದಿಸಲಾಗುವ ಹೆಚ್ಚಿನ ಸಾಹಿತ್ಯ ಕೇವಲ ಇಂಗ್ಲಿಶಿನಲ್ಲಿದೆ. ಸಾಮಾನ್ಯವಾಗಿ, ಪ್ರತಿ ಸಂಸ್ಥೆಯೂ ತನ್ನ ಅಗತ್ಯಕ್ಕನುಸಾರವಾಗಿ ಇಂತಹ ಸಾಹಿತ್ಯವನ್ನು ಪ್ರತ್ಯೇಕವಾಗಿ ಖರೀದಿಸುತ್ತದೆ. ಇದರಿಂದಾಗಿ ಒಂದೇ ರೀತಿಯ ಸಾಹಿತ್ಯದ ಖರೀದಿಗೆ ಬೇರೆ ಬೇರೆ ಸಂಸ್ಥೆಗಳು ಕೋಟ್ಯಾಂತರ ರೂಪಾಯಿ ಖರ್ಚು ಮಾಡುತ್ತವೆ. ಇಂತಹ ಸಂದರ್ಭದಲ್ಲಿ, ಅಗತ್ಯಗಳ ಆಧಾರದ ಮೇಲೆ ಹೊರದೇಶದಿಂದ ತರಿಸುವ ಸಾಹಿತ್ಯವನ್ನು ವರ್ಗೀಕರಿಸಬೇಕು. ಆ ಮೂಲಕ ಬೇರೆ ಬೇರೆ ಇಲಾಖೆಗಳು ಇದರ ಲಾಭ ಪಡೆಯುವಂತಾಗಬೇಕು. ಹೀಗೆ ಮಾಡುವುದರ ಮೂಲಕ ಇಂಗ್ಲೀಶ್ ಸಾಹಿತ್ಯದ ಖರೀದಿಗಾಗಿ ಮಾಡುವ ವೆಚ್ಚವನ್ನು ಒಂದೆಡೆ ಕಡಿಮೆ ಮಾಡಿದರೆ, ಇನ್ನೊಂದೆಡೆ ಒಂದೇ ರೀತಿಯ ಸಾಹಿತ್ಯವಾಗಿರುವುದರಿಂದ ಈ ಸಂಸ್ಥೆಗಳು ಒಟ್ಟಾಗಿ ಈ ಮಾಹಿತಿಯನ್ನು ಹಿಂದೀಗೆ ಅನುವಾದಿಸಿಕೊಳ್ಳಬಹುದು.

೧೦.೧೯ ಈ ನಿಟ್ಟಿನಲ್ಲಿ, ಸರ್ಕಾರ ಎಲ್ಲಾ ಸಚಿವಾಲಯಗಳನ್ನೊಳಗೊಂಡ ಸಮಿತಿಯೊಂದನ್ನು ರಚಿಸಿ, ಬೇರೆ ಬೇರೆ ಇಲಾಖೆಗಳೆಲ್ಲವಕ್ಕೂ ಬೇಕಾಗಿರುವ ಒಂದೇ ರೀತಿಯ ಮಾಹಿತಿಯುಳ್ಳ ಪುಸ್ತಕಗಳ, ನಿಯತಕಾಲಿಕೆಗಳ ಪಟ್ಟಿಯೊಂದನ್ನು

ತಯಾರಿಸಿ ಅವುಗಳನ್ನು ಹೊರ ದೇಶದಿಂದ ತರಿಸಿಕೊಳ್ಳಬಹುದು. ಇದರ ಲಾಭ ಒಂದಕ್ಕಿಂತ ಹೆಚ್ಚಿನ ವೈಜ್ಞಾನಿಕ, ತಾಂತ್ರಿಕ ಸಂಸ್ಥೆಗಳಿಗೆ ದೊರಕುವಂತೆ ಮಾಡಬಹುದು. ಇಂತಹ ಸಾಹಿತ್ಯವನ್ನು ವರ್ಗೀಕರಿಸಿ, ಒಂದೇ ಮೂಲದಿಂದ ಅವೆಲ್ಲವೂ ಲಭ್ಯವಾಗುವಂತೆ ಮಾಡಬೇಕು ಮತ್ತು ಜೊತೆಯಲ್ಲೇ ಈ ಎಲ್ಲಾ ಮಾಹಿತಿಯ ಹಿಂದೀ ಆವೃತ್ತಿಯನ್ನು ಪ್ರಕಟಿಸುವ ಸಾಧ್ಯತೆಯನ್ನು ಕಂಡುಕೊಳ್ಳಬೇಕು. ಈ ಯೋಜನೆಯನ್ನು ಜಾರಿಗೊಳಿಸುವಾಗ, ಇಂತಹ ಸಾಹಿತ್ಯ ಹಿಂದೀಯಲ್ಲಿ ಸಮಯಕ್ಕೆ ಸರಿಯಾಗಿ ದೊರಕದಿರುವುದು ಸಂಶೋಧನೆಯ ಮೇಲೆ ಯಾವುದೇ ಪರಿಣಾಮ ಬೀರದಂತೆ ಎಚ್ಚರ ವಹಿಸಬೇಕು ಅನ್ನುವ ಶಿಫಾರಸ್ಸನ್ನು ಸಮಿತಿ ನೀಡುತ್ತದೆ.

೧೦.೨೦ ವಿಜ್ಞಾನ, ತಂತ್ರಜ್ಞಾನ ಮತ್ತು ಸಂಶೋಧನೆಗೆ ಸಂಬಂಧೀಸಿದ ಸಾಹಿತ್ಯವನ್ನು ಹಿಂದೀಯಲ್ಲಿ ದೊರಕುವಂತಾಗಲು ಇರುವ ಎಲ್ಲಾ ಮೂಲಗಳನ್ನು ತಿಸಿ, ಇಂತಹ ಸಾಹಿತ್ಯದ ಬುಕ್ ಬ್ಯಾಂಕ್‌ಗಳನ್ನು ಸ್ಥಾಪಿಸಬಹುದು. ನಂತರ, ಎಲ್ಲಾ ಸಂಸ್ಥೆ, ಕಛೇರಿ, ಇಲಾಖೆಗಳು ತಮಗೆ ಅಗತ್ಯವಿರುವ ಇಂತಹ ಸಾಹಿತ್ಯಕ್ಕಾಗಿ ಮೊದಲು ಈ ಬುಕ್ ಬ್ಯಾಂಕ್‌ಅನ್ನು ಸಂಪರ್ಕಿಸಬೇಕು ಮತ್ತು ಇಲ್ಲಿ ಆ ಮಾಹಿತಿ ಸಿಗದೇ ಹೋದಲ್ಲಿ ಬೇರೆ ಕಡೆಗಳಿಂದ ಅದನ್ನು ಪಡೆದುಕೊಳ್ಳುವಂತೆ ಸಲಹೆ ನೀಡಬೇಕು.

೧೦.೨೧ ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದ ಆಯೋಗ (Commission for Scientific & Technical Terminology) ವಿಜ್ಞಾನ, ತಂತ್ರಜ್ಞಾನ ಮತ್ತು ಸಂಶೋಧನೆಗೆ ಸಂಬಂಧೀಸಿದ ಪರಿಣಿತರನ್ನೊಳಗೊಂಡ ಸಮಿತಿಯೊಂದನ್ನು ರಚಿಸಿ, ಎಲ್ಲಾ ಸಾಹಿತ್ಯ, ಕೈಪಿಡಿ ಮುಂತಾದವುಗಳನ್ನು ಮೊದಲು ಹಿಂದೀಯಲ್ಲೇ ರಚಿಸುವ ಹಾದಿಯನ್ನು ಕಂಡುಕೊಳ್ಳಬಹುದು. ಯಾವ ಯಾವ ತಾಂತ್ರಿಕ, ವೈಜ್ಞಾನಿಕ ಸಂಸ್ಥೆಗಳಲ್ಲಿ ವರ್ಷಕ್ಕೆ ಆರು ಲಕ್ಷ ರೂಪಾಯಿಗೂ ಹೆಚ್ಚು ಮೌಲ್ಯದ ಸಾಹಿತ್ಯವನ್ನು ಹೊರ ದೇಶದಿಂದ ತರಿಸಿಕೊಳ್ಳಲಾಗುತ್ತಿದೆಯೋ, ಅಲ್ಲಿ ಆಯಾ ಸಚಿವಾಲಯಗಳು, ತಾತ್ಕಾಲಿಕವಾಗಿ ಹಿಂದೀಯಲ್ಲೂ ಅಷ್ಟೇ ಮೊತ್ತದ ಸಾಹಿತ್ಯವನ್ನು ಖರೀದಿಸಲು ಆಗುವಂತೆ ನಿಯಮಗಳನ್ನು ಸಡಿಲಿಸಬೇಕು.

**ಸಮಿತಿಯ ಶಿಫಾರಸ್ಸುಗಳು:**

೧೦.೨೨ ವಿಜ್ಞಾನ ಮತ್ತು ತಂತ್ರಜ್ಞಾನದ ಕ್ಷೇತ್ರದಲ್ಲಿ ಮೂಲ ಹಂತದಲ್ಲೇ ಹಿಂದೀ ಬಳಕೆಯನ್ನು ಹೆಚ್ಚಿಸಲು ಮತ್ತು ದೊಡ್ಡ ಪ್ರಮಾಣದಲ್ಲಿ ಹಿಂದೀ ಸಾಹಿತ್ಯವನ್ನು ದೊರಕುವಂತಾಗಲು ಈ ಕೆಳಗಿನ ಶಿಫಾರಸ್ಸುಗಳನ್ನು ಸಮಿತಿ ಮಾಡುತ್ತದೆ.

೧. ಹಿಂದೀಯಲ್ಲಿ ಎಲ್ಲಾ ವಿಜ್ಞಾನ, ತಂತ್ರಜ್ಞಾನ ಮತ್ತು ಸಂಶೋಧನೆಗೆ ಸಂಬಂಧಿಸಿದ ಸಾಹಿತ್ಯ ಒಂದೆಡೆ ದೊರಕುವಂತಾಗಲು ಸರ್ಕಾರ ಕೂಡಲೇ ಹಿಂದೀ ಬುಕ್ ಬ್ಯಾಂಕ್‌ಗಳನ್ನು ಸ್ಥಾಪಿಸಬೇಕು. ಈ ಬ್ಯಾಂಕ್‌ಗಳು ಬಳಕೆದಾರರಿಗೆ ಈ ಎಲ್ಲಾ ಮಾಹಿತಿ ಲಭಿಸುವಂತೆ ಮಾಡಬೇಕು.

೨. ಹಿಂದೀಯಲ್ಲಿರುವ ವಿಜ್ಞಾನ, ತಂತ್ರಜ್ಞಾನ ಮತ್ತು ಸಂಶೋಧನೆಗೆ ಸಂಬಂಧೀಸಿದ ಸಾಹಿತ್ಯದ ಬಗ್ಗೆ ವ್ಯಾಪಕ ಪ್ರಚಾರ ನೀಡಬೇಕು ಮತ್ತು ಆ ಮೂಲಕ ಹೆಚ್ಚಿನ ಸಂಸ್ಥೆಗಳಿಗೆ ಇದು ಸುಲಭವಾಗಿ ಲಭ್ಯವಾಗುವಂತೆ ಮಾಡಬೇಕು. ಈ ಪ್ರಕ್ರಿಯೆಯನ್ನು ನಿಯಮಿತವಾಗಿ ಮಾಡಬೇಕು.

೩ ವೈಜ್ಞಾನಿಕ ಮತ್ತು ತಾಂತ್ರಿಕ ಪಾರಿಭಾಷಿಕ ಪದ ಆಯೋಗದ (Commission for Scientific & Technical Terminology) ನೇತೃತ್ವದಲ್ಲಿ ಒಂದು ಅನುವಾದಕ್ಕೆ ಸಂಬಂಧೀಸಿದ ಸಂಸ್ಥೆಯನ್ನು ಸ್ಥಾಪಿಸಿ ಇಂಗ್ಲೀಶಿನಲ್ಲಿರುವ ವಿಜ್ಞಾನ, ತಂತ್ರಜ್ಞಾನ, ಸಂಶೋಧನೆಗೆ ಸಂಬಂಧೀಸಿದ ಪದಗಳನ್ನು ಹಿಂದೀಗೆ ಅನುವಾದಿಸಬೇಕು. ಹಿಂದೀಯಲ್ಲಿ ಚೆನ್ನಾಗಿ ಪಳಗಿರುವ, ಒಳ್ಳೆಯ ಗುಣಮಟ್ಟದ ಅನುವಾದ ಮಾಡಬಲ್ಲಂತಹ ಇಂಜಿನಿಯರಿಂಗ್ ಮತ್ತು/ ಅಥವಾ ವಿಜ್ಞಾನದಲ್ಲಿ ಸ್ನಾತಕ್ಕೋತ್ತರ ಪದವಿ ಪಡೆದಿರುವವರನ್ನು ಇಲ್ಲಿ ಆಯ್ಕೆ ಮಾಡಿಕೊಳ್ಳಬಹುದು. ಇವರಿಗೆ ರಾಜಭಾಷಾ ಆಯೋಗದ ವ್ಯಾಪ್ತಿಯ ಸಹಾಯಕ ನಿರ್ದೇಶಕರಿಗೆ ಕೊಡುವಷ್ಟೇ ಸಂಬಳ ನೀಡಬಹುದು.

೪ ಹಿಂದೀಯಲ್ಲೇ ಮೂಲವಾಗಿ ವಿಜ್ಞಾನ, ತಂತ್ರಜ್ಞಾನ, ಸಂಶೋಧನೆಗೆ ಸಂಬಂಧೀಸಿದ ಸಾಹಿತ್ಯ ಬರೆದು ಮತ್ತು ಅಂತಹ ಸಾಹಿತ್ಯ ದಿನಬಳಕೆಯಲ್ಲಿ ಬಳಕೆಯಾಗುತ್ತಿದ್ದಲ್ಲಿ ಅಥವಾ ಸಂಸ್ಥೆಗಳಲ್ಲಿ ತರಬೇತಿಯಲ್ಲಿ ಬಳಸಲಾಗುತ್ತಿದ್ದಲ್ಲಿ ಅಂತಹ ಬರಹಗಾರರಿಗೆ ಗೌರವಧನ ನೀಡುವ ಬಗ್ಗೆ ಕರಾರು ಮಾಡಿಕೊಳ್ಳಬಹುದು.

೫ 'ಎ' ಮತ್ತು 'ಬಿ'ವಲಯಗಳಲ್ಲಿರುವ ವಿಶ್ವವಿದ್ಯಾಲಯಗಳು ಇಂಜಿನಿಯರಿಂಗ್, ಗಣಕಯಂತ್ರ, ಸಂಶೋಧನೆ, ತಂತ್ರಜ್ಞಾನ ಮುಂತಾದ ಉನ್ನತ ಶಿಕ್ಷಣವನ್ನು ಹಿಂದೀಮಾಧ್ಯಮದಲ್ಲೂ ಕಲಿಸಬಹುದು. ಪಠ್ಯಕ್ರಮ ಮತ್ತು ಕೋರ್ಸ್ ಪುಸ್ತಕಗಳನ್ನು ಹಿಂದೀಯಲ್ಲಿ ತಯಾರಿಸಬಹುದು.

೬ ೨೦೦೪–೦೫ ಮತ್ತು ನಂತರದ ಅವಧಿಗೆ ರಾಜಭಾಷಾ ಆಯೋಗ ತನ್ನ ವಾರ್ಷಿಕ ಯೋಜನೆಯಲ್ಲಿ ಹಿಂದೀ ಪುಸ್ತಕಗಳ ಖರೀದಿಯ ಬಗ್ಗೆ ನಿಗದಿ ಮಾಡಿರುವ ಗುರಿಗೆ ಬದಲಾವಣೆಯೊಂದನ್ನು ತಂದು ಈ ಗುರಿಯ ವ್ಯಾಪ್ತಿಯಿಂದ ಜರ್ನಲ್ ಮತ್ತು ಸ್ಟಾಂಡರ್ಡ್ ರೆಫರನ್ಸ್ ಪುಸ್ತಕಗಳನ್ನು ಹೊರಗಿಟ್ಟಿದೆ. ಆದರೆ ಈ ಬದಲಾವಣೆ ಹಿಂದೀಬಳಕೆಯ ದೂರದ ಗುರಿಯ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರಬಲ್ಲದಾಗಿರುವುದರಿಂದ ಇದನ್ನು ಪುನರ್ ಪರಿಶೀಲಿಸಬೇಕಿದೆ ಎಂಬುದು ಸಮಿತಿಯ ಅನಿಸಿಕೆಯಾಗಿದೆ.

೭. ತಾಂತ್ರಿಕವಲ್ಲದ, ಆಡಳಿತಾತ್ಮಕವಾದ ಕಛೇರಿಗಳಲ್ಲಿ ಹಿಂದೀ ಪುಸ್ತಕಗಳ ಖರೀದಿಯ ಬಗ್ಗೆ ಇರುವ ಗುರಿಯನ್ನು ಮುಟ್ಟದಿರಲು ಯಾವುದೇ ಗಟ್ಟಿಯಾದ ಕಾರಣವಿಲ್ಲ. ಆದ್ದರಿಂದ ಸಂಬಂಧೀಸಿದ ಇಲಾಖೆಗಳು ಇಂತಹ ಕಛೇರಿಗಳ ಮೇಲೆ ನಿಯಮಿತವಾಗಿ ಕಣ್ಣಿಡಬೇಕು.

## ೧೧. ಗಣಕೀಕರಣ

ಸರ್ಕಾರದ ಅಪಾರ ವ್ಯಾಪ್ತಿ ಮತ್ತು ಭಾರತದ ಭಾರೀ ಜನಸಂಖ್ಯೆಯಿಂದಾಗಿ ಗಣಕಯಂತ್ರ ಆಧಾರಿತ ಹೊಸ ಹೊಸ ಮಾದರಿಯ ಆಡಳಿತ ವ್ಯವಸ್ಥೆಗಳನ್ನು ರೂಪಿಸಬೇಕಾದ ಅಗತ್ಯವಿದೆ. ಪರಿಣಾಮಕಾರಿ ಆಡಳಿತ ರೂಪಿಸುವಲ್ಲಿ ಮಾಹಿತಿ ದೊಡ್ಡ ಪಾತ್ರವಹಿಸುತ್ತದೆ, ಆದ್ದರಿಂದ ಗಣಕೀಕರಣಕ್ಕೆ ಮಹತ್ವದ ಪಾತ್ರವಿದೆ.

## ಏಳನೇ ಭಾಗದಲ್ಲಿ ಮಾಡಲಾದ ಶಿಫಾರಸ್ಸುಗಳು:

೧೧.೨ ಹಿಂದೀಯನ್ನು ರಾಜ್ಯಭಾಷೆಯಾಗಿ ಒಪ್ಪಿರುವ ಜನರಿಗಾಗಿ ಎಲ್ಲಾ ಕಛೇರಿಗಳು ಪರಿಣಾಮಕಾರಿಯಾಗಿ ಕೆಲಸ ಮಾಡಬೇಕಾದ ನಿರೀಕ್ಷೆ ಒಂದೆಡೆಯಿದ್ದರೆ, ಪರಿಣಾಮಕಾರಿಯಾಗಿ ಕೆಲಸ ಮಾಡಲು ಭಾರತೀಯ ಮೂಲದ್ದಲ್ಲದ ಗಣಕಯಂತ್ರ ತಂತ್ರಜ್ಞಾನಕ್ಕೆ ಹೊಂದಿಕೊಳ್ಳಬೇಕಾದ ಅಗತ್ಯವಿದೆ.

ಹಿಂದೀಯೇತರ ದೇಶಗಳಲ್ಲಿ ಗಣಕಯಂತ್ರ ತಂತ್ರಜ್ಞಾನ ಆಧಾರಿತ ವ್ಯವಸ್ಥೆಗಳೆಲ್ಲವೂ ಮುಂದುವರೆದಿವೆ. ದೊಡ್ಡ ಮತ್ತು ಮುಂದುವರೆದ ದೇಶಗಳಲ್ಲಿ ಗಣಕಯಂತ್ರದ ಮೂಲಕ ಮಾಡುವ ಎಲ್ಲಾ ಕೆಲಸಗಳನ್ನು ತಮ್ಮದೇ ನುಡಿಯಲ್ಲಿ ಮಾಡಿಕೊಳ್ಳುತ್ತಿದ್ದಾರೆ. ಈ ಸಂದರ್ಭದಲ್ಲಿ ಏಳುವ ಪ್ರಶ್ನೆಯೆಂದರೆ, ಇದು ನಮ್ಮ ದೇಶದಲ್ಲಿ ಯಾಕೆ ಸಾಧ್ಯವಿಲ್ಲ?

೧೧.೩ ಸಂಸತ್ ಸಮಿತಿಯು ತನ್ನ ವರದಿಯ ಏಳನೇ ಭಾಗದಲ್ಲಿ ನೀಡಿರುವ ಶಿಫಾರಸ್ಸುಗಳು ಇನ್ನೂ ಅನುಷ್ಠಾನಗೊಂಡಿಲ್ಲ. ಈ ಶಿಫಾರಸ್ಸುಗಳ ಅನುಷ್ಠಾನಕ್ಕೆ ಆದೇಶವನ್ನು ಜಾರಿಗೊಳಿಸಬೇಕಿದೆ.

**ಸಮಿತಿಯು ಶಿಫಾರಸ್ಸುಗಳು ಇಂತಿವೆ.**

೧. ಗಣಕಯಂತ್ರದ ಮೂಲಕ ಮಾಡುವ ಕೆಲಸಕ್ಕೆ ಇಂಗ್ಲೀಶ್ ಬಳಸುತ್ತಿರುವ ಅಧಿಕಾರಿಗಳು ಮತ್ತು ಉದ್ಯೋಗಿಗಳಿಗೆ ಕೇವಲ ಎರಡು ವಾರದಲ್ಲಿ ಹಿಂದೀಯಲ್ಲೂ ಗಣಕಯಂತ್ರ ಬಳಸುವ ತರಬೇತಿ ನೀಡಬಹುದಾಗಿದೆ. ಆದ್ದರಿಂದ ಎರಡು ವರ್ಷದೊಳಗೆ ಎಲ್ಲಾ ಉದ್ಯೋಗಿಗಳಿಗೆ ಈ ತರಬೇತಿಯನ್ನು ನೀಡತಕ್ಕದ್ದು.

೨. ಮಾಹಿತಿ ತಂತ್ರಜ್ಞಾನ ಮಂತ್ರಾಲಯದ ಅಡಿಯಲ್ಲಿ 'Information Technology Mission'ವೊಂದನ್ನು ಸಜ್ಜುಗೊಳಿಸಿ ಹಿಂದೀಯಲ್ಲಿ ತಂತ್ರಾಂಶ ಸಂಶೋಧನೆ ಮತ್ತು ಅಭಿವೃದ್ದಿ ಯೋಜನೆಗಳ ಜಾರಿಗೆ ಮುಂದಾಗತಕ್ಕದ್ದು. ಈ ಮಿಶನ್ ಭಾರತ ಸರ್ಕಾರದ ಎಲ್ಲಾ ಇಲಾಖೆಗಳ ಜೊತೆ ಕಲೆತು ಕೆಲಸ ಮಾಡಿ ಆ ಎಲ್ಲಾ ಇಲಾಖೆಗಳಿಗಾಗಿ ಹಿಂದೀಯಲ್ಲಿ ವಿಶೇಷ ತಂತ್ರಾಂಶ ಪ್ಯಾಕೇಜ್‌ಗಳ ಅಭಿವೃದ್ದಿಗೆ ನೆರವಾಗಬೇಕು.

೩. ಹಿಂದೀಯಲ್ಲಿ ಬಳಸಲಾಗಬಹುದಾದ ತಂತ್ರಾಂಶವನ್ನಷ್ಟೇ ಎಲ್ಲಾ ಕೇಂದ್ರ ಸರ್ಕಾರಿ ಇಲಾಖೆಗಳು ಪರಿಚಯಿಸುವಂತೆ ಮತ್ತು ಬಳಸುವಂತೆ ಮಾಹಿತಿ ತಂತ್ರಜ್ಞಾನ ಮಂತ್ರಾಲಯ ಎಲ್ಲಾ ಇಲಾಖೆಗಳ ಜೊತೆ ಸಮನ್ವಯದ ಪಾತ್ರವಹಿಸಬೇಕು.

ಸಮಿತಿಯು ತನ್ನ ವರದಿಯ ಎರಡನೇ ಭಾಗದಲ್ಲಿ ಮಾಡಲಾದ ಕೆಲವು ಶಿಫಾರಸ್ಸುಗಳು ರಾಷ್ಟ್ರಪತಿಗಳ ಒಪ್ಪಿಗೆ ಪಡದಿವೆ. ಅವು ಇಂತಿವೆ:

೧. ದೇವನಾಗರಿಯಲ್ಲಿ ಗಣಕಯಂತ್ರ ವ್ಯವಸ್ಥೆ: ಹಿಂದೀಯಲ್ಲಿ ಬಳಸಬಹುದಾದಂತಹ ಗಣಕಯಂತ್ರ, ವರ್ಡ್ ಪ್ರೊಸೆಸರ್‌ಗಳ ಖರೀದಿಯ ಬಗ್ಗೆ ಕಟ್ಟುನಿಟ್ಟಿನ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕು. ರಾಜಭಾಷಾ ಇಲಾಖೆಯ ಉನ್ನತ ಮಟ್ಟದಲ್ಲಿ ಇದರ ಪರಿಶೀಲನೆ ನಡೆಯಬೇಕು. ಮೂರು ತಿಂಗಳಿಗೊಮ್ಮೆ ಪ್ರತಿ ಇಲಾಖೆಯಿಂದ ವರದಿ ತರಿಸಿ ಪರಿಶೀಲಿಸಬೇಕು.

೨. ವಿದ್ಯುನ್ಮಾನ ಇಲಾಖೆಯ ಅಡಿಯಲ್ಲಿ ಹೊಸತೊಂದು ಸಂಸ್ಥೆಯನ್ನು ಶುರು ಮಾಡಿ, ಅದರಲ್ಲಿ ಹಿಂದೀಯಲ್ಲಿ ಬಳಸುವಂತಹ ವಿದ್ಯುನ್ಮಾನ ಮತ್ತು ಮೆಕಾನಿಕಲ್ ಉಪಕರಣಗಳನ್ನು ಸಿದ್ದಪಡಿಸುವ ಕೆಲಸಕ್ಕೆ ಮುಂದಾಗಬೇಕು.

೩. ಆದ್ಯತೆಯ ಮೇರೆಗೆ ಹಿಂದೀಯಲ್ಲಿ ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್ ಹೊಂದಿರುವ, ದೇವನಾಗರಿಯಲ್ಲಿ ಮಾತ್ರವೇ ಪ್ರೊಸೆಸಿಂಗ್ ಹೊಂದಿರುವ ಗಣಕಯಂತ್ರಗಳನ್ನು ತಯಾರಿಸತಕ್ಕದ್ದು.

೪. ಧ್ವನಿಯ ಮೂಲಕ ಗಣಕಯಂತ್ರದಲ್ಲಿ ಮಾಹಿತಿ ತುಂಬುವ (Phonetic computer systems) ವ್ಯವಸ್ಥೆಯನ್ನು ಅಭಿವೃದ್ಧಿ ಮಾಡುವುದು.

೫. ದೊಡ್ಡಮಟ್ಟದಲ್ಲಿ ಗಣಕಯಂತ್ರ ಬಳಸುವ ಇಲಾಖೆಗಳಾದ ಬ್ಯಾಂಕುಗಳು, ರೈಲ್ವೇ, ವಿಮಾನಯಾನ ಮತ್ತು ರಕ್ಷಣಾ ವಿಭಾಗಗಳಲ್ಲಿನ ಅಗತ್ಯಗಳಿಗೆ ಹೊಂದುವಂತೆ ಹಿಂದೀ ತಂತ್ರಾಂಶವನ್ನು ಅತಿ ಶೀಘ್ರವಾಗಿ ಅಭಿವೃದ್ಧಿಪಡಿಸುವಿಕೆ.

೬. ಹಿಂದೀ ಗಣಕಯಂತ್ರ ಮತ್ತು ಹಿಂದೀಯಲ್ಲಿ ಗಣಕಯಂತ್ರ ಹೊತ್ತಿಗೆಗಳ ಅಭಿವೃದ್ಧಿ ಪಡಿಸುವಂತೆ ವಿದ್ಯುನ್ಮಾನ ಇಲಾಖೆಗೆ ಸೂಚನೆಗಳು. ವಿದ್ಯುನ್ಮಾನ ಇಲಾಖೆಯು ಯಾವ ಗಣಕಯಂತ್ರದಲ್ಲಿ ಹಿಂದೀ ಪ್ರೊಸೆಸಿಂಗ್ ಮತ್ತು ಮುದ್ರಣ ಸಾಧ್ಯವಿದೆಯೋ ಅವುಗಳನ್ನು ಮಾತ್ರಾ ಇನ್‌ಸ್ಟಾಲ್ ಮಾಡಲು ಅನುಮತಿಸುವುದು. ದೇವನಾಗರಿಯಲ್ಲಿ ಮುದ್ರಣಕ್ಕೆ ಎಲ್ಲೆಡೆ ಅವಕಾಶವಿರುವಂತೆ ನೋಡಿಕೊಳ್ಳುವುದು. ಎಲ್ಲೆಲ್ಲಿ ಹಿಂದೀಯಲ್ಲಿರುವ ಗಣಕಯಂತ್ರಗಳನ್ನು ಸ್ಥಾಪಿಸಲಾಗಿದೆಯೋ ಆ ಇಲಾಖೆಗಳಿಗೆಲ್ಲಾ ಗಣಕಯಂತ್ರದ ಪುಸ್ತಕನ್ನು ಹಿಂದೀಯಲ್ಲಿ ಮುದ್ರಿಸಿ ಕೊಡುವುದು.

೭. ಅನುವದಕ್ಕೆ ಗಣಕಯಂತ್ರದ ಬಳಕೆ: ತಾಂತ್ರಿಕ ಮತ್ತು ಸರಳ ಅನುವಾದಕ್ಕೆ ಗಣಕಯಂತ್ರಗಳನ್ನು ಬಳಸಲು ಉತ್ತೇಜಿಸುವುದು.

೮. ತಾಂತ್ರಿಕ ಮತ್ತಿತರ ವಿಷಯಗಳ ಅನುವಾದಕ್ಕೆ ಗಣಕಯಂತ್ರ ಬಳಕೆ ಚಿಕ್ಕ, ಸುಲಭವಾದ ಕಡಿಮೆವೆಚ್ಚದ ಗಣಕಯಂತ್ರ ಪದಕೋಶ ತಯಾರಿಕೆ.

೧೧.೫ ಕೇಂದ್ರ ಸರ್ಕಾರಿ ಕಛೇರಿಗಳಲ್ಲಿ ಹಿಂದೀಯಲ್ಲಿ ಗಣಕಯಂತ್ರ ಬಳಕೆ.
ಹಿಂದೀಯಲ್ಲಿ ಗಣಕಯಂತ್ರ ಬಳಸುವುದರ ಕುರಿತು ಸಮಿತಿಯು ಸಮೀಕ್ಷೆ ನಡೆಸಿದಾಗ ಕಂಡುಕೊಂಡದ್ದು:

೧೧.೫(೧) ಹಿಂದೀಯಲ್ಲಿ ಗಣಕಯಂತ್ರ ಬಳಕೆಯ ಸರಾಸರಿ ಪ್ರಮಾಣ ಸುಮಾರು ೨೨%ನಷ್ಟಿದೆ. ಉನ್ನತ ಅಧಿಕಾರಿಗಳಿಗೆ ಕಡಿಮೆಯೆಂದರೂ ಏಳು ದಿನಗಳ ತರಬೇತಿ ಏರ್ಪಡಿಸಿಬೇಕು ಮತ್ತು ಪ್ರತಿ ವಲಯ ನಲ್ಲೂ ಕನಿಷ್ಠ ಇಂತಿಷ್ಟು ಗಣಕಯಂತ್ರ ನಲ್ಲಿ ಮಾಡುವ ಕೆಲಸ ಹಿಂದೀಯಲ್ಲಿರಬೇಕು ಎಂದು ಉನ್ನತ ಅಧಿಕಾರಿಗಳಿಗೆ ಗುರಿ ನಿಗದಿಪಡಿಸಬೇಕು. ಇದು ಅವರ ಕೈಗೆಳಗಿನ ಅಧಿಕಾರಿಗಳನ್ನು ಹಿಂದೀಯಲ್ಲೇ ಕೆಲಸ ಮಾಡುವಂತೆ ಉತ್ತೇಜಿಸುತ್ತದೆ.

೧೧.೫(೨) ಕೇಂದ್ರ ಸರ್ಕಾರಿ ಕಛೇರಿಗಳಲ್ಲಿ ಗಣಕಯಂತ್ರಗಳ ಸ್ಥಿತಿಗತಿ:

- ‘ಎ’ ವಲಯದಲ್ಲಿ ಜನವರಿ ೨೦೦೨ ರಿಂದ ಮಾರ್ಚ್ ೨೦೦೫ರವರೆಗೆ ೫೩೯ ಕಛೇರಿಗಳಲ್ಲಿ ನಡೆದ ಸಮೀಕ್ಷೆಯಂತೆ ಒಟ್ಟು ಇರುವ ಗಣಕಯಂತ್ರ ಗಳಲ್ಲಿ ಶೇ.೯೧ ರಷ್ಟು ಗಣಕಯಂತ್ರಗಳು ದ್ವಿಭಾಷಿಯಾಗಿವೆ(ಹಿಂದೀ/ಇಂಗ್ಲೀಶ್). ಆದರೆ ಇವುಗಳ ಮೇಲೆ ಹಿಂದೀ ಬಳಸಿ ಕೆಲಸ ಮಾಡುತ್ತಿರುವ ಪ್ರಮಾಣ ಕೇವಲ ೩೯%
- ‘ಬಿ’ ವಲಯದಲ್ಲಿ ಜನವರಿ ೨೦೦೨ ರಿಂದ ಮಾರ್ಚ್ ೨೦೦೫ರವರೆಗೆ ೨೩೨ ಕಛೇರಿಗಳಲ್ಲಿ ನಡೆದ ಸಮೀಕ್ಷೆಯಂತೆ ಒಟ್ಟು ಇರುವ ಗಣಕಯಂತ್ರ ಗಳಲ್ಲಿ ಶೇ.೬೬ ರಷ್ಟು ಗಣಕಯಂತ್ರಗಳು ದ್ವಿಭಾಷಿಯಾಗಿವೆ (ಹಿಂದೀ/ಇಂಗ್ಲೀಶ್). ಆದರೆ ಇವುಗಳ ಮೇಲೆ ಹಿಂದೀ ಬಳಸಿ ಕೆಲಸ ಮಾಡುತ್ತಿರುವ ಪ್ರಮಾಣ ಕೇವಲ ೩೪%
- ‘ಸಿ’ ವಲಯದಲ್ಲಿ ಜನವರಿ ೨೦೦೨ ರಿಂದ ಮಾರ್ಚ್ ೨೦೦೫ರವರೆಗೆ ೪೪೪ ಕಛೇರಿಗಳಲ್ಲಿ ನಡೆದ ಸಮೀಕ್ಷೆಯಂತೆ ಒಟ್ಟು ಇರುವ ಗಣಕಯಂತ್ರಗಳಲ್ಲಿ ಶೇ.೭೪ ರಷ್ಟು ಗಣಕಯಂತ್ರಗಳು ದ್ವಿಭಾಷಿಯಾಗಿವೆ (ಹಿಂದೀ/ ಇಂಗ್ಲೀಶ್). ಆದರೆ ಇವುಗಳ ಮೇಲೆ ಹಿಂದೀ ಬಳಸಿ ಕೆಲಸ ಮಾಡುತ್ತಿರುವ ಪ್ರಮಾಣ ಕೇವಲ ೨೪%

೧೧.೬: ಪ್ರಮಾಣೀಕೃತ ದ್ವಿಭಾಷಾ ತಂತ್ರಾಂಶಗಳು: ದಕ್ಷಿಣ ಭಾರತದ ಕಛೇರಿಗಳಲ್ಲಿ ಆಕೃತಿ ಫಾಂಟ್ ಬಳಸುತ್ತಿದ್ದರೆ, ಉತ್ತರ ಭಾರತದ ಕಛೇರಿಗಳಲ್ಲಿ "ಅಕ್ಷರ್" ಫಾಂಟ್ ಬಳಸಲಾಗುತ್ತಿದೆ. ಈ ಫಾಂಟ್ ವ್ಯತ್ಯಾಸದಿಂದಾಗಿ ಮಾಹಿತಿ ರವಾನಿಸುವಾಗ ಹಲವಾರು ಸಮಸ್ಯೆಗಳು ತಲೆದೋರಿವೆ. ಆದ್ದರಿಂದ ಎಲ್ಲರಿಗೂ ಹೊಂದುವಂತಹ ಪ್ರಮಾಣೀಕೃತ ದ್ವಿಭಾಷಾ ತಂತ್ರಾಂಶಗಳ ಅಭಿವೃದ್ಧಿಗೆ ಒಂದು ಸಂಸ್ಥೆಯನ್ನು ರಚಿಸಬೇಕು. ಹಾಗೆ ಸಿದ್ದವಾಗುವ ತಂತ್ರಾಂಶವನ್ನು ಎಲ್ಲಾ ಕಛೇರಿಗಳು ಬಳಸುವಂತಾಗಬೇಕು. ಆಗ ಹಿಂದೀ ಕೆಲಸಕ್ಕೆ ಒಂದು ಏಕರೂಪತೆ ಬರುವುದು.

೧೧.೭ ಕೇಂದ್ರಸರ್ಕಾರದ ಬೇರೆ ಬೇರೆ ಕಛೇರಿ/ ಸಂಸ್ಥೆಗಳಲ್ಲಿ ಗಣಕಯಂತ್ರದ ಮೂಲಕ ನಡೆಯುವ ಕೆಲಸದ ಬಗೆಗಿನ ವಿಶ್ಲೇಷಣೆ:

೧. ಬ್ಯಾಂಕುಗಳು: ಬ್ಯಾಂಕುಗಳು ಕಡತ ನಿರ್ವಹಣೆಗೆ ಮತ್ತು ಮಾಹಿತಿ ವಿಶ್ಲೇಷಣೆಗೆ ಗಣಕಯಂತ್ರಗಳನ್ನು ಬಳಸುತ್ತಿವೆ. ಕಡತ ನಿರ್ವಹಣೆ (word processing) ಸಾಕಷ್ಟು ಪ್ರಮಾಣದಲ್ಲಿ ಹಿಂದೀಯಲ್ಲಿ

ನಡೆಯುತ್ತಿದ್ದರೂ, ಮಾಹಿತಿ ವಿಶ್ಲೇಷಣೆ ಕೇವಲ ಇಂಗ್ಲೀಶಿನಲ್ಲಿ ನಡೆಯುತ್ತಿದೆ. ಹಿಂದೀಯಲ್ಲಿ ಮಾಹಿತಿ ವಿಶ್ಲೇಷಣೆಗಾಗಿ ಸಿದ್ಧಪಡಿಸಲಾದ ದೇವನಾಗರಿಯಲ್ಲಿರುವ ತಂತ್ರಾಂಶಗಳು ಇನ್ನೂ ಪ್ರಾಯೋಗಿಕ ಹಂತದಲ್ಲಿವೆ. ಅಲ್ಲದೇ ಬೇರೆ ಬೇರೆ ಬ್ಯಾಂಕುಗಳು ಬೇರೆ ಬೇರೆ ಗಿರಾಕಿಗಳಿಂದ ತಮ್ಮ ತಂತ್ರಾಂಶವನ್ನು ಸಿದ್ಧಪಡಿಸಿಕೊಳ್ಳುತ್ತಿರುವುದು ಕೂಡ ಹಿಂದೀ ತಂತ್ರಾಂಶಗಳಲ್ಲಿ ಏಕರೂಪತೆ ತರಲು ಅಡ್ಡಿಯಾಗಿದೆ. ಆದ್ದರಿಂದ ಭಾರತೀಯ ರಿಸರ್ವ್ ಬ್ಯಾಂಕ್, ಹಣಕಾಸು ಇಲಾಖೆಗಳು ಈ ಬಗ್ಗೆ ಗಮನ ನೀಡಿ, ಮಾಹಿತಿ ವಿಶ್ಲೇಷಣೆಯ ಹಿಂದೀ ತಂತ್ರಾಂಶಗಳಲ್ಲಿ ಏಕರೂಪತೆ ಬರುವಂತೆ ಮಾಡಬೇಕು. ಅಲ್ಲದೇ, ಎಟಿಎಮ್, ಕ್ರೆಡಿಟ್‌ಕಾರ್ಡ್, ಆನ್‌ಲೈನ್ ಅನುಕೂಲಗಳು ಇಂಗ್ಲೀಶ್ ಒಂದಕ್ಕೆ ಸೀಮಿತವಾಗದೇ ದ್ವಿಭಾಷೆಯಲ್ಲಿ ದೊರಕುವಂತೆ ಮಾಡಬೇಕು.

೨. ವಿಮಾ ಸಂಸ್ಥೆಗಳು: ವಿಮಾ ಸಂಸ್ಥೆಗಳು ತಮ್ಮ ಪಾಲಿಸಿ, ಪೇಮೆಂಟ್ ಅರ್ಜಿಗಳು, ನೋಟಿಸ್ ಮುಂತಾದವುಗಳನ್ನು ಇಂಗ್ಲೀಶಿನಲ್ಲಿ ಮಾತ್ರ ಹೊರ ತರುತ್ತಿವೆ. ದ್ವಿಭಾಷೆಯಲ್ಲಿ ಇದನ್ನು ನೀಡಲು ತಂತ್ರಾಂಶಗಳನ್ನು ತಯಾರು ಮಾಡಲಾಗುತ್ತಿದೆ ಎಂದು ಸಮಿತಿಗೆ ತಿಳಿಸಿದ್ದಾರೆ. ಹಣಕಾಸು ಇಲಾಖೆ ಈ ಬಗ್ಗೆ ಹೆಚ್ಚಿನ ಗಮನ ಹರಿಸಿ ಈ ಕೆಲಸ ಬೇಗ ಕೈಗೂಡುವಂತೆ ಮಾಡಬೇಕು.

೩. ಪಾಸ್‌ಪೋರ್ಟ್ ಹಂಚಿಕೆಯ ಕೆಲಸ: ಸಮಿತಿ ದೇಶದ ಹಲವಾರು ಪಾಸ್‌ಪೋರ್ಟ್ ಕಛೇರಿಗಳ ಸಮೀಕ್ಷೆ ನಡೆಸಿತು. ವಿದೇಶಾಂಗ ವ್ಯವಹಾರಗಳ ಇಲಾಖೆ ತಾಂತ್ರಿಕ ಕಾರಣಗಳನ್ನೊಡ್ಡಿ ಪಾಸ್‌ಪೋರ್ಟ್‌ನಲ್ಲಿ ಹಿಂದೀಯಲ್ಲಿ ದಾಖಲು ಮಾಡಲು ಆಗದು ಎಂದು ಸಮಿತಿಗೆ ತಿಳಿಸಿದೆ. ಆದರೆ ಇಲ್ಲಿ ಗಮನಿಸಬೇಕಾದ ವಿಷಯವೆಂದರೆ, ೦೧-೦೨-೧೯೯೪ರ ಆದೇಶ ಸಂಖ್ಯೆ O.M. No. ೧೨೦೧೫/೨೦/೮೭-OL (TC)ರ ಅನ್ವಯ ಎಲ್ಲಾ ವಿದ್ಯುನ್ಮಾನ ಪರಿಕರಗಳು ದೇವನಾಗರಿ ಮತ್ತು ರೋಮನ್ ಎರಡೂ ಲಿಪಿಯಲ್ಲೂ ಕೆಲಸ ಮಾಡಬೇಕು. ಒಂದು ವೇಳೆ ಯಾವುದೇ ಇಲಾಖೆ

ಯಾವುದಾದರೂ ಕಾರಣಕ್ಕೆ ಇದರಿಂದ ವಿನಾಯಿತಿ ಬಯಸಿದ್ದಲ್ಲಿ, ರಾಜಭಾಷಾ ಆಯೋಗದಿಂದ ವಿಶೇಷ ಅನುಮತಿ ಪಡೆದುಕೊಳ್ಳಬೇಕು. ಹಾಗೊಂದು ಮನವಿ ಆಯೋಗಕ್ಕೆ ಕಳಿಸುವ ಮುನ್ನ ವಿದ್ಯುನ್ಮಾನ ಇಲಾಖೆಯನ್ನು ಸಂಪರ್ಕಿಸಿ, ಕೊಂಡುಕೊಳ್ಳಲಾಗುತ್ತಿರುವ ವಿದ್ಯುನ್ಮಾನ ಪರಿಕರಗಳು ದ್ವಿಭಾಷೆಯನ್ನು ಬೆಂಬಲಿಸುವಂತೆ ಮಾಡಲಾಗದು ಅನ್ನುವ ಪ್ರಮಾಣಪತ್ರ ಪಡೆಯತಕ್ಕದ್ದು. ಆದರೆ ವಿದೇಶಾಂಗ ವ್ಯವಹಾರಗಳ ಇಲಾಖೆ ಇಂತಹದೊಂದು ವಿನಾಯಿತಿಯನ್ನು ರಾಜಭಾಷಾ ಆಯೋಗದಿಂದ ಪಡೆದ ಬಗ್ಗೆ ಸಮಿತಿಗೆ ಏನು ತಿಳಿದಿಲ್ಲ. ಆದ್ದರಿಂದ ಎಲ್ಲಾ ಪಾಸ್‌ಪೋರ್ಟ್ ಕಛೇರಿಗಳಲ್ಲಿ ದ್ವಿಭಾಷೆಯಲ್ಲಿ ಪಾಸ್‌ಪೋರ್ಟ್‌ಗಳನ್ನು ಹಂಚಲು ಸಾಧ್ಯವಾಗುವಂತೆ ಗಣಕಯಂತ್ರಗಳನ್ನು ಸಜ್ಜುಗೊಳಿಸಬೇಕೆಂದು ಸಮಿತಿ ಶಿಫಾರಸ್ಸು ಮಾಡುತ್ತದೆ.

೪. ಭಾರತೀಯ ರೈಲ್ವೆ: ರೈಲ್ವೆಯ ಟಿಕೇಟ್ ಕಾದಿರಿಸುವಿಕೆಯ ವ್ಯವಸ್ಥೆ ದ್ವಿಭಾಷೆಯಲ್ಲಿದೆ. ಆದರೆ ರೈಲಿನ ಬರುವ–ಹೋಗುವ ವೇಳೆಯನ್ನು ತಿಳಿಸುವ ವಿದ್ಯುನ್ಮಾನ ಬೋರ್ಡ್‌ಗಳು ಹೆಚ್ಚಾಗಿ ಇಂಗ್ಲೀಶಿನಲ್ಲಿ ಮಾತ್ರವಿದೆ.

೫. ಬಿಎಸ್‌ಎನ್‌ಎಲ್/ ಎಂಟಿಎನ್‌ಎಲ್: ಗಣಕೀಕೃತ ಬಿಲ್ ನಮೂನೆಗಳು ದ್ವಿಭಾಷೆಯಲ್ಲಿದ್ದರೂ, ಅವುಗಳಲ್ಲಿ ಮಾಡಲಾಗುತ್ತಿರುವ ದಾಖಲಾತಿಗಳು ಕೇವಲ ಇಂಗ್ಲೀಶ್/ರೋಮನ್ ಲಿಪಿಯಲ್ಲಿವೆ.

೬. ದೂರದರ್ಶನ: ಮಾಹಿತಿ/ ವಾರ್ತೆಯಂತಹ ಹಳ್ಳಿಜನರನ್ನು ತಲುಪಬೇಕಾದ ಕಾರ್ಯಕ್ರಮಗಳು ಕೆಲ ಬಾರಿ ಕೇವಲ ಇಂಗ್ಲೀಶಿನಲ್ಲಿವೆ. ಇವು ದ್ವಿಭಾಷೆಯಲ್ಲಿರಬೇಕು.

೭. ವಿಮಾನಯಾನ ಸೇವೆಗಳು: ಟಿಕೇಟ್ ನಮೂನೆಗಳು ದ್ವಿಭಾಷೆಯಲ್ಲಿದ್ದರೂ, ಅವುಗಳಲ್ಲಿ ಮಾಡಲಾಗುತ್ತಿರುವ ಗಣಕೀಕೃತ ದಾಖಲಾತಿಗಳು ಕೇವಲ ಇಂಗ್ಲೀಶ್ /ರೋಮನ್ ಲಿಪಿಯಲ್ಲಿವೆ.

ಡಿಜಿಟಲ್ ಮಾಹಿತಿ ಹಲಗೆಗಳು ಕೇವಲ ಇಂಗ್ಲೀಶಿನಲ್ಲಿವೆ. ದ್ವಿಭಾಷೆಯಲ್ಲಿ ಇವುಗಳ ಪ್ರದರ್ಶನಕ್ಕೆ ಕ್ರಮ ಕೈಗೊಳ್ಳಬೇಕು.

**ದ್ವಿಭಾಷಿ ವೆಬ್‌ಸೈಟ್‌ಗಳ ಕಟ್ಟುವಿಕೆ:**

೧೧.೮ ಕೆಲವು ಕೇಂದ್ರಸರ್ಕಾರಿ ಇಲಾಖೆಗಳ ತಾಣ ದ್ವಿಭಾಷೆಯಲ್ಲಿದ್ದರೂ ಹಿಂದೀ ಫಾಂಟ್‌ಅನ್ನು ಆಯ್ಕೆ ಮಾಡಿದಾಗ ಹಿಂದೀಯಲ್ಲಿನ ತಾಣ ಅಷ್ಟು ಸುಲಭವಾಗಿ ಬಳಸುವ ರೀತಿಯಲ್ಲಿರಲಿಲ್ಲ. ಹಿಂದೀ ಮತ್ತು ಇಂಗ್ಲೀಶ್ ಆವೃತ್ತಿಯಲ್ಲಿ ಕೊಡ ಮಾಡಿರುವ ಮಾಹಿತಿಯು ಏಕರೂಪದಲ್ಲಿರಲಿಲ್ಲ.

ಆನ್ ಲೈನ್ ಸೇವೆಗಳು: ಸಾಕಷ್ಟು ಇಲಾಖೆಗಳ ಅಂತರ್ಜಾಲದ ಮೂಲಕ ಕೊಡಮಾಡುವ ಆನ್‌ಲೈನ್ ಸೇವೆಗಳು ಕೇವಲ ಇಂಗ್ಲೀಶಿನಲ್ಲಿವೆ. ಹಿಂದೀ ಆವೃತ್ತಿಯ ರೈಲ್ವೆ ಟಿಕೇಟ್ ಕಾಯ್ದಿರಿಸುವ ಭಾಗದ ಎಲ್ಲಾ ವಿವರಗಳು ಕೇವಲ ಇಂಗ್ಲೀಶಿನಲ್ಲಿವೆ. ವಿಮಾನಯಾನದ ಟಿಕೇಟ್ ಕಾಯ್ದಿರಿಸುವ ವ್ಯವಸ್ಥೆಯೂ ಇದೇ ರೀತಿಯಿದೆ.

**ಸಮಿತಿಯ ಶಿಫಾರಸ್ಸುಗಳು:**

೧. ಹಿಂದೀಯಲ್ಲಿ ಗಣಕಯಂತ್ರ ಬಳಸುವ ಬಗ್ಗೆ ಉನ್ನತ ಅಧಿಕಾರಿಗಳಿಗೆ ಕಡಿಮೆಯೆಂದರೂ ಏಳುದಿನಗಳ ತರಬೇತಿ ಏರ್ಪಡಿಸಬೇಕು ಮತ್ತು ಪ್ರತಿ ವಲಯದಲ್ಲೂ ಕನಿಷ್ಠ ಇಂತಿಷ್ಟು ಗಣಕಯಂತದಲ್ಲಿ ಮಾಡುವ ಕೆಲಸ ಹಿಂದೀಯಲ್ಲಿರಬೇಕು ಎಂದು ಉನ್ನತ ಅಧಿಕಾರಿಗಳಿಗೆ ಗುರಿ ನಿಗದಿಪಡಿಸಬೇಕು.

೨. ಎಲ್ಲಾ ಕಛೇರಿಗಳಲ್ಲಿ ಹಿಂದೀ ಬಳಕೆಯಲ್ಲಿ ಏಕರೂಪತೆ ತರಲು ಅನುಕೂಲವಾಗುವಂತೆ ಪ್ರಮಾಣೀಕೃತ ದ್ವಿಭಾಷಾ ತಂತ್ರಾಂಶಗಳ ಅಭಿವೃದ್ಧಿಗೆ ಒಂದು ಸಂಸ್ಥೆಯನ್ನು ರಚಿಸಬೇಕು. ಈ ಮೂಲಕ ಸಿದ್ದವಾಗುವ ತಂತ್ರಾಂಶವನ್ನು ಎಲ್ಲಾ ಕಛೇರಿಗಳು ಬಳಸುವಂತಾಗಬೇಕು.

೩. ಭಾರತೀಯ ರಿಸರ್ವ್ ಬ್ಯಾಂಕ್, ಹಣಕಾಸು ಇಲಾಖೆಗಳು ಮಾಹಿತಿ ವಿಶ್ಲೇಷಣೆಯ ಹಿಂದೀ ತಂತ್ರಾಂಶಗಳಲ್ಲಿ ಏಕರೂಪತೆ ಬರುವಂತೆ ಮಾಡುವತ್ತ ಗಮನಹರಿಸಿ, ಎಲ್ಲಾ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳಲ್ಲಿ ಏಕರೂಪತೆ ತರುವಂತೆ ಮಾಡಬೇಕು.

೪. ಎಟಿಎಮ್, ಕ್ರೆಡಿಟ್ ಕಾರ್ಡ್, ಆನ್–ಲೈನ್ ಅನುಕೂಲಗಳು ಹಿಂದೀ/ದ್ವಿಭಾಷೆಯಲ್ಲಿ ದೊರಕುವಂತೆ ಮಾಡಬೇಕು.

೫. ಸರ್ಕಾರಿ ವಿಮಾ ಸಂಸ್ಥೆಗಳು ತಮ್ಮ ಪಾಲಿಸಿ ದಾಖಲೆಯನ್ನು ಹಿಂದೀ/ದ್ವಿಭಾಷೆಯಲ್ಲಿ ದೊರಕುವಂತೆ ಮಾಡುವತ್ತ ಹಣಕಾಸು ಇಲಾಖೆ ಕ್ರಮ ಕೈಗೊಳ್ಳಬೇಕು.

೬. ಪಾಸ್‌ಪೋರ್ಟ್ ಕಛೇರಿಯ ಎಲ್ಲಾ ಗಣಕಯಂತ್ರ ಗಳಲ್ಲಿ ಹಿಂದೀಯಲ್ಲೂ ಕೆಲಸ ಮಾಡುವಂತ ಅನುಕೂಲಗಳನ್ನು ವಿದೇಶಾಂಗ ವ್ಯವಹಾರಗಳ ಇಲಾಖೆ ಕೈಗೊಂಡು ಪಾಸ್–ಪೋರ್ಟ್ ನಲ್ಲಿ ಹಿಂದೀ/ ದ್ವಿಭಾಷೆಯಲ್ಲಿ ದಾಖಲಾತಿ ಮಾಡುವ ವ್ಯವಸ್ಥೆ ಕಲ್ಪಿಸಿ, ಪಾಸ್‌ಪೋರ್ಟ್ ಹಿಂದೀ/ ದ್ವಿಭಾಷೆಯಲ್ಲಿ ಲಭ್ಯವಾಗುವಂತೆ ಮಾಡಬೇಕು.

೭. BSNL/MTNL ಕೊಡಮಾಡುವ ಬಿಲ್‌ಗಳಲ್ಲಿ ಹಿಂದೀ/ ದ್ವಿಭಾಷೆಯಲ್ಲಿ ದಾಖಲಾತಿಗಳನ್ನು ಮಾಡಬೇಕು.

೮. ದೂರದರ್ಶನದ ಹಿಂದೀ ವಾಹಿನಿಯಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳಲ್ಲಿ ಗಣಕಯಂತ್ರದ ಮೂಲಕ ಕೊಡುವ ತಲೆಬರಹ (captions)ಗಳನ್ನು ಹಿಂದೀಯಲ್ಲಿ ಕೊಡಬೇಕು. ಅದಕ್ಕೆ ಬೇಕಿರುವ ತಂತ್ರಾಂಶವನ್ನು ಅಭಿವೃದ್ಧಿಪಡಿಸಬೇಕು.

೯. ರೈಲ್ವೆ ಮತ್ತು ವಿಮಾನ ನಿಲ್ದಾಣದಲ್ಲಿ ಪ್ರದರ್ಶಿಸುವ ಡಿಜಿಟಲ್ ಮಾಹಿತಿ ಹಲಗೆಗಳಲ್ಲಿ ಮಾಹಿತಿಯನ್ನು ಹಿಂದೀ/ದ್ವಿಭಾಷೆಯಲ್ಲಿ ದೊರಕುವಂತೆ ಮಾಡಬೇಕು.

೧೦. ಎಲ್ಲಾ ಸಚಿವಾಲಯ/ವಿಭಾಗಗಳು ತಮ್ಮ ಅಂತರ್ಜಾಲ ತಾಣವನ್ನು ದ್ವಿಭಾಷೆಯಲ್ಲಿ ಆರಂಭಿಸಬೇಕು.

ಈ ಮೇಲಿನ ಎಲ್ಲಾ ಶಿಫಾರಸ್ಸುಗಳ ಅನುಷ್ಠಾನವನ್ನು ರಾಜಭಾಷಾ ಆಯೋಗವು ಗಮನಿಸಬೇಕು. ಈ ನಿಟ್ಟಿನಲ್ಲಿ ಯಾವುದೇ ಇಲಾಖೆಗೆ ಯಾವುದೇ ರೀತಿಯ ತೊಂದರೆಗಳು ಕಂಡು ಬಂದಲ್ಲಿ, ಪರಿಹಾರ ಕಂಡುಕೊಳ್ಳಲು ಮಾಹಿತಿ ತಂತ್ರಜ್ಞಾನ ಇಲಾಖೆಯ ಸಹಕಾರ ಪಡೆಯಬೇಕು.

## ೧೨. ನೇಮಕಾತಿ ನಿಯಮಗಳಲ್ಲಿ ಹಿಂದೀ ಕಡ್ಡಾಯ

೧೨.೧ ಭಾರತ ವೈವಿಧ್ಯಮಯ ಸಮುದಾಯ ಮತ್ತು ಭಾಷೆಗಳ ಜನರು ನೆಲೆಗೊಂಡಿರುವ ತಾಣವಾಗಿದೆ. ಎಲ್ಲಾ ರಾಜ್ಯದಲ್ಲೂ ಒಂದೊಂದು ಪ್ರತ್ಯೇಕ ಭಾಷೆಯನ್ನಾಡುತ್ತಾರೆ. ಆದರೆ ಹಿಂದೀಯೆಂಬ ಒಂದು ಭಾಷೆ ಭಾರತದೆಲ್ಲೆಡೆ ಮಾತನಾಡುವ ಮತ್ತು ಅರ್ಥ ಮಾಡಿಕೊಳ್ಳುವ ನುಡಿಯಾಗಿದೆ ಮತ್ತು ಅದಕ್ಕೆ ಆಡಳಿತ ಭಾಷೆ ಅನ್ನುವ ಪಟ್ಟವೂ ಸಂವಿಧಾನದಲ್ಲಿ ಇದೆ. ಹಿಂದೀ ಭಾರತದ ಆಡಳಿತ ಭಾಷೆಯಾಗಿರುವುದರಿಂದ ಬೇರೆ ದೇಶಗಳಲ್ಲಿರುವಂತೆಯೇ ಎಲ್ಲಾ ಆಡಳಿತಾತ್ಮಕ ಕೆಲಸವನ್ನು ಆಡಳಿತ ಭಾಷೆಯಾದ ಹಿಂದೀಯಲ್ಲಿ ಮಾಡಬೇಕು. ಆದರೆ ನಿಜ ಸ್ಥಿತಿ ಬೇರೆಯೇ ಇದೆ. ಇಂಗ್ಲಿಷರು ಈ ದೇಶವನ್ನು ೨೦೦ ವರ್ಷಗಳವರೆಗೆ ಆಳಿದ್ದರಿಂದಾಗಿ ಇಂದಿಗೂ ಕೆಲಸದಲ್ಲಿ ಇಂಗ್ಲೀಶ್ ಭಾಷೆಯ ಮೇಲುಗೈ ಇದೆ. ಹಿಂದೀ ಬಿಟ್ಟು ಇಂಗ್ಲೀಶ್ ಬಳಸುವುದೇ ಕೇಂದ್ರಸರ್ಕಾರಿ ಕಛೇರಿಗಳಿಗೆ ಸುಲಭದ ಆಯ್ಕೆಯಾದಂತಿದೆ.

೧೨.೨ ಆಡಳಿತ ಭಾಷಾ ಸಂಸತ್ ಸಮಿತಿಯು, ಕೆಲವು ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಕಂಡುಕೊಂಡ ಒಂದು ಅಂಶವೆಂದರೆ ಇಂದಿಗೂ ಇಂಗ್ಲೀಶಿನ ಅಲ್ಪಜ್ಞಾನವು ಹಿಂದೀಯ ಅಪಾರ ಜ್ಞಾನಕ್ಕಿಂತ ಉತ್ತಮ ಎಂಬ ಭಾವನೆ ಇದೆ ಎಂಬುದು. ಇಂಗ್ಲೀಶ್ ನುಡಿ ಜನರ ಮನಸ್ಸಿನ ಮೇಲೆ ಅದೆಷ್ಟು ಪ್ರಭಾವ ಬೀರಿದೆ ಎಂದರೆ ನಾವು ನಮ್ಮ ಆಡಳಿತ ಭಾಷೆಯನ್ನೇ ಕೀಳಾಗಿ ಕಾಣುವಂತಾಗಿದೆ. ಒಂದು ಸಾಮಾನ್ಯ ನಂಬಿಕೆಯೆಂದರೆ ಇಂಗ್ಲೀಶ್ ಚೆನ್ನಾಗಿ ಬಲ್ಲವನಷ್ಟೇ ಉನ್ನತ ಹುದ್ದೆಗೆ ಏರಬಲ್ಲ ಎಂಬುದು. ಇಂಗ್ಲೀಶಿನ ಕಡ್ಡಾಯ ಬಳಕೆಯಿಂದಾಗಿ ಇಂಗ್ಲೀಶ್ ವಾತಾವರಣದಲ್ಲಿ ಬೆಳೆದವರಿಗೆ ಮೇಲ್ದರ್ಜೆ ಸಿಗುತ್ತಿದೆ.

೧೪.೩ ಇದೆಲ್ಲದರಿಂದಾಗಿ ಸಾಮಾನ್ಯ ಜನರಲ್ಲಿ ಸರ್ಕಾರಿ ನೀತಿ ನಿಯಮಗಳನ್ನು ರೂಪಿಸುವಾಗ ಹಿಂದೀಗಿಂತ ಇಂಗ್ಲೀಶಿಗೆ ಹೆಚ್ಚು ಪ್ರಾಮುಖ್ಯತೆ ಇದೆ ಅನ್ನುವ ಭ್ರಮೆ ಹುಟ್ಟಿಕೊಂಡಿದೆ.

೧೨.೪ ಇದೆಕ್ಕೆಲ್ಲ ಮುಖ್ಯ ಕಾರಣವೆಂದರೆ ಸರ್ಕಾರಿ ಕೆಲಸಗಳಿಗಾಗಿ ನಡೆಯುವ ನೇಮಕಾತಿಯಲ್ಲಿ ತೆಗೆದುಕೊಳ್ಳುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಹಿಂದೀಯ ಅರಿವು ಒಂದು ಅಗತ್ಯದ ಅರ್ಹತೆಯಾಗಿಲ್ಲದಿರುವುದಾಗಿದೆ. ಅಭ್ಯರ್ಥಿಗೆ ಹಿಂದೀಯ ಜ್ಞಾನ ಇದೆಯಾ ಅನ್ನುವುದನ್ನು ಯಾರೂ ಪರೀಕ್ಷಿಸುವುದಿಲ್ಲ. ಸುಮಾರು ೪೪ ಇಲಾಖೆಗಳ ಸಮೀಕ್ಷೆ ನಡೆಸಿದ ಸಮಿತಿಗೆ ಕಂಡಿದ್ದು ಎಲ್ಲೋ ಕೆಲವು ಇಲಾಖೆಗಳ ಹುದ್ದೆಗಳಿಗೆ ಮಾತ್ರ ಹಿಂದೀ ಅರಿವನ್ನು ಪರೀಕ್ಷಿಸಲಾಗುತ್ತಿದೆ ಹೊರತು ಹೆಚ್ಚಿನ ಇಲಾಖೆಯಲ್ಲಿ ಹಿಂದೀ ಅರಿವು ನೇಮಕಾತಿಯ ಒಂದು ಅಗತ್ಯವಾಗಿರುವ ಅರ್ಹತೆಯಾಗಿಲ್ಲ ಅನ್ನುವುದು.

೧೨.೫ ಸ್ಪಷ್ಟವಾಗಿ ಕಾಣಿಸುವುದು ಏನೆಂದರೆ ಪ್ರತಿ ಸಚಿವಾಲಯ/ಇಲಾಖೆಯು ಗ್ರೂಪ್ ಎ,ಬಿ,ಸಿ ಮತ್ತು ಡಿ ಹಂತದ ಹುದ್ದೆಗಳಿಗೆ ಸ್ಪಷ್ಟ ನಿಯಮಾವಳಿಗಳನ್ನು ಹೊಂದಿದ್ದರೂ ಎಲ್ಲೂ ಹಿಂದೀ ಜ್ಞಾನ ಒಂದು ಇರಲೇಬೇಕಾದ ಅರ್ಹತೆಯಾಗಿಲ್ಲ ಅನ್ನುವುದು.

೧೨.೬ ಆಡಳಿತ ಭಾಷೆ ಇಲಾಖೆಯ ಅಧಿಕಾರಿಗಳ ಮತ್ತು ಉದ್ಯೋಗಿಗಳ ನೇಮಾಕಾತಿಗೆ ಮಾತ್ರವೇ ಹಿಂದೀಯ ಅರಿವಿನ ಮಟ್ಟವನ್ನು ಗೊತ್ತುಪಡಿಸಲಾಗಿದೆ. ಈಗ ಏಳುವ ಪ್ರಶ್ನೆ ಏನೆಂದರೆ "ಹಿಂದೀಯಲ್ಲಿ ಆಡಳಿತಾತ್ಮಕ ಕೆಲಸ ಮಾಡುವುದು ಕೇವಲ ರಾಜಭಾಷಾ ಇಲಾಖೆಯ ಉದ್ಯೋಗಿಗಳ ಜವಾಬ್ದಾರಿಯೇ?’’ ಇದೇ ಧೋರಣೆ ಮುಂದುವರೆದಲ್ಲಿ ಕೆಲಸಮಯದಲ್ಲಿಯೇ ಸರ್ಕಾರಿ ಸೇವೆಗಳಲ್ಲಿ ಹಿಂದೀಯಲ್ಲಿ ಕೆಲಸ ಮಾಡುವ ಜನರ ಸಂಖ್ಯೆ ಬೆರಳೆಣಿಕೆಯಷ್ಟಾದೀತು.

೧೨.೭ ಈ ಸ್ಥಿತಿಯನ್ನು ತಡೆಯಲು, ಮೊದಲ ಹೆಜ್ಜೆಯಾಗಿ ನೇಮಕಾತಿಯ ಹಂತದಲ್ಲಿ ಹಿಂದೀಯ ಅರಿವನ್ನು ಕಡ್ಡಾಯಗೊಳಿಸಬೇಕು. `ಡಿ’ ದರ್ಜೆಯ ನೌಕರಿಯೊಂದನ್ನು ಹೊರತುಪಡಿಸಿ ಎಲ್ಲಾ ಗುಂಪಿನ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮೆಟ್ರಿಕ್/ ಹತ್ತನೇ ತರಗತಿಯ ಮಟ್ಟದ ಹಿಂದೀ ಅರಿವನ್ನು

ಇನ್ನಿತರ ಬೇಕಾದ ಅರ್ಹತೆಗಳ ಜೊತೆ ಕಡ್ಡಾಯಗೊಳಿಸಬೇಕು. ಕೆಲವು ಹಂತದಲ್ಲಿ ಈ ಅರ್ಹತೆಯು ಇನ್ನೂ ಹೆಚ್ಚಿನ ಮಟ್ಟದ್ದಿರಬಹುದು, ಆದರೆ ಕನಿಷ್ಠ ಮೆಟ್ರಿಕ್ ಮಟ್ಟದ ಹಿಂದೀ ಕಡ್ಡಾಯವಾಗಬೇಕು. ಗ್ರೂಪ್ ಡಿ ಹಂತದ ಕೆಲಸಗಳಿಗೆ ಈ ನಿಯಮಾವಳಿಯನ್ನು ಕೊಂಚ ಸಡಿಲಿಸಿ ಎಂಟನೇ ತರಗತಿಯ ಹಂತವನ್ನು ನಿಗದಿ ಮಾಡಬಹುದು.

೧೨.೮ ಈ ಮೇಲಿನ ನಿಯಮಗಳನ್ನು ಪಾಲಿಸಿದರೆ, ಅಧಿಕಾರಿಗಳಿಗೆ/ ಉದ್ಯೋಗಿಗಳಿಗೆ ಹಿಂದೀ ತರಬೇತಿ ಕೊಡುವ ತೊಂದರೆ ಸರ್ಕಾರಕ್ಕೆ ತಪ್ಪೀತು. ಬೇರೆ ಬೇರೆ ಹಂತದಲ್ಲಿ ನೇಮಕಾತಿಗಳು ನಡೆಯುವುದರಿಂದ ಹೊಸತಾಗಿ ನೇಮಕಗೊಂಡವರನ್ನು ತರಬೇತಿಗೊಳಪಡಿಸುವುದು ಕಷ್ಟದ ಕೆಲಸವಾಗಿದೆ. ತರಬೇತಿ ಸಂಸ್ಥೆಗಳು ಎಲ್ಲೆಡೆ ಲಭ್ಯವೂ ಇಲ್ಲ, ಅಧಿಕಾರಿಗಳು,ಉದ್ಯೋಗಿಗಳನ್ನು ತರಬೇತಿಗಾಗಿ ಕಳಿಸುವುದು ಸುಲಭವೂ ಅಲ್ಲ, ಇದರಿಂದಾಗಿ ತರಬೇತಿ ವ್ಯವಸ್ಥೆ ಒಂದು ದೊಡ್ಡ ಸವಾಲಾಗಿದೆ. ನೇಮಾಕಾತಿ ಹಂತದಲ್ಲೇ ಹಿಂದೀ ಅರಿವು ಕಡ್ಡಾಯಗೊಳಿಸುವುದು ಈ ಗಂಭೀರ ಸಮಸ್ಯೆಯನ್ನು ಬಗೆಹರಿಸುವುದು.

ಈ ನಿಟ್ಟಿನಲ್ಲಿ ಸಮಿತಿ ಮಾಡಿರುವ ಶಿಫಾರಸ್ಸುಗಳು:

೧. ಸರ್ಕಾರಿ ಸೇವೆಗಳಿಗೆ ಪ್ರವೇಶಿಸುವ ಮುನ್ನವೇ ಹಿಂದೀ ಅರಿವಿನ ಬಗ್ಗೆ ಕನಿಷ್ಟ ಅರ್ಹತೆಯನ್ನು ನಿಗದಿಪಡಿಸಬೇಕು.ಉನ್ನತ ದರ್ಜೆಯ ಕೆಲಸಗಳಿಗೆ ಈ ಮಟ್ಟವನ್ನು ಮೆಟ್ರಿಕ್ ಹಂತದ ಮಟ್ಟಕ್ಕೆ ನಿಗದಿಪಡಿಸಬಹುದು. ಗ್ರೂಪ್ ಡಿ ಹುದ್ದೆಗಳಿಗೆ ಇದನ್ನು ಮಾಧ್ಯಮಿಕ ಶಾಲಾ ಹಂತದ/ ಎಂಟನೇ ತರಗತಿಯ ಮಟ್ಟದ ಹಿಂದೀಗೆ ಸಡಿಲಿಸಬಹುದು.

೨. ಕೇಂದ್ರಸರ್ಕಾರಿ ಹುದ್ದೆಗಳ ನೇಮಕಾತಿಗೆ ನಡೆಯುವ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮೆಟ್ರಿಕ್/ ೧೦ನೇ ಗ`ರಗತಿ ಮಟ್ಟದ ಹಿಂದೀ ಪ್ರಶ್ನೆಪತ್ರಿಕೆಯನ್ನು ಕಡ್ಡಾಯಗೊಳಿಸಬೇಕು. ಈ ಪರೀಕ್ಷೆಯಲ್ಲಿ ಪಾಸಾಗದ ಅಭ್ಯರ್ಥಿಯನ್ನು ನೇಮಕಾತಿಯನ್ನು ಅನರ್ಹಗೊಳಿಸಬೇಕು.

## ೧೩. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಿತಿಗತಿ

೧೩.೧ ರಾಜ್‌ಭಾಷಾ ಕಾಯಿದೆಯ ಕಟ್ಟುನಿಟ್ಟಿನ ಅನುಷ್ಠಾನದ ದೃಷ್ಟಿಯಿಂದ ಸರಿಯಾದ ಸಂಖ್ಯೆಯಲ್ಲಿ ಹಿಂದೀ ಹುದ್ದೆಗಳನ್ನು (ಹಿರಿಯ ಹಿಂದೀ ಅಧಿಕಾರಿ, ಹಿಂದೀ ಅಧಿಕಾರಿ, ಹಿರಿಯ ಹಿಂದೀ ಅನುವಾದಕ, ಹಿಂದೀ ಅನುವಾದಕ, ಹಿಂದೀ ಬೆರಳಚ್ಚುಗಾರ) ಕೇಂದ್ರಸರ್ಕಾರಿ ವ್ಯಾಪ್ತಿಯ ಸಚಿವಾಲಯ ಮತ್ತು ಇತರ ಇಲಾಖೆಗಳಲ್ಲಿ ಹುಟ್ಟುಹಾಕಬೇಕಾದ ಅಗತ್ಯವಿದೆ. ಈ ಉದ್ದೇಶದಿಂದಲೇ ರಾಜ್‌ಭಾಷಾ ಅಯೋಗವು ಪ್ರತಿ ಇಲಾಖೆಯಲ್ಲೂ ಹಿಂದೀ ಹುದ್ದೆಗಳನ್ನು ಸೃಷ್ಟಿಸುವ ಬಗ್ಗೆ ೨೭ ಏಪ್ರಿಲ್, ೧೯೮೧ ರಂದು No. ೧೩೦೩೫/೩/೮೦-OL(C) ಅನ್ನುವ ಆಜ್ಞೆಯ ಮೂಲಕ ಮಾರ್ಗದರ್ಶನವನ್ನು ನೀಡಿದೆ. ಇದನ್ನು ೫ ಏಪ್ರಿಲ್, ೧೯೮೯ ರ OM No. ೧೩೦೩೫/೩/೮೮-OL(C) ಅನ್ವಯ ನವೀಕರಿಸಲಾಯಿತು.

ಅಧಿಕೃತ ಭಾಷಾ ಅನುಷ್ಠಾನ ಮತ್ತು ಅನುವಾದಕ್ಕಾಗಿ ತೆಗೆದುಕೊಳ್ಳಬೇಕಾದ ಕನಿಷ್ಠ ಹಿಂದೀ ಹುದ್ದೆಗಳ ಬಗ್ಗೆ ೨೨ ಜುಲೈ, ೨೦೦೪ ರನ್ವಯ ಹೊರಡಿಸಲಾದ ಆಜ್ಞೆ OM No. ೧೩೦೩೫/೩/೯೫-OL(P&C)ಯ ಅನ್ವಯ ಕೈಗೊಳ್ಳಲಾದ ಕೆಲವು ಮುಖ್ಯವಾದ ಸಲಹಾ ಸೂತ್ರಗಳು:

೧೩.೨ ಸಚಿವಾಲಯಗಳು/ ಕಛೇರಿಗಳು

೧. ಪ್ರತಿ ಸಚಿವಾಲಯ ಮತ್ತು ಒಬ್ಬರು ಪೂರ್ಣಾವಧಿ ಕಾರ್ಯದರ್ಶಿಗಳನ್ನು ಹೊಂದಿರುವ ಒಂದು ಸ್ವಾಯತ್ತ ಇಲಾಖೆಗೆ ಒಬ್ಬರು ಆಡಳಿತ ಭಾಷಾ ಸಹಾಯಕ ನಿರ್ದೇಶಕರು.

೨. ಪ್ರತೀ ಸಚಿವಾಲಯ ಮತ್ತು ನೂರಕ್ಕೂ ಹೆಚ್ಚು ನೌಕರರಿರುವ, ಹಾಗೂ ನಾಲ್ಕು ಅಧೀನ ಸಂಸ್ಥೆಗಳನ್ನು ಹೊಂದಿರುವ ಒಂದು ಸ್ವಾಯತ್ತ ಇಲಾಖೆಗೆ ಒಬ್ಬರು ಆಡಳಿತ ಭಾಷಾ ಉಪ ನಿರ್ದೇಶಕರು.

೩. ಐವತ್ತಕ್ಕಿಂತ ಕಡಿಮೆ ಸಚಿವಾಲಯದ ನೌಕರರಿರುವೆಡೆ ಒಬ್ಬ ಕಿರಿಯ ಅನುವಾದಕ, ೫೦ರಿಂದ ನೂರರಷ್ಟು ನೌಕರರಿರುವಲ್ಲಿ ಇಬ್ಬರು ಮತ್ತು ೧೦೧ರಿಂದ ೧೫೦ ಜನ ನೌಕರಿರುವಲ್ಲಿ ಮೂವರು ಕಿರಿಯ ಅನುವಾದಕರೂ ೧೫೦ಕ್ಕಿಂತ ಹೆಚ್ಚು ಜನರಿರುವಲ್ಲಿ ಇವರೊಟ್ಟಿಗೆ ಒಬ್ಬ ಹಿರಿಯ ಅನುವಾದಕರೂ ಇರತಕ್ಕದ್ದು.

೧೩.೩ 'ಬಿ' ಮತ್ತು 'ಸಿ' ವಲಯಗಳ ಆಧೀನ ಸಂಸ್ಥೆಗಳಲ್ಲಿ:

೧೮ರಿಂದ ೭೫ ಜನ ಸಚಿವಾಲಯದ ಉದ್ಯೋಗಿಗಳಿಗೆ ಒಬ್ಬ ಕಿರಿಯ ಅನುವಾದಕ ( ಇದು 'ಎ' ವಲಯದಲ್ಲಿ ೧೮–೧೨೫ ಜನರಿಗೆ ಒಂದು).

೭೬ ರಿಂದ ೧೨೫ ಜನ ಸಚಿವಾಲಯದ ಉದ್ಯೋಗಿಗಳಿಗೆ ಇಬ್ಬರು ಕಿರಿಯ ಅನುವಾದಕರು (ಇದು 'ಎ' ವಲಯದಲ್ಲಿ ೧೨೬ ಮತ್ತು ಹೆಚ್ಚಿನ ಜನರಿಗೆ ಎರಡು).

೧೨೬ ರಿಂದ ೧೭೫ ಜನ ಸಚಿವಾಲಯದ ಉದ್ಯೋಗಿಗಳಿಗೆ ಮೂವರು ಕಿರಿಯ ಅನುವಾದಕರು.

೧೭೫ಕ್ಕೂ ಹೆಚ್ಚಿನ  ಸಚಿವಾಲಯದ ಉದ್ಯೋಗಿಗಳಿದ್ದಲ್ಲಿ ಮೂವರು ಕಿರಿಯ ಅನುವಾದಕರ ಜೊತೆ ಒಬ್ಬ ಹಿರಿಯ ಅನುವಾದಕರಿರಬೇಕು.

೨೫ಕ್ಕೂ ಹೆಚ್ಚಿನ ಸಚಿವಾಲಯದ ಉದ್ಯೋಗಿಗಳಿರುವ ಎಲ್ಲ ಕಛೇರಿಗಳಲ್ಲಿ ಒಬ್ಬ ಹಿಂದಿ ಬೆರಳಚ್ಚುಗಾರನನ್ನು ನೇಮಿಸಿಕೊಳ್ಳಬೇಕು.

(ಬೇರೆ ಬೇರೆ ಹಂತಗಳಲ್ಲಿ ಯಾವ ಪ್ರಮಾಣದಲ್ಲಿ ಹಿಂದೀ ಹುದ್ದೆಗಳಿರಬೇಕು ಎಂದು ವಿವರವಾಗಿ ಇರುವ ಮಾಹಿತಿಯನ್ನು ಕೊಟ್ಟಿದ್ದಾರೆ.)

೧೩.೭ ಸಂಸತ್ ಸಮಿತಿಯು ಸಮೀಕ್ಷೆ ಮಾಡಿದ ೧೨೦೫ ಕಛೇರಿಗಳಲ್ಲಿ ಸುಮಾರು ೧೧೨ ಕಛೇರಿಗಳಲ್ಲಿ ನಿಯಮಾವಳಿ ಪ್ರಕಾರ ಸೃಷ್ಟಿಸಬೇಕಾಗಿದ್ದ ಹಿಂದೀ ಹುದ್ದೆಗಳು ಇನ್ನೂ ಸೃಷ್ಟಿಯಾಗಿರಲಿಲ್ಲ. ಇವುಗಳಲ್ಲಿ 'ಎ' ವಲಯದಲ್ಲಿ ೪೫, 'ಬಿ' ವಲಯದಲ್ಲಿ ೧೯ ಮತ್ತು 'ಸಿ' ವಲಯದಲ್ಲಿ ೪೮ ಇವೆ. ಇದರ ಅನ್ವಯ 'ಸಿ' ವಲಯದಲ್ಲಿ ಅತಿ ಹೆಚ್ಚಿನ ಸಂಖ್ಯೆಯ (ಸುಮಾರು ೪೩%) ಕಛೇರಿಗಳಲ್ಲಿ ನಿಯಮಾನುಸಾರ ಹಿಂದೀ ಹುದ್ದೆಗಳನ್ನು ಸೃಷ್ಟಿಸಲಾಗಿಲ್ಲ. (ಬೇರೆ ಬೇರೆ ಹಂತಗಳಲ್ಲಿ ಯಾವ ಪ್ರಮಾಣದಲ್ಲಿ ಹಿಂದೀ ಹುದ್ದೆಗಳಿರಬೇಕು ಎಂದು ವಿವರವಾಗಿ ಇರುವ ಮಾಹಿತಿಯನ್ನು ಇಲ್ಲಿ ಕೈಬಿಟ್ಟಿದೆ.)

**ಹಿಂದೀ ಹುದ್ದೆಗಳ ಸೃಷ್ಟಿಯ ಮೇಲಿನ ನಿಷೇಧ**

೧೩.೨೯  ಹಿಂದೀ ಹುದ್ದೆಗಳನ್ನು ಸೃಷ್ಟಿ ಮಾಡದಿರುವುದು ಹಿಂದೀ ಬಳಕೆಯನ್ನು ಹೆಚ್ಚಿಸುವ ಪ್ರಯತ್ನಕ್ಕೆ ಮಾರಕವಾಗಿ ಪರಿಣಮಿಸಿದೆ. ಹಿಂದೀಯೇತರ ಭಾಗಗಳಲ್ಲಿ ಹಿಂದೀ ಬಳಕೆಗೆ ಬೇಕಾದ ವಾತಾವರಣ ಹುಟ್ಟು ಹಾಕುವ ಪ್ರಯತ್ನಕ್ಕೆ ಅಡ್ಡಗಾಲು ಹಾಕಿವೆ. ಇದಕ್ಕೆ ಮುಖ್ಯಕಾರಣ ಹೊಸ ಹುದ್ದೆಗಳ ಸೃಷ್ಟಿಯ ಮೇಲೆ ಹಣಕಾಸು ಸಚಿವಾಲಯ ವಿಧಿಸಿರುವ ನಿಷೇಧವಾಗಿದೆ.  ಹಣಕಾಸು ಸಚಿವಾಲಯದ ಖರ್ಚು–ವೆಚ್ಚ ವಿಭಾಗ ೨೪.೯.೨೦೦೦ರಂದು ಹೊರಡಿಸಿದ ಆದೇಶ ಸಂಖ್ಯೆ O.M. No. ೭(೪)/E.Coord/೨೦೦೦ರ ಅನ್ವಯ ಎಲ್ಲ ರೀತಿಯ ಹುದ್ದೆಗಳ ಸೃಷ್ಟಿಯ ಮೇಲೂ ನಿಷೇಧ ಹೇರಲಾಗಿದೆ. ಈ ನಿಷೇಧದಿಂದಾಗಿ ಹಿಂದೀಬಳಕೆ ಹೆಚ್ಚಿಸುವಲ್ಲಿ ಆಗಿರುವ ಪ್ರತಿಕೂಲ ಪರಿಣಾಮವನ್ನು ಗಮನದಲ್ಲಿರಿಸಿಕೊಂಡು ಆ ಸಂದರ್ಭದಲ್ಲಿ ಸಂಸತ್ ಸಮಿತಿಯ ಅಧ್ಯಕ್ಷರೂ ಮತ್ತು ಭಾರತದ ಉಪಪ್ರಧಾನಮಂತ್ರಿಗಳೂ ಆಗಿದ್ದ ಎಲ್.ಕೆ.ಅಡ್ವಾಣಿಯವರು, ಸಮಿತಿಯ ಸದಸ್ಯರ ಮನವಿಯನ್ವಯ ೨೨ನೇ ಮೇ ೨೦೦೨ರಂದು ಹಣಕಾಸು ಸಚಿವರಿಗೆ ಪತ್ರ ಬರೆದು ಹಿಂದೀ ಹುದ್ದೆಗಳನ್ನು ಈ ನಿಷೇಧದ ವ್ಯಾಪ್ತಿಯಿಂದ ಆಚೆ ಇಡುವಂತೆ ಮನವಿ ಮಾಡಿದರು. ಅಲ್ಲದೇ ಸಮಿತಿಯ ಉಪಾಧ್ಯಕ್ಷರಾಗಿದ್ದ ಶ್ರೀ ಲಕ್ಷ್ಮೀನಾರಾಯಣ ಪಾಂಡೆಯವರು ಆಗಿನ ಹಣಕಾಸು ಸಚಿವರಾಗಿದ್ದ ಜಸವಂತ್‌ಸಿಂಗ್ ಅವರಿಗೆ ಈ ಬಗ್ಗೆ ಎರಡೆರಡು ಪತ್ರ ಬರೆದು ಮನವಿ ಸಲ್ಲಿಸಿದರು. ಅಕ್ಟೋಬರ್ ೨೩, ೨೦೦೩ ರಂದು ಸಮಿತಿಯ ಅಧ್ಯಕ್ಷರಾದ ಶ್ರೀ ಅಡ್ವಾಣಿಯವರ ನೇತೃತ್ವದಲ್ಲಿ ಸಭೆ ಸೇರಿದ ಸಮಿತಿಯು ಈ ನಿಷೇಧವನ್ನು ಹಿಂಪಡೆಯುವಂತೆ ಅವಿರೋಧವಾಗಿ ನಿರ್ಣಯ ಅಂಗೀಕರಿಸಿತು. ಇದಕ್ಕೆ ಪ್ರತಿಕ್ರಿಯಿಸಿದ ಹಣಕಾಸು ಸಚಿವಾಲಯದ ಖರ್ಚು–ವೆಚ್ಚ ವಿಭಾಗ ಈ ಬಗ್ಗೆ ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿ, ಬೇಕಿದ್ದಲ್ಲಿ ಆಡಳಿತ ಭಾಷಾ ಇಲಾಖೆಯ ವತಿಯಿಂದ ಈ ಬಗ್ಗೆ ಮಂತ್ರಿಮಂಡಲದ ಮುಂದೆ ಪ್ರಸ್ತಾಪ ಸಲ್ಲಿಸುವಂತೆ ಸೂಚಿಸಿತು.

**ಖಾಲಿ ಇರುವ ಹಿಂದೀ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು:**

೧೩.೩೧ ಸಮಿತಿ ಸಮೀಕ್ಷೆ ಮಾಡಿದ ೧೨೦೫ ಕಛೇರಿಗಳ ಪೈಕಿ ಸುಮಾರು ೨೮೪ ಕಛೇರಿಗಳಲ್ಲಿ ಹಿಂದೀ ಹುದ್ದೆಗಳು ಭರ್ತಿಯಾಗದೇ ಉಳಿದಿವೆ. ಈ ಕಛೇರಿಗಳಿಗೆ ಮಂಜೂರಾದ ಒಟ್ಟು ಹುದ್ದೆಗಳ ಸಂಖ್ಯೆ ೩೨೦೨ ಆಗಿದ್ದರೆ, ಆ ಪೈಕಿ ಖಾಲಿ ಇರುವ ಹುದ್ದೆಗಳ ಸಂಖ್ಯೆ ಸುಮಾರು ೫೩೫ ಆಗಿದೆ. ಖಾಲಿ ಇರುವ ಹುದ್ದೆಗಳು 'ಎ' ವಲಯದಲ್ಲಿ ೩೮%, 'ಬಿ' ವಲಯದಲ್ಲಿ ೨೬% ಮತ್ತು 'ಸಿ' ವಲಯದಲ್ಲಿ ೩೬%ರಷ್ಟಿವೆ. ಇದೇ ಸಂದರ್ಭದಲ್ಲಿ ಬೆಳಕಿಗೆ ಬಂದ ಇನ್ನೊಂದು ವಿಷಯವೆಂದರೆ,

ಹಲವಾರು ಬಾರಿ 'ಸಿ' ವಲಯದಲ್ಲಿರುವ ಯಾವುದೋ ಮೂಲೆಯಲ್ಲಿರುವ ಕಛೇರಿಗೆ 'ಎ' ವಲಯದಿಂದ ಆಯ್ಕೆಯಾದ ಅಭ್ಯರ್ಥಿ ಆ ಹುದ್ದೆಯನ್ನು ಸೇರಿಕೊಳ್ಳದೇ ಅದು ಖಾಲಿ ಉಳಿದ ಉದಾಹರಣೆಗಳಿವೆ. ಇಂತಹ ಸಂದರ್ಭದಲ್ಲಿ ಆಯ್ಕೆ ಪ್ರಕ್ರಿಯೆಯನ್ನು ಮತ್ತೊಮ್ಮೆ ಆರಂಭಿಸುವುದನ್ನು ಬಿಟ್ಟು ಬೇರಾವುದೇ ಹಾದಿ ಉಳಿದಿಲ್ಲ. ಇದೂ ಕೂಡಾ ಹಿಂದೀ ಬಳಕೆಯ ಹಾದಿಯಲ್ಲಿ ಅಡ್ಡಗಾಲಾಗಿ ಪರಿಣಮಿಸಿದೆ.

**ಬಹು ಕಾಲ ಖಾಲಿಯಿರುವ ಹಿಂದೀ ಹುದ್ದೆಗಳನ್ನು ತೆಗೆದು ಹಾಕಲಾದ ಕುರಿತು:**

೧೩.೩೨ ಸಮಿತಿಯ ಗಮನಕ್ಕೆ ಬಂದ ಇನ್ನೊಂದು ಅಂಶವೆಂದರೆ ಬಹು ಕಾಲ ಖಾಲಿಯಿರುವ ಹಿಂದೀ ಹುದ್ದೆಗಳನ್ನು ತೆಗೆದುಹಾಕುವಂತೆ ಆದೇಶಿಸಲಾಗಿದೆ ಎಂಬುದು. ಹಿಂದೀ ಹುದ್ದೆಗಳು ಶಾಸನ ಬದ್ಧ ಅಗತ್ಯಗಳನ್ನು ಪೂರೈಸುವಲ್ಲಿ ಪ್ರಾಮುಖ್ಯತೆ ಪಡೆದಿರುವುದರಿಂದ ಅವುಗಳನ್ನು ತೆಗೆದುಹಾಕುವುದು ಸರಿಯಲ್ಲ. ಈ ಹುದ್ದೆಗಳನ್ನು ಪುನರುಜ್ಜೀವನಗೊಳಿಸಬೇಕು ಮತ್ತು ಈ ನಿಟ್ಟಿನಲ್ಲಿ ಹಣಕಾಸು ಸಚಿವಾಲಯದ ಖರ್ಚು-ವೆಚ್ಚ ವಿಭಾಗ ಕ್ರಮ ಕೈಗೊಂಡು ಯಾವುದೇ ಹಿಂದೀ ಹುದ್ದೆಯನ್ನು ತೆಗೆದು ಹಾಕದಂತೆ ನೋಡಿಕೊಳ್ಳಬೇಕು.

**ರಾಜ್‌ಭಾಷಾ ಆಯೋಗದ ನಿಯಮಗಳ ಬಗ್ಗೆ ಅಧಿಕಾರಿಗಳಲ್ಲಿರುವ ಅರಿವಿನ ಕೊರತೆ**

೧೩.೩೩ ಎಲ್ಲೆಲ್ಲಿ ಹಿಂದೀ ಹುದ್ದೆಗಳಿಲ್ಲವೋ, ಅಥವಾ ನಿಗದಿತ ಪ್ರಮಾಣಕ್ಕಿಂತ ಕಡಿಮೆ ಸಂಖ್ಯೆಯಲ್ಲಿವೆಯೋ, ಅಲ್ಲೆಲ್ಲ ಅಲ್ಲಿನ ಅಧಿಕಾರಿಗಳಲ್ಲಿ ಆಡಳಿತ ಭಾಷಾ ನಿಯಮಗಳ ಬಗ್ಗೆ ಅರಿವಿನ ಕೊರತೆ ಇರುವುದು ಕಂಡು ಬಂದಿದೆ. ಕೆಲವು ಕಛೇರಿಗಳ ಹಿರಿಯ ಅಧಿಕಾರಿಗಳಿಗೆ ಆಡಳಿತ ಭಾಷಾ ಇಲಾಖೆಯು ತನ್ನ ವಾರ್ಷಿಕ ಕಾರ್ಯಕ್ರಮಲ್ಲಿ ನಿಗದಿ ಪಡಿಸಿದ ಹಿಂದೀ ಬಳಕೆಯ ಗುರಿಯ ಬಗ್ಗೆಯೂ ಯಾವುದೇ ಮಾಹಿತಿಯಿಲ್ಲದಿರುವುದು ಕಂಡು ಬಂದಿದೆ. ಆದ್ದರಿಂದ ಎಲ್ಲಾ ಹಿರಿಯ ಅಧಿಕಾರಿಗಳಿಗೆ ಹಿಂದೀ ತರಬೇತಿ ಕಮ್ಮಟಗಳನ್ನು ಏರ್ಪಡಿಸಬೇಕೆಂದು ಸಮಿತಿ ತನ್ನ ಏಳನೇ ವರದಿಯಲ್ಲಿ ಶಿಫಾರಸ್ಸು ಮಾಡಿದೆ.

೧೩.೩೪ ಹಲವಾರು ಕಛೇರಿಗಳ ಸಮೀಕ್ಷೆಯ ನಂತರ ಸಮಿತಿ ಈ ಕೆಳಗಿನ ನಿರ್ಧಾರಕ್ಕೆ ಬಂದಿತು.

೧. ಹಿಂದೀ ಬಳಕೆಯ ಶಾಸನಬದ್ಧ ಅಗತ್ಯಗಳನ್ನು ಪೂರೈಸಲು ಆಡಳಿತ ಭಾಷಾ ಸುತ್ತಲಿನ ಹುದ್ದೆಗಳು ಅತ್ಯಂತ ಅಗತ್ಯವಾಗಿದೆ, ಆದ್ದರಿಂದ ಹೊಸ ಹುದ್ದೆಗಳನ್ನು ಸೃಷ್ಟಿಸುವುದರ ಮತ್ತು ತುಂಬುವುದರ ಮೇಲೆ ಹಣಕಾಸು ಇಲಾಖೆ ಹೇರಿರುವ ನಿಷೇಧದ ವ್ಯಾಪ್ತಿಯಿಂದ ಹಿಂದೀ ಹುದ್ದೆಗಳನ್ನು ಹೊರಗಿಡಬೇಕು.

೨. ಪ್ರತೀ ಕೇಂದ್ರಸರ್ಕಾರಿ ಕಛೇರಿಯಲ್ಲೂ ಕೊನೆ ಪಕ್ಷ ಆಡಳಿತ ಭಾಷಾ ಇಲಾಖೆಯ ವ್ಯಾಪ್ತಿಯ ಒಬ್ಬ ಅಧಿಕಾರಿ/ ಉದ್ಯೋಗಿಯನ್ನಾದರೂ ನೇಮಿಸಲೇಬೇಕು. ವಿಶೇಷವಾಗಿ ‘ಬಿ’ ಮತ್ತು ‘ಸಿ’ ವಲಯಗಳಲ್ಲಿರುವ ಕಛೇರಿಗಳಲ್ಲಿ, ಕಛೇರಿಯ ಒಟ್ಟು ಸಾಮರ್ಥ್ಯವನ್ನೇನು ಪರಿಗಣಿಸದೇ, ಅಲ್ಲಿರುವ ಕೆಲಸದ ರೀತಿ, ಅಗತ್ಯಗಳನ್ನು ಪರಿಗಣಿಸಿ ಈ ಹುದ್ದೆಗಳನ್ನು ತುಂಬಿಸಬೇಕು. ಹೀಗೆ ನೇಮಕಗೊಂಡವರ ಮೇಲೆ ಆಡಳಿತ ಭಾಷಾ ಕಾನೂನಿನ ನಿಯಮಗಳು ಮತ್ತು ಅದರ ಅನುಷ್ಠಾನವನ್ನು ಸಂಸ್ಥೆಯ ಎಲ್ಲ ಅಧಿಕಾರಿಗಳು ಮತ್ತು ಉದ್ಯೋಗಿಗಳಿಗೆ ತಿಳಿಹೇಳುವ ಜವಾಬ್ದಾರಿ ಇರುತ್ತದೆ. ಈ ಮೂಲಕ ಹೆಚ್ಚಿನ ಹಿಂದೀ ಬಳಕೆಗೆ ಬೇಕಾಗುವಂತಹ ವಾತಾವರಣ ನಿರ್ಮಿಸಬೇಕು. ಈ ಕಾರಣಕ್ಕೆ, ಹಿಂದೀಹುದ್ದೆಗಳ ನೇಮಕಾತಿ ನಿಯಮವನ್ನು ಇನ್ನಷ್ಟು ಸಡಿಲಗೊಳಿಸಬೇಕಾದ ಅಗತ್ಯ ಆಡಳಿತ ಭಾಷಾ ಇಲಾಖೆಗಿದೆ.

೩. ಕೇಂದ್ರಸರ್ಕಾರಿ ವ್ಯಾಪ್ತಿಯ ಎಲ್ಲ ಕಛೇರಿಗಳಲ್ಲಿ ಆಡಳಿತ ಭಾಷೆಯ ಅನುಷ್ಠಾನದತ್ತ ಮತ್ತು ಅನುವಾದದ ಕೆಲಸ ಮಾಡುತ್ತಿರುವ ಎಲ್ಲ ಅಧಿಕಾರಿ/ ಉದ್ಯೋಗಿಗಳ ಹುದ್ದೆಗಳ ಹೆಸರು, ಸ್ಥಾನ, ಸಂಬಳ ಎಲ್ಲದರಲ್ಲೂ ಏಕರೂಪತೆ ಬರಬೇಕಿದೆ.

೧೩.೩೯ ಸಂಸತ್ ಸಮಿತಿಯು ಹಾಗಾಗಿ ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡುತ್ತದೆ.

೧. ಹಿಂದೀ ಹುದ್ದೆಯ ಸೃಷ್ಟಿಯ ಮತ್ತು ತುಂಬಿಸುವುದರ ಮೇಲೆ ಯಾವುದೇ ನಿರ್ಬಂಧ ಇರಬಾರದು.

೨. ಎಲ್ಲ ಖಾಲಿ ಇರುವ ಹಿಂದೀ ಹುದ್ದೆಗಳನ್ನು ಆದ್ಯತೆಯ ಮೇರೆಗೆ ತುಂಬಿಸಬೇಕು.

೩. ಎಲ್ಲ ಸಚಿವಾಲಯ/ ಇಲಾಖೆಗಳಲ್ಲಿ ನಿರ್ದೇಶಕ(ಆ.ಭಾ)ರ ಹುದ್ದೆಗಳ ವಿಷಯದಲ್ಲಿ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಬೇಕು. ಜೊತೆಯಲ್ಲಿಯೇ ಹೆಚ್ಚುವರಿಯಾಗಿ, ಜಂಟಿ ಕಾರ್ಯದರ್ಶಿ(ಆ.ಭಾ)ಯ ಉನ್ನತ ಹುದ್ದೆಯನ್ನು ಸೃಷ್ಟಿಸುವುದನ್ನು ಪರಿಗಣಿಸಬಹುದು.

೪. ಆರನೇ ವರದಿಯಲ್ಲಿ ತಿಳಿಸಿರುವಂತೆ ಪ್ರತಿ ಸಚಿವಾಲಯ/ ಇಲಾಖೆಯು ತನ್ನ ವ್ಯಾಪ್ತಿಯಲ್ಲಿ ಪ್ರತ್ಯೇಕ ಆಡಳಿತ ಭಾಷಾ ಅನುಷ್ಠಾನ ಪಡೆಯನ್ನು ಕಟ್ಟಿಕೊಳ್ಳಬೇಕು. ಆಯಾ ಇಲಾಖಾ ವ್ಯಾಪ್ತಿಯ ಎಲ್ಲ ಉಪಕಛೇರಿ, ಸಂಸ್ಥೆಗಳ ಅಗತ್ಯವನ್ನು ಈ ಪಡೆ ಪೂರೈಸಬೇಕು. ಈ ಪಡೆಯಿಂದ ಹಿಂದೀ ಅಧಿಕಾರಿ/ ಉದ್ಯೋಗಿಗಳನ್ನು ಆಯ್ಕೆ ಮಾಡಿ ದೇಶದೆಲ್ಲೆಡೆಯ ತನ್ನ ಇಲಾಖಾ ವ್ಯಾಪ್ತಿಯ ಕಛೇರಿಗಳಲ್ಲಿ ತೊಡಗಿಸಬಹುದು. ಇದು ಅವರಿಗೆ ಕೆಲಸದಲ್ಲಿ ಹೆಚ್ಚಿನ ಬಡ್ತಿಯ ಅವಕಾಶಗಳನ್ನು ಕೊಡಮಾಡುವುದು.

೫. ಚಿಕ್ಕದು, ದೊಡ್ಡದು ಅನ್ನದೇ ಎಲ್ಲ ಕಛೇರಿಗಳಲ್ಲಿ, ಅದರಲ್ಲೂ ವಿಶೇಷವಾಗಿ ‘ಸಿ’ ವಲಯದಲ್ಲಿ ಬರುವ ಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸೃಷ್ಟಿಗೆ ಈಗಿರುವ ನಿಯಮಾವಳಿಗಳನ್ನು ಇನ್ನಷ್ಟು ಸಡಿಲಿಸಲು ಕ್ರಮ ಕೈಗೊಳ್ಳಬೇಕು. ಯಾವ ರೀತಿಯ ಕೆಲಸ ಮತ್ತು ಅದರ ಅಗತ್ಯಗಳೇನು ಅಂಬುದನ್ನು ಗಣನೆಗೆ ತೆಗೆದುಕೊಂಡ ನಂತರ ಈ ಕ್ರಮ ಕೈಗೊಳ್ಳಬಹುದು.

೬. ‘ಸಿ’ ವಲಯದಲ್ಲಿರುವ ಕಛೇರಿಗಳಿಗೆ ನಿಯುಕ್ತಿ ಮಾಡಲಾಗುವ ಹಿಂದೀ ನೌಕರರಿಗೆ ಪ್ರೋತ್ಸಾಹದ ರೂಪದಲ್ಲಿ ವಿಶೇಷ ಭತ್ಯೆ ನೀಡಬಹುದು. ‘ಎ’ ವಲಯದಿಂದ ಅಭ್ಯರ್ಥಿಗಳು ‘ಸಿ’

ವಲಯದಲ್ಲಿನ ಹುದ್ದೆಗಳನ್ನು ಯಾವುದೇ ಹಿಂಜರಿಕೆ ಇಲ್ಲದೇ ಒಪ್ಪಿಕೊಳ್ಳುವಂತಾಗಲು ಇಂತಹ ನಿಯುಕ್ತಿಯನ್ನು ಸೀಮಿತ ಅವಧಿಗೆ ಮಾತ್ರವೇ ಮಾಡಬೇಕು.

೭. ಕೇಂದ್ರ ಸರ್ಕಾರಿ ವ್ಯಾಪ್ತಿಯ ಎಲ್ಲ ಕಛೇರಿಗಳಲ್ಲಿ ಆಡಳಿತ ಭಾಷೆಯ ಅನುಷ್ಠಾನದತ್ತ ಮತ್ತು ಅನುವಾದದ ಕೆಲಸ ಮಾಡುತ್ತಿರುವ ಎಲ್ಲ ಅಧಿಕಾರಿ/ ಉದ್ಯೋಗಿಗಳ ಹುದ್ದೆಗಳ ಹೆಸರು, ಸ್ಥಾನ, ಸಂಬಳ ಎಲ್ಲದರಲ್ಲೂ ಏಕರೂಪತೆ ತರುವತ್ತ ಅಗತ್ಯ ಹೆಜ್ಜೆಗಳನ್ನಿಡಬೇಕು.

## ೧೪. ಶಿಕ್ಷಣ ಕ್ಷೇತ್ರ ಮತ್ತು ಹಿಂದೀ

ತ್ರಿಭಾಶಾಸೂತ್ರ, ಆಡಳಿತ ಸೇವಾ ಪರೀಕ್ಷೆಗಳಲ್ಲಿ ಹಿಂದೀ ಮಾದ್ಯಮವನ್ನು ಅಳವಡಿಸಿಕೊಂಡದ್ದು ಮತ್ತು ವಿಶ್ವವಿದ್ಯಾಲಯಗಳು ಹಿಂದೀ ಮಾಧ್ಯಮದಲ್ಲಿ ಕೊಡ ಮಾಡುವ ಕೋರ್ಸ್‌ಗಳಿಗೆ ಸಿಕ್ಕ ಬೆಂಬಲದಿಂದಾಗಿ ಹಿಂದೀ ಕಲಿಸುವುದು ಇಂದು ರಾಷ್ಟ್ರಮಟ್ಟದ ಬೆಳವಣಿಗೆಯಾಗಿದೆ. ದೇವನಾಗರಿ ಲಿಪಿಯಲ್ಲಿರುವ ಹಿಂದೀ ಕೇಂದ್ರದ ಆಡಳಿತ ಭಾಷೆಯಾಗಿರಲಿದೆ ಅನ್ನುವ ವ್ಯವಸ್ಥೆ ಕಲ್ಪಿಸಿದ ಸಂವಿಧಾನದ ನಡೆ ಕಲಿಕಾ ವ್ಯವಸ್ಥೆಯ ಮೇಲೆ ತನ್ನದೇ ಆದ ಪರಿಣಾಮ ಬೀರಲಿದೆ. ಈ ಸ್ಥಿತಿಯಲ್ಲಿ, ದೇಶದ ಪ್ರತಿ ಪ್ರಜೆಗೆ ಹಿಂದೀಯನ್ನು ಕಲಿಯುವ ಅವಕಾಶ ಕಲ್ಪಿಸುವುದು ಕೇಂದ್ರ ಸರ್ಕಾರದ ಕರ್ತವ್ಯವಾಗಿದೆ.ಆದ್ದರಿಂದ ಹಿಂದೀ ಕಲಿಕೆಗೆ ಯಾವುದೇ ಅಡೆತಡೆಗಳಿಲ್ಲದಂತ ಸರಿಯಾದ ವ್ಯವಸ್ಥೆಯೊಂದನ್ನು ರೂಪಿಸುವುದು ಅತ್ಯಂತ ಮಹತ್ವದ್ದಾಗಿದೆ.

**ಕಲಿಕೆಯಲ್ಲಿ ಹಿಂದೀ ಬಳಸಲು ಸಮಿತಿ ಮಾಡಿದ ಶಿಫಾರಸ್ಸುಗಳು:** ಕಲಿಕಾ ಸಂಸ್ಥೆಗಳಲ್ಲಿ ಹಿಂದೀ ಬಳಕೆಯನ್ನು ಹೆಚ್ಚಿಸುವತ್ತ ೧೯೮೯ರಲ್ಲಿ ರಾಷ್ಟ್ರಪತಿಗಳಿಗೆ ಮೂರನೇ ವರದಿಯನ್ನು ಸಲ್ಲಿಸಲಾಗಿತ್ತು. ಇದರಲ್ಲಿ ಕಲಿಕಾ ಸಂಸ್ಥೆಗಳಲ್ಲಿ ಹಿಂದೀ ಕಲಿಸಲು ಇರುವ ಅನುಕೂಲಗಳು, ತ್ರಿಭಾಷಾ ಸೂತ್ರದ ಅನುಷ್ಠಾನ, ಕೃಷಿ, ಇಂಜಿನಿಯರಿಂಗ್, ಮತ್ತು ವೈದ್ಯಕೀಯ ವಿಜ್ಞಾನ ಕಲಿಕೆಯ ಪ್ರವೇಶ ಪರೀಕ್ಷೆ ಮತ್ತು ಉದ್ಯೋಗ ನೇಮಕಾತಿಗಳಲ್ಲಿ ಹಿಂದೀ ಮಾಧ್ಯಮಕ್ಕೆ ಅವಕಾಶ ಕಲ್ಪಿಸುವುದು, ಕೇಂದ್ರ ಸರ್ಕಾರಿ ಉದ್ಯೋಗಿಗಳಿಗೆ ಹಿಂದೀ ತರಬೇತಿ ಹಾಗೂ ಇಲಾಖಾ ತರಬೇತಿಗಳನ್ನು ಹಿಂದೀಯಲ್ಲಿ ಕೊಡುವ ಬಗ್ಗೆ, ಆಲ್ ಇಂಡಿಯಾ

ರೇಡಿಯೊ ಮತ್ತು ದೂರದರ್ಶನದ ಮೂಲಕ ಹಿಂದೀ ಕಲಿಸುವುದು ಮುಂತಾದ ವಿಷಯಗಳ ಶಿಫಾರಸ್ಸುಗಳನ್ನು ಮಾಡಲಾಗಿದೆ. ಅದರಂತೆ, ಕೇಂದ್ರ ಸರ್ಕಾರ ನಡೆಸುತ್ತಿರುವ ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಬೇರೆ ಬೇರೆ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಸಲು ಬೇಕಾದ ಕ್ರಮ ತೆಗೆದುಕೊಳ್ಳುವಂತೆ ಶಿಕ್ಷಣ ಇಲಾಖೆಗೆ ಸರ್ಕಾರ ಸೂಚಿಸಿದೆ. ಕೃಷಿ, ಇಂಜಿನಿಯರಿಂಗ್, ಮತ್ತು ವೈದ್ಯಕೀಯ ವಿಜ್ಞಾನ ಕಲಿಕೆಯ ಪ್ರವೇಶ ಪರೀಕ್ಷೆ ಮತ್ತು ಉದ್ಯೋಗ ನೇಮಕಾತಿಗಳಲ್ಲಿ ಹಿಂದೀ ಮಾಧ್ಯಮಕ್ಕೆ ಅವಕಾಶ ಕಲ್ಪಿಸುವುದರ ಬಗ್ಗೆಯೂ ಸೂಕ್ತ ಕ್ರಮ ಕೈಗೊಳ್ಳುವಂತೆ ಆಯಾ ಇಲಾಖೆಗಳಿಗೆ ಸರ್ಕಾರ ಸೂಚಿಸಿದೆ.

೧೪.೩ ವರದಿಯ ಐದನೇ ಭಾಗದಲ್ಲಿ ಕಾನೂನು ಶಿಕ್ಷಣವನ್ನು ಹಿಂದೀಯಲ್ಲಿ ತರಲು ಶಿಫಾರಸ್ಸುಗಳನ್ನು ಮಾಡಿದೆ. ಸಮಿತಿಯ ಶಿಫಾರಸ್ಸು ಇಂತಿದೆ: ದೇಶಾದ್ಯಂತ ಕಾನೂನು ಶಿಕ್ಷಣ ನೀಡುತ್ತಿರುವ ಎಲ್ಲಾ ಸಂಸ್ಥೆಗಳು ಮತ್ತು ವಿಶ್ವವಿದ್ಯಾಲಯಗಳು ಪದವಿ ಮತ್ತು ಸ್ನಾತಕೋತ್ತರ ಪದವಿ ಮಟ್ಟದಲ್ಲಿ ಹಿಂದೀ ಮಾಧ್ಯಮದಲ್ಲಿ ಕಾನೂನು ಶಿಕ್ಷಣ ನೀಡಲು ಸೂಕ್ತ ಕ್ರಮ ಕೈಗೊಳ್ಳಬೇಕು.

೧೪.೪ ವರದಿಯ ಮೂರನೇ ಭಾಗದಲ್ಲಿ ಕೇಂದ್ರ ಸರ್ಕಾರಿ ಕಛೇರಿಯಲ್ಲಿ ಎಲ್ಲಾ ಕಡಿಮೆ ಅವಧಿಯ ಅಥವಾ ಹೆಚ್ಚು ಅವಧಿಯ ತರಬೇತಿಯನ್ನು ಹಿಂದೀ ಮಾಧ್ಯಮದಲ್ಲಿ ನೀಡಲು ಮುಂದಾಗಬೇಕು ಎಂದು ಶಿಫಾರಸ್ಸು ಮಾಡಿದೆ. ಅಲ್ಲದೇ ಎಲ್ಲಾ ವಲಯ ಗಳಿಗೂ ಒಂದು ಗುರಿಯನ್ನು ನಿಗದಿಪಡಿಸಿದೆ. ಅದರಂತೆ ವಲಯ ಎ ಮತ್ತು ಬಿ ಗೆ ಶೇ.೧೦೦ ಮತ್ತು ವಲಯ ಸಿ ಗೆ ಶೇ.೬೫ ಗುರಿಯನ್ನು ಗೊತ್ತು ಮಾಡಲಾಗಿದೆ.

೧೪.೫ ಬೇರೆ ಬೇರೆ ಶಾಲೆ, ವಿಶ್ವವಿದ್ಯಾಲಯಗಳು, ಸಂಶೋಧನಾ/ ವೃತ್ತಿಪರ ತರಬೇತಿ ಸಂಸ್ಥೆಗಳು, ಬೇರೆ ಬೇರೆ ಇಲಾಖೆಗಳ ತರಬೇತಿ, ಪ್ರವೇಶ ಪರೀಕ್ಷೆಗಳಲ್ಲಿ ಹಿಂದೀ ಮಾಧ್ಯಮದ ಬಳಕೆಯ ಬಗ್ಗೆ ಸಮಿತಿ ಸಮೀಕ್ಷೆ ಮಾಡಿತು. ೯೨ ಸಂಸ್ಥೆಗಳಲ್ಲಿ ಇಂತಹ ಸಮೀಕ್ಷೆ ನಡೆಸಲಾಯಿತು. ಈ ಸಂಸ್ಥೆಗಳನ್ನು ಮೂರು ವಿಧದಲ್ಲಿ ಪಾಲು ಮಾಡಬಹುದು:

೧. ಶೈಕ್ಷಣಿಕ ಸಂಸ್ಥೆಗಳು
೨. ಸಂಶೋಧನಾ/ವೃತ್ತಿಪರ ತರಬೇತಿ ಸಂಸ್ಥೆಗಳು

೩. ಇಲಾಖೆ ವ್ಯಾಪ್ತಿಯ ತರಬೇತಿ ಸಂಸ್ಥೆಗಳು

ಇವುಗಳಲ್ಲಿ ಹಿಂದೀ ಮಾಧ್ಯಮ ಬಳಕೆಯ ಸ್ಥಿತಿಗತಿ ಇಂತಿದೆ:

**ಶೈಕ್ಷಣಿಕ ಸಂಸ್ಥೆಗಳು:**

ಇಂದಿರಾಗಾಂಧೀ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ: ೨೦೦೩–೦೪ ರಲ್ಲಿ ಈ ವಿ.ವಿ ಕೊಡಮಾಡಿದ ೮೭ ಕೋರ್ಸ್ ಗಳಲ್ಲಿ ಕೇವಲ ೫ ಮಾತ್ರ ಹಿಂದೀ ಮಾಧ್ಯಮದಲ್ಲಿದೆ. ೪೨ ಹಿಂದೀ ಮತ್ತು ಇಂಗ್ಲೀಶ್ ಮಿಶ್ರ ಮಾಧ್ಯಮದಲ್ಲಿದೆ. ೪೦ ಕೋರ್ಸ್ ಗಳು ಇಂಗ್ಲೀಶಿನಲ್ಲಿವೆ. ಎಲ್ಲಾ ತಾಂತ್ರಿಕ ವಿಷಯಗಳ ಪದಕೋಶವನ್ನು ವಿಜ್ಞಾನ ಮತ್ತು ತಂತ್ರಜ್ಞಾನ ಪದಕೋಶಗಳ ಕಮೀಶನ್ ಈ ಮುಂಚೆಯೇ ಹಿಂದೀಗೆ ಅನುವಾದಿಸಿರುವುದರಿಂದ ಈ ಎಲ್ಲಾ ಕೋರ್ಸ್ ಗಳನ್ನು ಹಿಂದೀಯಲ್ಲಿ ಶುರು ಮಾಡುವುದು ಅಂತಹ ಕಷ್ಟದ ಕೆಲಸವೇನಲ್ಲ. ಆದ್ದರಿಂದ ಈ ಕೂಡಲೇ ಈ ನಿಟ್ಟಿನಲ್ಲಿ ಕ್ರಮ ಕೈಗೊಂಡು ಈ ದೂರ ಶಿಕ್ಷಣ ವಿಶ್ವವಿದ್ಯಾಲಯ ದೇಶದೆಲ್ಲೆಡೆಯ ಜನರಿಗೆ ಅನುಕೂಲ ಕಲ್ಪಿಸುವಂತಾಗಬೇಕು.

ಎಫ್.ಎಂ ರೇಡಿಯೋಗಳು ಹಿಂದೀ ಮಾಧ್ಯಮದ ಮೂಲಕ ಶಿಕ್ಷಣ ಹರಡುವಲ್ಲಿ ಬಹು ದೊಡ್ಡ ಪಾತ್ರ ವಹಿಸಬಹುದು. ಆದ್ದರಿಂದ ಎಫ್.ಎಮ್ ವಾಹಿನಿಯ ಮೂಲಕ ಪ್ರಸಾರ ಮಾಡುವ ಎಲ್ಲಾ ಕೋರ್ಸ್ ಮತ್ತು ಪಾಠಗಳನ್ನು ಕೇವಲ ಹಿಂದೀಯಲ್ಲಿ ಮಾಡಬೇಕು. ಹೊರ ದೇಶದ ಜನರು ಈ ವಿಶ್ವವಿದ್ಯಾಲಯದಲ್ಲಿ ಪ್ರವೇಶ ಪಡೆಯುವಾಗ ಹಿಂದೀಯ ಅರಿವು ಇರುವವರಿಗೆ ಮೊದಲ ಆದ್ಯತೆ ನೀಡಬೇಕು. ಹಿಂದೀ ಬಾರದವರಿಗೆ ಹಿಂದೀ ಕಲಿಯಲು ಉತ್ತೇಜಿಸಬೇಕು. ಈ ಮೂಲಕ ಹೊರ ದೇಶದಲ್ಲಿ ಹಿಂದೀಯನ್ನು ದೊಡ್ಡ ಮಟ್ಟದಲ್ಲಿ ಹರಡಲು ಸಹಾಯವಾಗುವುದು ಮತ್ತು ಹೊರ ದೇಶದಲ್ಲಿ ಹಿಂದೀಗೆ ತಕ್ಕ ಸ್ಥಾನ ಸಿಗುವಂತೆ ಮಾಡಬಹುದಾಗಿದೆ.

೧೪.೬.೮ ಶಾಲಾ ಶಿಕ್ಷಣವೆಂಬುದು ರಾಜ್ಯಸರ್ಕಾರದ ಕೈಯಲ್ಲಿದೆ. ಭಾಷೆಯೂ ಸೇರಿದಂತೆ ಎಲ್ಲಾ ವಿಷಯಗಳ ಬಗ್ಗೆ ಪಠ್ಯಕ್ರಮ, ಪಠ್ಯಪುಸ್ತಕಗಳನ್ನು ರೂಪಿಸುವುದು ರಾಜ್ಯಸರ್ಕಾರ ಮತ್ತು ಅದರ ಶಿಕ್ಷಣ ಇಲಾಖೆಯ ಜವಾಬ್ದಾರಿಯಾಗಿದೆ. ಕೇಂದ್ರಸರ್ಕಾರ ನೀತಿ ನಿಯಮ, ಮಾರ್ಗದರ್ಶನಗಳನ್ನು ರಾಜ್ಯಸರ್ಕಾರಗಳಿಗೆ ನೀಡುತ್ತದೆ. ಕೇಂದ್ರ ಮತ್ತು ರಾಜ್ಯಸರ್ಕಾರಗಳ ಶ್ರಮದಿಂದಾಗಿ

ಹಿಂದೀಯನ್ನು ಒಂದು ಭಾಷೆಯಾಗಷ್ಟೇ ಅಲ್ಲದೇ ಮಾಧ್ಯಮವಾಗಿಯು ಕಲಿಸುವ ಏರ್ಪಾಡುಗಳನ್ನು ಮಾಡಲಾಗಿದೆ. ಹಿಂದೀ ಅಭ್ಯಸಿಸಲು ಮತ್ತು ಕಲಿಯಲು ಅನುವಾಗುವಂತೆ ಸಿ.ಬಿ.ಎಸ್.ಈ ಶಾಲೆಗಳಲ್ಲಿ ಕೇಂದ್ರ ಸರ್ಕಾರ ವ್ಯವಸ್ಥೆ ಕಲ್ಪಿಸಿದ್ದರೆ, ಶಾಲಾ ಮಟ್ಟದಲ್ಲಿ ಹಿಂದೀ ಕಲಿಯಲು ರಾಜ್ಯ ಸರ್ಕಾರಗಳು ವ್ಯವಸ್ಥೆ ಕಲ್ಪಿಸಿವೆ.

ಕೇಂದ್ರೀಯ ವಿದ್ಯಾಲಯ ಸಂಘಟನೆಯ ಸಮೀಕ್ಷೆ ನಡೆಸಿದಾಗ ತಿಳಿದು ಬಂದದ್ದೆನೆಂದರೆ ಮಾನವ ಮತ್ತು ಸಮಾಜ ಶಾಸ್ತ್ರಗಳನ್ನು ಹಿಂದೀಯಲ್ಲಿ ಹೇಳಿಕೊಡಲಾಗುತ್ತಿದ್ದರೂ, ಇನ್ನುಳಿದ ವಿಷಯಗಳನ್ನು ಇಂಗ್ಲೀಶ್ ಮಾಧ್ಯಮದಲ್ಲಿ ಹೇಳಿ ಕೊಡಲಾಗುತ್ತಿದೆ ಎಂಬುದು. ಈ ಕೂಡಲೇ ಇದನ್ನು ಸರಿಪಡಿಸಿ ಎಲ್ಲಾ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಯುವ ಆಯ್ಕೆ ಕೊಡಬೇಕೆಂದು ಅಭಿಪ್ರಾಯ ಪಟ್ಟಿತು.

ಸಮಿತಿ ೨೦೦೫ರಲ್ಲಿ ನವೋದಯ ವಿದ್ಯಾಲಯಗಳ ಸಮೀಕ್ಷೆ ನಡೆಸಿತು. ನವೋದಯ ವಿದ್ಯಾಲಯ ಸಮೀತಿಯ ಸದಸ್ಯರ ಅಭಿಪ್ರಾಯವೆನೆಂದರೆ ಈ ಶಾಲೆಗಳು ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿದ್ದು, ಆರನೇ ೮ರಗತಿಯವರೆಗಿನ ಪ್ರವೇಶ ಕೇವಲ ಆ ಜಿಲ್ಲೆಯ ವಿಧ್ಯಾರ್ಥಿಗಳಿಗೆ ಮಾತ್ರ ಇದೆ. ೮ನೇ ೮ರಗತಿಯ ವರೆಗೂ ಶಿಕ್ಷಣ ಮಾಧ್ಯಮ ಒಂದೋ ಮಾತೃ ಭಾಷೆಯಲ್ಲಿ ಇಲ್ಲವೇ ಪ್ರಾದೇಶಿಕ ಭಾಷೆಯಲ್ಲಿರುತ್ತದೆ. ೮ನೇ ೮ರಗತಿಯ ನಂತರ ಸಮಾಜ ಶಾಸ್ತ್ರವನ್ನು ಸಾಮಾನ್ಯವಾಗಿ ಹಿಂದೀ ಮಾಧ್ಯಮದಲ್ಲಿ ಕಲಿಸಲಾಗುತ್ತದೆ, ಆದರೆ ವಿಜ್ಞಾನ ಮತ್ತು ಗಣಿತವನ್ನು ಇಂಗ್ಲೀಶ್ ಭಾಷೆಯಲ್ಲಿ ಕಲಿಸಲಾಗುತ್ತದೆ. ದೇಶಾದ್ಯಂತ ಹಿಂದೀ ಕಲಿಕೆಯ ಸ್ಥಾನ ಮತ್ತು ಹಿಂದೀ ಮಾಧ್ಯಮದಲ್ಲಿ ಕಲಿಕೆ ಕೊಡುವತ್ತ ಆಗಿರುವ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು, ಕೊನೆಗೊಂದು ದಿನ ಎಲ್ಲಾ ವಿಷಯವನ್ನು ಹಿಂದೀ ಮಾಧ್ಯಮದಲ್ಲೇ ಕೊಡಿಸುವಂತಾಗಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿದೆ. ಪ್ರಾದೇಶಿಕ ಭಾಷೆ ಮತ್ತು ಇಂಗ್ಲೀಶ್ ಅನ್ನು ಒಂದು ಭಾಷೆಯಾಗಿ ಕಲಿಸಬಹುದಾಗಿದೆ. ವಲಯ ಎ ಮತ್ತು ಬಿ ಯಲ್ಲಿರುವ ಎಲ್ಲಾ ರಾಜ್ಯ ಸರ್ಕಾರಿ ಶಾಲೆಗಳು, ಕೇಂದ್ರೀಯ ವಿದ್ಯಾಲಯಗಳು ಮತ್ತು ನವೋದಯ ವಿದ್ಯಾಲಯಗಳಲ್ಲಿ ಈ ಮಾದರಿಯ ಶಿಕ್ಷಣವನ್ನು ಅಳವಡಿಸಿಕೊಳ್ಳಬಹುದಾಗಿದೆ. ಹಾಗೆಯೇ 'ಸಿ' ವಲಯದಲ್ಲಿರುವ ಎಲ್ಲಾ ರಾಜ್ಯ ಸರ್ಕಾರಿ ಶಾಲೆಗಳಲ್ಲಿ ಹಿಂದೀಯನ್ನು ಒಂದನೇ ತರಗತಿಯಿಂದಲೇ ಕಲಿಸುವ ಏರ್ಪಾಡು ಮಾಡಬೇಕು.

ಒಂದು ನಿಗದಿತ ಕಾಲದ ನಂತರ ಇದನ್ನು ಪರಿಶೀಲನೆ ಮಾಡಿ ೧೨ನೇ ತರಗತಿಯವರೆಗೂ ಹಿಂದೀ ಮಾಧ್ಯಮದಲ್ಲೇ ಶಿಕ್ಷಣ ನೀಡುವುದನ್ನು ಪರಿಗಣಿಸಬೇಕು. ಎಲ್ಲಾ ಭಾರತೀಯರು ತಮ್ಮ ದೇಶದ ಭಾಷಾ ಮಾಧ್ಯಮದ ಮೂಲಕ ಬೆಸೆದುಕೊಂಡಾಗಲೇ, ಹಿಂದೀಯನ್ನು ದೇಶದ ಆಡಳಿತ ಭಾಷೆಯಾಗಿಸುವ ಸಂವಿಧಾನ ಶಿಲ್ಪಿಗಳ ಕನಸು ನನಸಾಗುವುದು. ಇದರಿಂದಾಗುವ ಇನ್ನೊಂದು ಲಾಭವೆಂದರೆ ಸರ್ಕಾರಿ ಉದ್ಯೋಗಿಗಳಿಗೆ ಹಿಂದೀ ತರಬೇತಿ ಕೊಡಬೇಕಾದ ತೊಂದರೆ ಇರುವುದಿಲ್ಲ. ಆದ್ದರಿಂದ ಈ ಶಿಕ್ಷಣ ವ್ಯವಸ್ಥೆಯನ್ನು ಶಾಲೆಗಳಲ್ಲಿ ಜಾರಿ ಮಾಡಲು ಒಂದು ನಿಗದಿತ ಸಮಯದ ವ್ಯಾಪ್ತಿಯನ್ನು ಗೊತ್ತುಪಡಿಸಬೇಕು. ಈ ನಿಟ್ಟಿನಲ್ಲಿ ಗುರಿ ತಲುಪಲು ಸರ್ಕಾರ ಗಟ್ಟಿಯಾದ ಕ್ರಮಗಳನ್ನು ಕೈಗೊಳ್ಳಬೇಕು.

'ಎ' ಮತ್ತು 'ಬಿ' ವಲಯದಲ್ಲಿರುವ ಭಾರತೀಯ ಕೃಷಿ ಸಂಶೋಧನಾ ಕೇಂದ್ರ ಮತ್ತು ಎಲ್ಲಾ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಹಿಂದೀ ಮಾಧ್ಯಮದಲ್ಲಿ ಮಾತ್ರ ಎಲ್ಲಾ ಕಲಿಕೆ/ತರಬೇತಿಗಳನ್ನು ನೀಡಬೇಕು. ಹಂತ ಹಂತವಾಗಿ ಇದನ್ನು ವಲಯ ಸಿ ಗೂ ವಿಸ್ತರಿಸಬೇಕು.

ಉನ್ನತ ಶಿಕ್ಷಣ ಕೊಡುವ ಸಂಸ್ಥೆಗಳಲ್ಲಿ ಕೆಲಸ ಮಾಡುವ ಶಿಕ್ಷಕರಿಗೆ ಹಿಂದೀ ಭಾಷೆಯ ಬಗ್ಗೆ ಬೇಕಾದಷ್ಟು ಅರಿವಿಲ್ಲದಿರುವುದು ಉನ್ನತ ಶಿಕ್ಷಣವನ್ನು ಹಿಂದೀ ಮಾಧ್ಯಮದಲ್ಲಿ ಕೊಡಿಸದಂತೆ ಮಾಡುತ್ತಿರುವ ಮುಖ್ಯವಾದ ತೊಂದರೆಯಾಗಿದೆ. ಅಲ್ಲದೇ ಈ ಶಿಕ್ಷಕರಿಗೆ ಹಿಂದೀ ಪದಕೋಶದ ಪದಗಳನ್ನು ಬಳಸುವ ಅಭ್ಯಾಸವಿಲ್ಲ. ಒಮ್ಮೆ ಈ ಎರಡು ತೊಂದರೆಗಳನ್ನು ಬಗೆಹರಿಸಿದ್ದಲ್ಲಿ, ಹಿಂದೀ ಮಾಧ್ಯಮದಲ್ಲಿ ಪಾಠ ಮಾಡಲು ಯಾವುದೇ ಹಿಂಜರಿಕೆಯಿಲ್ಲದಂತಾಗಬಲ್ಲುದು.

೧೪.೧೦ ಶಿಫಾರಸ್ಸುಗಳು:

೧. 'ಎ' ಮತ್ತು 'ಬಿ' ವಲಯಗಳಲ್ಲಿರುವ ಎಲ್ಲಾ ರಾಜ್ಯಸರ್ಕಾರಿ ಶಾಲೆಗಳು, ಕೇಂದ್ರೀಯ ವಿದ್ಯಾಲಯಗಳು ಮತ್ತು ನವೋದಯ ವಿದ್ಯಾಲಯಗಳಲ್ಲಿ ೧೦ನೇ ತರಗತಿಯೊರೆಗಿನ ಎಲ್ಲಾ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಈ ಕೂಡಲೇ ಆರಂಭಿಸಬೇಕು. ಪ್ರಾದೇಶಿಕ ಭಾಷೆ ಮತ್ತು ಇಂಗ್ಲೀಶ್ ಅನ್ನು ಒಂದು ಭಾಷೆಯಾಗಿ ಕಲಿಸಬಹುದು.

ಒಂದು ನಿಗದಿತ ಕಾಲದ ನಂತರ ಇದನ್ನು ಪರಿಶೀಲನೆ ಮಾಡಿ ಇದನ್ನು 'ಸಿ' ವಲಯಕ್ಕೂ ವಿಸ್ತರಿಸಬಹುದು.

೨. ವಿಶ್ವವಿದ್ಯಾಲಯಗಳು, ಕಾಲೇಜುಗಳು, ಸಂಶೋಧನಾ/ ವೃತ್ತಿಪರ ತರಬೇತಿ ಸಂಸ್ಥೆಗಳಿಗೆ ಶಿಕ್ಷಕರ ನೇಮಕಾತಿ ಮಾಡುವಾಗ ಮೆಟ್ರಿಕ್ ಹಂತದ ಹಿಂದೀ ಅರಿವು ಕಡ್ಡಾಯ ಅನ್ನುವ ನಿಯಮವನ್ನು ನೇಮಕಾತಿ ನಿಯಮಗಳಿಗ ಸೇರಿಸಬೇಕು. ಹೀಗಾದಾಗ ಕೆಲಸಕ್ಕೆ ಸೇರಿದ ನಂತರ ಹಿಂದೀ ಮಾಧ್ಯಮದಲ್ಲಿ ಕಲಿಸಲು ಯಾವುದೇ ತೊಂದರೆಯಾಗದು.

೩. ಎಲ್ಲಾ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಹಿಂದೀ ವಿಭಾಗವನ್ನು ಕಡ್ಡಾಯವಾಗಿ ಆರಂಭಿಸಬೇಕು ಮತ್ತು ಸ್ನಾತಕೋತ್ತರ ಮಟ್ಟದ ಹಿಂದೀ ಕೋರ್ಸುಗಳು ಲಭ್ಯವಾಗುವಂತೆ ಮಾಡಬೇಕು.

೪. ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮಗಳಾದ ಸರ್ವ ಶಿಕ್ಷಣ ಅಭಿಯಾನದಲ್ಲಿ ಹಿಂದೀಯನ್ನು ಮಾತ್ರ ಕಲಿಕಾ ಮಾಧ್ಯಮವನ್ನಾಗಿಸಬೇಕು.

೫. ವಿಶ್ವವಿದ್ಯಾಲಯಗಳು, ತಾಂತ್ರಿಕ, ಸಂಶೋಧನಾ, ವೃತ್ತಿಪರ ಸಂಸ್ಥೆಗಳಲ್ಲಿ ಹಿಂದೀ ಮಾಧ್ಯಮದಲ್ಲಿ ಕಲಿಯುವ ಆಯ್ಕೆಯನ್ನು ಕಡ್ಡಾಯವಾಗಿ ಕೊಡಬೇಕು.

೬. ರೇಡಿಯೋ/ಟಿವಿಗಳ ಮೂಲಕ ಮಾಡುವ ಎಲ್ಲಾ ಶೈಕ್ಷಣಿಕ ಪ್ರಸಾರಗಳನ್ನು ಕೇವಲ ಹಿಂದೀಯಲ್ಲಿ ಮಾಡಬೇಕು.

೭. ಕಮೀಶನ್ ಆಫ್ ಸೈಂಟಿಫಿಕ್ ಆಂಡ್ ಟೆಕ್ನಿಕಲ್ ಟರ್ಮಿನಾಲಜಿಯಂತಹ ಸಂಸ್ಥೆಗಳು ಪ್ರತಿ ವಿಷಯದ ಬಗ್ಗೆಯೂ ತಾವು ಪ್ರಕಟಿಸಿರುವ ಹಿಂದೀ/ದ್ವಿಭಾಶಿ ಪುಸ್ತಕಗಳ ಪಟ್ಟಿ ಮಾಡಿ, ಎಲ ಶಾಲೆ, ವಿಶ್ವವಿದ್ಯಾಲಯಗಳು, ಸಂಶೋಧನಾ ಮತ್ತು ವೃತ್ತಿಪರ ತರಬೇತಿ ಸಂಸ್ಥೆಗಳಿಗೆ ಲಭ್ಯವಾಗುವಂತೆ ಮಾಡಬೇಕು. ಅಲ್ಲದೇ ಶಿಬಿರ, ಸೆಮಿನಾರ್ ನಂತಹ ಚಟುವಟಿಕೆಗಳ ಮೂಲಕ ಈ ಪುಸ್ತಕಗಳ ಲಭ್ಯತೆ ಬಗ್ಗೆ ಮಾಹಿತಿ ಹಂಚಬೇಕು.

೮. ಕೇಂದ್ರಸರ್ಕಾರಿ, ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳು, ಬ್ಯಾಂಕ್ ಮತ್ತಿತರ ಸಂಸ್ಥೆಗಳ ಇಲಾಖೆವಾರು ಉದ್ಯೋಗಿಗಳ ತರಬೇತಿಯಲ್ಲಿ ತಾಂತ್ರಿಕವಲ್ಲದ ಎಲ್ಲಾ ತರಬೇತಿ ಕೋರ್ಸುಗಳು ಹಿಂದೀ ಮಾಧ್ಯಮದಲ್ಲಿ ಮಾಡಬೇಕು.

೯. ಎಲ್ಲಾ ತರಬೇತಿ ಸಂಸ್ಥೆಗಳ ಮುಖಂಡರು ಸಲ್ಲಿಸುವ ವಾರ್ಷಿಕ ಗೌಪ್ಯ ವರದಿಯಲ್ಲಿ ತಮ್ಮ ತಮ್ಮ ಸಂಸ್ಥೆಯಲ್ಲಿ ಹಿಂದೀ ಬಳಕೆಯನ್ನು ಉತ್ತೇಜಿಸಲು ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿ ನೀಡಬೇಕು.

## ೧೫. ಸಾರ್ವಜನಿಕ ಉದ್ದಿಮೆಗಳು

ಬೇರೆ ಬೇರೆ ಕೇಂದ್ರಸರ್ಕಾರಿ ಇಲಾಖೆ, ಕಛೇರಿಗಳಲ್ಲಿ ಹಿಂದೀ ಬಳಕೆಯನ್ನು ಪರಿಶೀಲಿಸುವ ಆಡಳಿತ ಭಾಷೆ ಮೇಲಿನ ಸಂಸತ್ತಿನ ಉನ್ನತ ಅಧಿಕಾರದ ೩ ಸಮಿತಿಗಳು ಜನವರಿ ೨೦೦೨ ರಿಂದ ಮಾರ್ಚ್ ೨೦೦೫ರ ವರೆಗೆ ಸುಮಾರು ೮೬ ಸಂಸ್ಥೆಗಳ ಸಮೀಕ್ಷೆ ನಡೆಸಿವೆ. ಸಮಿತಿಯ ಪರಿಶೀಲನೆಯನ್ನು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

ಸಾಂಸ್ಥಿಕ ಮತ್ತು ಆಡಳಿತಾತ್ಮಕ ಉದ್ದೇಶಗಳಿಗೆ ಹಿಂದೀ ಬಳಕೆ ಮತ್ತು ನಾನ್‌ಸೆಕ್ರೆಟರಿಯಲ್ ಮತ್ತು ಆಡಳಿತಾತ್ಮಕವಲ್ಲದ ಉದ್ದೇಶಗಳಿಗೆ ಹಿಂದೀ ಬಳಕೆ

### ಎ) ಸಾಂಸ್ಥಿಕ ಮತ್ತು ಆಡಳಿತಾತ್ಮಕ ಉದ್ದೇಶಗಳಿಗೆ ಹಿಂದೀ ಬಳಕೆ

### ತಾಂತ್ರಿಕ ಅಂಶಗಳ ಮತ್ತು ಕೈಪಿಡಿಗಳ ಹಿಂದೀ ಅನುವಾದ

ಕೇಂದ್ರಸರ್ಕಾರಿ ಇಲಾಖೆಗಳ ಚಟುವಟಿಕೆಗಳು ಮತ್ತು ಕಾರ್ಯ ನಿರ್ವಹಣೆ ಬಗೆಗಿನ ಎಲ್ಲಾ ಉಲ್ಲೇಖಗಳು, ಕೈಪಿಡಿಗಳನ್ನು ಹಿಂದೀ ಅಥವಾ ದ್ವಿಭಾಷೆಯಲ್ಲಿ ಲಭ್ಯವಾಗುವಂತೆ ಮಾಡಬೇಕು. ಇದರಿಂದ ಹಿಂದೀಯಲ್ಲಿ ಕೆಲಸಕಾರ್ಯ ನಡೆಸಲು ಅನುವಾಗುವುದು.

ತಾಂತ್ರಿಕ ಅಂಶಗಳ ವಿವರವನ್ನು ಹಲವು ಕೇಂದ್ರ ಇಲಾಖೆಗಳು ಹಿಂದೀಗೆ ಅನುವಾದಿಸುತ್ತಿವೆ. ಉದಾ: ಭಾರತ ಪೆಟ್ರೋಲಿಯಂ ಸಂಸ್ಥೆಯ ಎಲ್.ಪಿ.ಜಿ

ಲಾರಿಯನ್ನು ಅನ್‌ಲೋಡ್ ಮಾಡುವ ಕೈಪಿಡಿ, ಡೀಲರ್/ ಡೀಲರ್‌ಶಿಪ್ ಅರ್ಜಿ ಮುಂತಾದ ವಿಷಯಗಳ ಮಾಹಿತಿ ಹಿಂದೀಯಲ್ಲಿದೆ, ಆದರೆ ಇನ್ನಷ್ಟು ಕೆಲಸಗಳಾಗಬೇಕಿದೆ.

**೨. ಗಣಕಯಂತ್ರ ಗಳಲ್ಲಿ ಹಿಂದೀ ತಂತ್ರಾಂಶ**

ಗಣಕಯಂತ್ರಗಳ ಬಳಕೆ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ಆಗಿದೆ. ಭಾರತ್ ಇಲೆಕ್ಟ್ರಾನಿಕ್ಸ್‌ನಂತಹ ಸಂಸ್ಥೆಗಳು ತಮ್ಮ ಹೊರದೇಶದ ಕಛೇರಿಗಳಲ್ಲೂ ಹಿಂದೀ ತಂತ್ರಾಂಶವನ್ನು ಅಳವಡಿಸಿಕೊಂಡಿವೆ. ಹೆಚ್ಚಿನ ಎಲ್ಲಾ ತೈಲ ಕಂಪನಿಗಳೂ ಹಿಂದೀ ತಂತ್ರಾಂಶವನ್ನು ಅಳವಡಿಸಿಕೊಂಡಿವೆ. ಇದೊಂದು ಒಳ್ಳೆಯ ನಡೆಯಾಗಿದ್ದು, ಇದೇ ರೀತಿ ಮುಂದುವರೆಯಬೇಕಿದೆ. ಹಿಂದೀ ತಂತ್ರಾಂಶವನ್ನು ಅಳವಡಿಸಿಕೊಂಡರಷ್ಟೇ ಸಾಲದು, ಅದನ್ನು ಹೆಚ್ಚೆಚ್ಚು ಬಳಸಬೇಕು.

**೩. ಹಿಂದೀಯಲ್ಲಿ ಅಂತರ್ಜಾಲ ತಾಣ ಮತ್ತು ಮಿಂಚೆ**

ಹಿಂದೀಯ ಹರಡುವಿಕೆಯಲ್ಲಿ ಅಂತರ್‌ಜಾಲವನ್ನು ಬಳಸಬಹುದು. ತಮ್ಮ ಕೆಲಸಗಳಲ್ಲಿ ಗಣಕಯಂತ್ರ ಬಳಕೆ ಹೆಚ್ಚಿದಂತೆ, ಸರ್ಕಾರಿ ಸಂಸ್ಥೆಗಳು ತಮ್ಮ ಉತ್ಪನ್ನಗಳ ಪ್ರಚಾರಕ್ಕೆ, ಅಂತರ್‌ರಾಷ್ಟ್ರೀಯ ಮಾರುಕಟ್ಟೆಯನ್ನು ತಲುಪಲು ಅಂತರ್‌ಜಾಲ ತಾಣವನ್ನು ಶುರುಮಾಡಲು ಮುಂದಾಗಿವೆ. ಆಡಳಿತ ಭಾಷಾ ಇಲಾಖೆಯ ೨೦೦೪-೦೫ರ ವಾರ್ಷಿಕ ಕಾರ್ಯಕ್ರಮದನ್ವಯ ಎಲ್ಲಾ ಇಲಾಖೆಗಳು ತಮ್ಮ ತಾಣವನ್ನು ದ್ವಿಭಾಷೆ(ಹಿಂದೀ/ ಇಂಗ್ಲೀಶ್)ಯಲ್ಲಿ ರೂಪಿಸಬೇಕಾಗಿದೆ. ಆದರೆ ಒಟ್ಟು ೪೬ ಇಲಾಖೆಯಲ್ಲಿ ಕೇವಲ ೧೬ ಇಲಾಖೆಗಳು ಮಾತ್ರವೇ ತಮ್ಮ ಅಂತರ್ಜಾಲ ತಾಣವನ್ನು ಹಿಂದೀಯಲ್ಲಿ ರೂಪಿಸಿವೆ.

**ಬಿ) ನಾನ್ ಸೆಕ್ರೆಟರಿಯಲ್ ಮತ್ತು ಆಡಳಿತಾತ್ಮಕವಲ್ಲದ ಉದ್ದೇಶಗಳಿಗೆ ಹಿಂದೀ ಬಳಕೆ**

**೧. ಉತ್ಪನ್ನಗಳ ಮೇಲಿನ ವಿವರಗಳು**

ಹಲವಾರು ಕಂಪನಿಗಳು ತಮ್ಮ ಉತ್ಪನ್ನಗಳ ಮೇಲಿನ ವಿವರಗಳನ್ನು ದ್ವಿಭಾಷೆ (ಹಿಂದೀ /ಇಂಗ್ಲೀಶ್) ಅಥವಾ ಕೇವಲ ಹಿಂದೀಯಲ್ಲಿ ಮಾತ್ರ ಹೊಂದಿವೆ. ಅಂತಹ ಕೆಲವು ಕಂಪನಿಗಳು: HMT, IOC, GAIL, HPCL, BPCL, ONGC, IBP, BEML, HAL etc. Food Corporation of India ಗೋಧಿ ಮತ್ತು ಅಕ್ಕಿಯ

ಚೀಲಗಳ ಮೇಲೆ ಹಿಂದೀ/ ಇಂಗ್ಲೀಶ್‌ಗಳಲ್ಲಿ ಅಥವಾ ಕೇವಲ ಹಿಂದೀಯಲ್ಲಿ ಬರೆಸಿದೆ. ITI ಕಂಪನಿ ತನ್ನ ಟೆಲಿಫೋನ್ ಉತ್ಪನ್ನಗಳ ಹೆಸರನ್ನು ಹಿಂದೀಯಲ್ಲಿರಿಸಿದೆ. Electronics Corporation of India ತನ್ನ ಉತ್ಪನ್ನಗಳ ಲಾಂಛನಗಳನ್ನೂ ದ್ವಿಭಾಷೆಯಲ್ಲಿರಿಸಿದೆ. ವಾಚ್ ಮತ್ತು ಟ್ರಾಕ್ಟರ್ ಉತ್ಪಾದಿಸುವ ಎಚ್. ಎಂ. ಟಿ ತನ್ನೆಲ್ಲ ಉತ್ಪನ್ನಗಳ ಪ್ಯಾಕೇಜ್ ಮೇಲಿನ ವಿವರವನ್ನು ಹಿಂದೀ, ಇಂಗ್ಲೀಶ್ ಮತ್ತು ಇತರ ಭಾಷೆಯಲ್ಲಿ ನೀಡಿವೆ. ಇಂಡಿಯನ್ ಏರ್‌ಲೈನ್ಸ್ ತನ್ನೆಲ್ಲ ಟಿಕೆಟ್, ವೇಳಾ ಪಟ್ಟಿ, ಪ್ರಚಾರ ಸಾಮಗ್ರಿಗಳನ್ನು ದ್ವಿಭಾಷೆಯಲ್ಲಿ ಕೊಡುತ್ತದೆ. ಇಂಡಿಯನ್ ರೈಲ್ವೇಸ್‌ನ ಭಾರತೀಯ ರೈಲು ಕ್ಯಾಟರಿಂಗ್ ಮತ್ತು ಪ್ರವಾಸೋದ್ಯಮ ಸಂಸ್ಥೆಯು (IRCTC) ತನ್ನ ರೇಲ್ವೆ ಪ್ಯಾಂಟ್ರಿಕಾರ್, ಆಹಾರ ಮಳಿಗೆಗಳಲ್ಲಿ ಹಿಂದೀ ಬಳಸುತ್ತಿದೆ. ಹಿಂದುಸ್ತಾನ್ ಪೆಟ್ರೋಲಿಯಂ ತನ್ನ ಉತ್ಪನ್ನಗಳ ಹೆಸರನ್ನು ಲಾಲ್‌ಘೋಡ, ಥಂಡಾರಾಜ ಮುಂತಾಗಿ ಹಿಂದೀಯಲ್ಲಿಯೇ ಇರಿಸಿದೆ. ಆದರೆ ಭಾರತ ಪೆಟ್ರೋಲಿಯಂ, ಇಂಡಿಯನ್ ಆಯಲ್ ಕಂಪನಿಗಳು ತಮ್ಮ ಉತ್ಪನ್ನಗಳ ಹೆಸರನ್ನು 'ಸರ್ವೋ' 'ಸ್ಪೀಡ್' ಎಂದು ಇಂಗ್ಲೀಶ್‌ನಲ್ಲಿರಿಸಿವೆ.

ಬೆಂಗಾಲ್ ಕೆಮಿಕಲ್ಸ್ ಮತ್ತು ಫರ್ಟಿಲೈಸರ್ ಕಂಪನಿ ತನ್ನ ಉತ್ಪನ್ನವೊಂದಕ್ಕೆ "ಮುಖದ್ರೆವ್ " ಅನ್ನುವ ಹೆಸರಿಟ್ಟಿತು. ಇದು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಹಿಂದೀಗೆ ಹೆಚ್ಚಿನ ಪ್ರಚಾರ ಕೊಟ್ಟಿದ್ದಲ್ಲದೆ ನಮ್ಮ ಭಾಷೆ ಮತ್ತು ನಮ್ಮ ಸಂಸ್ಕೃತಿಗೆ ಮನ್ನಣೆ ಕೊಡಿಸಿತು.

**೨. ಉಪಕರಣಗಳು, ಘಟಕಗಳ ವಿವರಗಳು**

ಸಮೀಕ್ಷೆಯಲ್ಲಿ ಕಂಡುಕೊಂಡ ಒಂದು ಅಂಶವೆಂದರೆ ಹಲವಾರು ಉಪಕರಣಗಳು, ಘಟಕಗಳ ವಿವರಗಳು ಇಂಗ್ಲೀಶಿನಲ್ಲಿವೆ ಅನ್ನುವುದು. ಕೆಲವು ದೇಶೀ ನಿರ್ಮಿತ ಉಪಕರಣಗಳು, ಘಟಕಗಳ ವಿವರಗಳು ಮಾತ್ರ ಹಿಂದೀ ಅಥವಾ ದ್ವಿಭಾಷೆಯಲ್ಲಿವೆ.

ಇಂಡಿಯನ್ ಏರ್‌ಲೈನ್ಸ್, ಏರ್ ಇಂಡಿಯಾ, ಎಚ್.ಎಂ.ಟಿ, ಕೋಲ್ ಇಂಡಿಯಾ, ನ್ಯಾಷನಲ್ ಅಲುಮಿನಿಯಮ್ ಮುಂತಾದ ಕಂಪನಿಗಳ ಉಪಕರಣಗಳು, ಘಟಕಗಳ ವಿವರಗಳು ದ್ವಿಭಾಷೆಯಲ್ಲಿವೆ.

ಸಾಕಷ್ಟು ಸಮಾಧಾನ ತರುವ ಮಟ್ಟಿಗೆ ಹಿಂದೀ ಬಳಕೆಯಲ್ಲಿದೆ, ಆದರೆ ಇನ್ನು ಹೆಚ್ಚಿನ ಪ್ರಗತಿಯಾಗಬೇಕಿದೆ.

**೩. ಸಂಸ್ಥೆಗಳ ಹೆಸರು ಮತ್ತು ಅವುಗಳ ಸೇವೆಗಳು**

ಹೊಸತಾಗಿ ಶುರುವಾಗುವ ಎಲ್ಲಾ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳ ಹೆಸರುಗಳು ಕೇವಲ ಹಿಂದೀಯಲ್ಲಿ ಇರಬೇಕು. ಇಂಗ್ಲೀಶಿಗೆ ಹೆಸರನ್ನು ಭಾವಾನುವಾದ ಮಾಡಿಕೊಳ್ಳಬಹುದು. ಆದರೆ ಈ ಮಾರ್ಗಸೂಚಿಯನ್ನು ಪಾಲಿಸಲಾಗಿಲ್ಲ ಎಂಬುದು ಕಂಡುಬಂದಿದೆ.

ಕಂಪನಿ ಆಕ್ಟ್ ೧೯೫೬ರ ಸೆಕ್ಷನ್ ೨೧ರ ಪ್ರಕಾರ ಇಂಗ್ಲೀಶಿನಲ್ಲಿ ಹೆಸರಿರುವ ಕಂಪನಿಗಳು ತಾವು ಬಯಸಿದಲ್ಲಿ ತಮ್ಮ ಹೆಸರನ್ನು ಹಿಂದೀಗೆ ಬದಲಾಯಿಸಿಕೊಳ್ಳಬಹುದು. ಆದರೆ ಇವರೆಗೆ ಯಾವ ಸಂಸ್ಥೆಗಳು ಇದನ್ನು ಮಾಡಿಲ್ಲ.

**೪. ರಫ್ತು ಗುಣಮಟ್ಟದ ಸಾಮಗ್ರಿ ಮತ್ತು ಕೈಪಿಡಿ ಮೇಲಿನ ವಿವರಗಳು**

ಹಲವಾರು ಸಂಸ್ಥೆಗಳು ಹೊರದೇಶದಲ್ಲೂ ತಮ್ಮ ಶಾಖೆಯನ್ನು ಇಲ್ಲವೇ ಘಟಕವನ್ನು ಹೊಂದಿದ್ದಾವೆ. ಈ ಸಂಸ್ಥೆಗಳು ಹೊರ ದೇಶಕ್ಕೂ ತಮ್ಮ ಉತ್ಪನ್ನವನ್ನು ರಫ್ತು ಮಾಡುತ್ತವೆ. ಈ ಸಂಸ್ಥೆಗಳು ಹೊರ ದೇಶಕ್ಕೆ ರಫ್ತು ಮಾಡುವ ಸಾಮಗ್ರಿ, ಉತ್ಪನ್ನಗಳ ವಿವರಗಳು ಕೇವಲ ಇಂಗ್ಲೀಶಿನಲ್ಲಿವೆ ಎಂದು ಸಮಿತಿ ಕಂಡುಕೊಂಡಿದೆ.

ಇಂತಹ ಕೆಲವು ಸಂಸ್ಥೆಗಳು: IOC, HP, ONGC, ECI, BEL, BEML, HAL, SAIL, NCFL, MMTC ಇತ್ಯಾದಿ

೫. ಲೋಗೋ ಮತ್ತು ಮೊನೋಗ್ರಾಮ್ ಗಳು

ಕಂಪನಿಗಳ ಲೋಗೋ ಅಥವಾ ಮೋನೋಗ್ರಾಮ್ ಹಿಂದೀ ಅಥವಾ ಸಾಂಕೇತಿಕ ರೂಪದಲ್ಲಿರಬೇಕು ಎಂದು ಸಮಿತಿ ಶಿಫಾರಸ್ಸು ಮಾಡುತ್ತದೆ.

೬. ONGC ತರಹದ ಕಂಪನಿಗಳ ಪ್ರಕಾರ ಹೊರ ದೇಶದಲ್ಲಿರುವ ತಮ್ಮ ಅಂಗ ಸಂಸ್ಥೆಗಳ ಜೊತೆ ಸಂಪರ್ಕಿಸಲು ಇಂಗ್ಲೀಶ್ ಬೇಕಾಗಿದೆ. ಈ ನಿಟ್ಟಿನಲ್ಲಿ ಹಿಂದೀಯಲ್ಲಿ ಕೆಲಸ ಮಾಡುವಂತೆ ಮಾಡಲು ಸೂಕ್ತ ಕ್ರಮ ಕೈಗೊಳ್ಳಬೇಕಾದ ಅಗತ್ಯವಿದೆ.

೭. ಇತರ ಚಟುವಟಿಕೆಗಳು

ಭಾರತ ಪೆಟ್ರೋಲಿಯಂ ತನ್ನ ಡೀಲರ್ ಮತ್ತು ಹಂಚಿಕೆದಾರರ ಜೊತೆಗಿನ ಸಭೆಗಳನ್ನು ಹಿಂದೀಯಲ್ಲಿ ನಡೆಸುತ್ತೆ. ಹಾಗೆ, ತನ್ನ ಚಾಲಕ ಮತ್ತು ನಿರ್ವಾಹಕರಿಗೆ ಸಾಮಾಜಿಕ ಕಳಕಳಿಯ ವಿಷಯಗಳಾದ ಏಡ್ಸ್ ತಡೆ, ಪ್ರಥಮ ಚಿಕಿತ್ಸೆ ವಿವರ ಇತ್ಯಾದಿಗಳನ್ನು ಹಿಂದೀಯಲ್ಲಿ ನಡೆಸುತ್ತದೆ. BHEL ತನ್ನ ಸಂಸ್ಥೆಯ ಬಗೆಗಿನ ಚಿತ್ರವನ್ನು ಹಿಂದೀಯಲ್ಲೇ ಗ್ರಾಹಕರಿಗೆ ತೋರಿಸುತ್ತದೆ.

**ಹಿಂದೀ ಕಮ್ಮಟಗಳು ಮತ್ತು ಕವಿ ಸಮ್ಮೇಳನಗಳು:** ಹಲವಾರು ಸಂಸ್ಥೆಗಳು ಆಡಳಿತಾತ್ಮಕ ಮತ್ತು ಆಡಳಿತಾತ್ಮಕವಲ್ಲದ ಉದ್ದೇಶಗಳಿಗೆ ತಮ್ಮ ಉದ್ಯೋಗಿಗಳು ಹಿಂದೀ ಬಳಸುವುದನ್ನು ಉತ್ತೇಜಿಸಲು ಹಲವಾರು ಕ್ರಮಗಳನ್ನು ಕೈಗೊಂಡಿವೆ. ಉದ್ಯೋಗಿಗಳಲ್ಲಿ ಹಿಂದೀ ಬಗ್ಗೆ ಆಸಕ್ತಿ ಹೆಚ್ಚಿಸಲು ಕೆಲವು ಸಂಸ್ಥೆಗಳು ಹಿಂದೀ ಕವಿ ಸಮ್ಮೇಳನಗಳನ್ನು ಪ್ರತಿ ವರ್ಷವೂ ಆಯೋಜಿಸುತ್ತಿವೆ.

ಸಾಕಷ್ಟು ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳ ಕಾರ್ಯ ನಿರ್ವಹಣೆ, ವ್ಯಾಪಾರಿ ಚಟುವಟಿಕೆಗಳು, ಆಡಳಿತ ವಿಷಯಗಳು ಕೇವಲ ಇಂಗ್ಲೀಶಿನಲ್ಲಿವೆ. ಆದ್ದರಿಂದ ಎಲ್ಲಾ ಸಂಸ್ಥೆಗಳು ಹಿಂದೀ ಅನುವಾದಕ್ಕೆ ಬೇಕಾದ ಆಯೋಗವನ್ನು ರಚಿಸುವ ಕೆಲಸಕ್ಕೆ ಮುಂದಾಗಬೇಕು.

ಉದ್ಯೋಗಿಗಳ ನಡುವೆ ಹಿಂದೀ ಬಳಕೆ ಬಗ್ಗೆ ಜಾಗೃತಿ ಮೂಡಿಸಲು ಹಲವಾರು ಕೇಂದ್ರ ಸರ್ಕಾರಿ ಸಂಸ್ಥೆಗಳು ತಮ್ಮದೇ ಆದ ಪುರವಣಿಯನ್ನು ಹೊರ ತರುತ್ತಿವೆ. ಉಳಿದ ಎಲ್ಲಾ ಸಂಸ್ಥೆಗಳು ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಬೇಕೆಂದು ಸಮಿತಿ ಸಲಹೆ ನೀಡಿದೆ.

ಗೃಹಖಾತೆಯ ಅಡಿ ಬರುವ ಆಡಳಿತ ಭಾಷಾ ಇಲಾಖೆ ೨೮ ಜನವರಿ ೧೯೯೨ ರಂದು ಹೊರಡಿಸಿರುವ ಆದೇಶ ಸಂಖ್ಯೆ: ೧೨೦೧೯/೧೦/೯೧–OL(೨)ರ ಅನ್ವಯ ಎಲ್ಲಾ ದ್ವಿಭಾಶಿ ಪ್ರಕಾಶನಗಳಲ್ಲಿ ಹಿಂದೀಯಲ್ಲಿ ಪ್ರಕಟವಾದ ಪುಟಗಳ ಸಂಖ್ಯೆ ಇಂಗ್ಲೀಶಿಗಿಂತ ಹೆಚ್ಚಿರಬೇಕು. ಆದರೆ ಇದನ್ನು ಹೆಚ್ಚಿನ ಸಂಸ್ಥೆಗಳು ಪಾಲಿಸಿಲ್ಲ ಅನ್ನುವುದು ಕಮೀತಿಯ ಗಮನಕ್ಕೆ ಬಂದೀದೆ. ಸಂಸ್ಥೆಗಳು ಹೊರ ತರುವ ಎಲ್ಲಾ ಪುರವಣಿಗಳು ಹಿಂದೀಯಲ್ಲಿರಬೇಕು, ಒಂದು ವೇಳೆ ಸಂಸ್ಥೆ ದ್ವಿಭಾಷೆಯಲ್ಲಿ

ಹೊರ ತರಲು ಬಯಸಿದಲ್ಲಿ ಹಿಂದೀ ಪುಟಗಳ ಸಂಖ್ಯೆ ಇಂಗ್ಲೀಶಿಗಿಂತ ಹೆಚ್ಚಿರಬೇಕು.

ಕೆಲವು ಸಂಸ್ಥೆಗಳು ಕೈಗೊಂಡ ವಿಶೇಷ ಕ್ರಮಗಳ ಬಗ್ಗೆ ಸಮಿತಿ ಪ್ರಸ್ತಾಪಿಸಲು ಬಯಸುತ್ತದೆ. ಭಾರತ ಪೆಟ್ರೋಲಿಯಂ ತನ್ನ ಉದ್ಯೋಗಿಗಳಿಗೆ ಹಿಂದೀ ಘೋಷಣೆಗಳುಳ್ಳ ಕಿ ಚೈನ್ ಅನ್ನು ತನ್ನ ಉದ್ಯೋಗಿಗಳಿಗೆ ವಿತರಿಸಿದೆ. ಅಲ್ಲದೆ, ತಮ್ಮ ವೀಡಿಯೊ ಜಾಹಿರಾತನ್ನು ಹಿಂದೀಯಲ್ಲೇ ತಯಾರಿಸಿದೆ. GAIL ಸಂಸ್ಥೆ ತನ್ನ ಆರೋಗ್ಯ ಶಿಬಿರಗಳನ್ನು ಹಿಂದೀಯಲ್ಲೇ ನಡೆಸಿದೆ. ಇಂಡಿಯನ್ ಆಯಲ್ ಸಂಸ್ಥೆ ಹೊಸ ವರ್ಷದ ಶುಭಾಶಯಗಳನ್ನು ಹಿಂದೀಯಲ್ಲೇ ಕಲಿಸಲು ಆರಂಭಿಸಿದೆ. ಒಟ್ಟಾರೆ, ಹಿಂದೀ ಬಳಕೆಯ ಬಗ್ಗೆ ಉತ್ಸಾಹ ತುಂಬುವ, ಬೆನ್ನು ತಟ್ಟುವಂತಹ ವಾತಾವರಣ ಸೃಷ್ಟಿಯಾಗಿದೆ. ಹಿಂದೀ ಬಳಕೆಯತ್ತ ಸತತವಾದ ಶ್ರಮ ವಹಿಸುವ ಮೂಲಕ ಕೇಂದ್ರ ಸರ್ಕಾರಿ ಕಛೇರಿಗಳು ತಮ್ಮ ಕರ್ತವ್ಯ ಮತ್ತು ದೇಶದ ಏಳಿಗೆಯಲ್ಲಿ ಭಾಷೆ ಮತ್ತು ಸಂಸ್ಕೃತಿಯ ಮಹತ್ವವನ್ನು ಈಗ ಅರ್ಥ ಮಾಡಿಕೊಂಡಿದ್ದಾರೆ ಅನ್ನುವುದು ಸಾಬೀತು ಆಗಿದೆ.

ಶಿಫಾರಸ್ಸುಗಳು :

ಹೊಸತಾಗಿ ಶುರುವಾಗುವ ಎಲ್ಲಾ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳ ಹೆಸರುಗಳು ಕೇವಲ ಹಿಂದೀಯಲ್ಲಿ ನೊಂದಾಯಿಸಿಕೊಳ್ಳಬೇಕು. ಅಂತರ್ ರಾಷ್ಟ್ರೀಯ ಮಾರುಕಟ್ಟೆಯನ್ನು ಗಮನದಲ್ಲಿರಿಸಿಕೊಂಡು ಇಂಗ್ಲೀಶ್ ಹೆಸರನ್ನು ಬೇಕಾದರೆ ಜೊತೆಯಲ್ಲಿ ನೊಂದಾಯಿಸಿಕೊಳ್ಳಬಹುದು.

ಕೇಂದ್ರಸರ್ಕಾರಿ ಸಂಸ್ಥೆಗಳಲ್ಲಿರುವ ಎಲ್ಲಾ ಸ್ವದೇಶೀ ಅಥವಾ ಆಮದು ಮಾಡಿಕೊಂಡ ಯಂತ್ರ ಮತ್ತಿತರ ಸರಂಜಾಮಿನ ಮೇಲಿರುವ ವಿವರ ದ್ವಿಭಾಷೆಯಲ್ಲಿರಬೇಕು.

ಕಂಪನಿಗಳ ಲೋಗೋ ಅಥವಾ ಮೋನೋಗ್ರಾಮ್ ಹಿಂದೀ ಅಥವಾ ಸಾಂಕೇತಿಕ ರೂಪದಲ್ಲಿರಬೇಕು.

ಸಂಸ್ಥೆಗಳ ಎಲ್ಲಾ ಹೊಸ ಉತ್ಪನ್ನಗಳ ಹೆಸರು ಹಿಂದೀಯಲ್ಲಿರಬೇಕು. ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಲ್ಲಿ ತನ್ನದೇ ಆದ ಗುರುತು ಕಾಯ್ದುಕೊಳ್ಳುವಲ್ಲಿ ಇದು ಸಹಾಯ ಮಾಡುತ್ತೆ.

ರಫ್ತು ಮಾಡಲಾಗುವ ಎಲ್ಲಾ ಉತ್ಪನ್ನಗಳ ಮೇಲೆ ದ್ವಿಭಾಷೆಯಲ್ಲಿ ವಿವರಗಳನ್ನು ನಮೂದಿಸಬೇಕು.

ಸಂಸ್ಥೆಗಳ ಕೈಪಿಡಿ, ಬಿಲ್ ವೌಚರ್, ಪ್ರಸಾರ ಸಾಮಗ್ರಿಗಳು ದ್ವಿಭಾಷೆಯಲ್ಲಿರಬೇಕು.

ಎಲ್ಲಾ ಅಂತರ್ಜಾಲ ತಾಣಗಳು ದ್ವಿಭಾಷೆಯಲ್ಲಿರಬೇಕು.

ಅನುವಾದಕ್ಕೆ ಅನುವಾಗುವಂತೆ ಎಲ್ಲಾ ಸಂಸ್ಥೆಗಳಲ್ಲಿ ಹಿಂದೀ ಹುದ್ದೆಗಳನ್ನು ಅಗತ್ಯಕ್ಕೆ ತಕ್ಕಂತೆ ಹುಟ್ಟು ಹಾಕಬೇಕು. ಕೇಂದ್ರಕಛೇರಿ ಮಟ್ಟದಲ್ಲಿ ಅನುವಾದ ಆಯೋಗಗಳನ್ನು ತೆರೆಯುವತ್ತ ತಯಾರಾಗಬೇಕು.

ಎಲ್ಲಾ ಸಂಸ್ಥೆಗಳಲ್ಲಿರುವ ಗಣಕಯಂತ್ರದಲ್ಲಿ ಹಿಂದೀ ತಂತ್ರಾಂಶ ಇರಲೇಬೇಕು. ಹೊರದೇಶದಲ್ಲಿರುವ ಕಛೇರಿಗಳಲ್ಲೂ ಈ ಸೌಲಭ್ಯ ಒದಗಿಸಬೇಕು.

## ೧೬. ಜಾಹೀರಾತು ನೀಡುವ ಬಗ್ಗೆ

ಜಾಹೀರಾತಿನ ಮಹತ್ವದ ಬಗ್ಗೆ ಮೊದಲಿಗೆ ಈ ಕಡತದಲ್ಲಿ ಮಾತನಾಡಲಾಗಿದೆ. ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳಲು ಈ ದೇಶದ ಬಹುಸಂಖ್ಯಾತರು ಮಾತನಾಡುವ ಹಿಂದೀ ಭಾಷೆಯಲ್ಲಿ ಅತಿ ಹೆಚ್ಚಿನ ಮಟ್ಟದಲ್ಲಿ ಜಾಹೀರಾತುಗಳನ್ನು ಕೊಡುತ್ತಿದ್ದಾರೆ. ಒಂದು ಮಾತಂತೂ ಸ್ಪಷ್ಟ, ಅದು ಜಾಗತೀಕರಣವಿರಲಿ, ಮಾಧ್ಯಮ ಕ್ಷೇತ್ರವಿರಲಿ ಇಲ್ಲವೇ ಜಾಹೀರಾತಿನ ಕ್ಷೇತ್ರವಿರಲಿ, ನಮ್ಮದೇ ಭಾಷೆ ಬಳಸುವುದು ಬಯಸುವ ಫಲಿತಾಂಶ ಕೊಡುವುದು. **ಹಿಂದೀ ನೂರು ಕೋಟಿ ಜನರ ಭಾಷೆಯಾಗಿದೆ.** ಹಿಂದೀ ಗೊತ್ತಿರುವ ಜನರ ಸಂಖ್ಯೆ ಚೈನೀಸ್ ನಂತರದ ಸ್ಥಾನದಲ್ಲಿದೆ. ಇಂಗ್ಲೀಶ್ ಮೂರನೇ

ಸ್ಥಾನದಲ್ಲಿದೆ. ಭಾರತ ಒಂದು ವಿಶಾಲ ದೇಶ. ಬೇರೆ ಬೇರ ಭಾಗದಲ್ಲಿ ಬೇರೆ ಬೇರೆ ರೀತಿಯ ಹಿಂದೀ ಮಾತನಾಡುತ್ತಾರೆ. ಒಟ್ಟಾರೆ ಭಾರತದಲ್ಲಿನ ಜನರ ಜೊತೆ ಯಾವುದೇ ಸಂಪರ್ಕ ಸಾಧಿಸಲು ಹಿಂದೀಯನ್ನು ಒಪ್ಪಿಕೊಳ್ಳದೇ ಹಾದಿಯಿಲ್ಲ. ಬ್ರಿಟಿಶರು, ಕ್ರಿಶ್ಚಿಯನ್ ಮಿಶನರಿಗಳು ಇರಬಹುದು, ಇಲ್ಲವೇ ಫ್ರೆಂಚ್, ಚೈನಿಸ್, ಜಪಾನಿಸ್ ಕಂಪನಿಗಳಿರಬಹುದು, ತಮ್ಮ ಜಾಹೀರಾತಿನಲ್ಲಿ ಹಿಂದೀಯನ್ನು ಬಳಸುತ್ತಾರೆ. ಇವೆಲ್ಲವೂ ಸ್ಪಷ್ಟಪಡಿಸುವುದೆನೆಂದರೆ ಹಿಂದೀ ಭಾರತದ ಮುಖ್ಯ ಭಾಷೆ ಎಂಬುದನ್ನು.

ಕೇಂದ್ರಸರ್ಕಾರ ತನ್ನ ಜಾಹೀರಾತುಗಳಿಗಾಗಿ ವಾರ್ತಾ ಮತ್ತು ಪ್ರಸಾರ ಇಲಾಖೆಯ ಅಡಿಯಲ್ಲಿ ಸ್ಥಾಪಿಸಿರುವ ನೋಡಲ್ ಏಜೆನ್ಸಿಯ ಹೆಸರು Directorate of Audio Visual Publicity (DAVP) ಆರ್ಥಿಕ ವರ್ಷ ೨೦೦೩–೦೪ರ ಅವಧಿಗೆ DAVP ಸಲ್ಲಿಸಿದ ಮಾಹಿತಿಯನ್ವಯ ಕೇಂದ ಸರ್ಕಾರಿ ಇಲಾಖೆಗಳು ಜಾಹೀರಾತಿಗೆ ಖರ್ಚು ಮಾಡಿದ ಒಟ್ಟು ಹಣ ೧೫೯.೧೪ ಕೋಟಿಯಾಗಿದ್ರೆ, ಅದರಲ್ಲಿ ಶೇಕಡಾ ೩೫ ಮಾತ್ರ (೫೫.೩೯ ಕೋಟಿ)ಹಿಂದೀಗೆ ಬಳಸಲಾಗಿದೆ. ಇಂಗ್ಲೀಶ್ ಜಾಹೀರಾತಿಗೆ ಖರ್ಚು ಮಾಡಲಾದ ಮೊತ್ತ ೫೮.೦೩ ಕೋಟಿಯಾಗಿದೆ. ಕನ್ನಡದಲ್ಲಿ ಜಾಹೀರಾತಿಗೆ ಖರ್ಚಾದ ಮೊತ್ತ ಕೇವಲ ೨.೫೬ ಕೋಟಿ (೧.೬%). ಇತರ ಕೆಲವು ಭಾರತದ ದೊಡ್ಡ ಭಾಷೆಗಳಿಗೆ ಖರ್ಚಾದ ಮೊತ್ತ: ತಮಿಳು = ೩.೫೩ ಕೋಟಿ (೨.೨%) , ತೆಲುಗು = ೧.೯೬ ಕೋಟಿ (೧.೨೩%), ಮರಾಠಿ = ೭.೦೬ ಕೋಟಿ (೪.೪೩%), ಬಾಂಗ್ಲಾ = ೭.೫೬ ಕೋಟಿ (೪.೭೫%), ಮಲಯಾಳಂ = ೪.೮೨ ಕೋಟಿ (೩.೦೨%), ಗುಜರಾತಿ  = ೭.೧೧ ಕೋಟಿ (೪.೪೬%).

ಗುಜರಾತ್, ಮಹಾರಾಷ್ಟ್ರ, ಬಂಗಾಳ, ಕೇರಳ, ಆಂಧ್ರ, ತಮಿಳುನಾಡು, ಕರ್ನಾಟಕ => ೨೦೦೧ರ ಜನಗಣತಿ ಅನ್ವಯ ಭಾರತದ ಜನಸಂಖ್ಯೆಯಲ್ಲಿ  ಈ ಏಳು ಪ್ರಮುಖ ರಾಜ್ಯಗಳ ಸರಿ ಸುಮಾರು ೪೪.೯೭ ಕೋಟಿ. ಭಾರತದ ಜನಸಂಖ್ಯೆಯ ೪೩.೭೮% ಜನಸಂಖ್ಯೆ ಈ ಏಳು ರಾಜ್ಯದಲ್ಲಿದೆ. ಆದರೆ ಇಲ್ಲಿ ಜಾಹೀರಾತಿಗೆ ಖರ್ಚು ಮಾಡಿದ ಹಣದ ಪಾಲು ಕೇವಲ ೩೧.೫೮% ಮಾತ್ರ. ಜನಸಂಖ್ಯೆಯಲ್ಲಿ ಕರ್ನಾಟಕದ ಪಾಲು ಸುಮಾರು ೫% ಇದ್ದರೆ, ಜಾಹೀರಾತಿನ ಪಾಲು ಕೇವಲ ೧.೬% ಮಾತ್ರ.

೧೬.೧೨ ಭಾರತ ಸರ್ಕಾರ ವಿವಿಧ ಯೋಜನೆಗಳ ಬಗ್ಗೆ ಜನಹಿತಕ್ಕಾಗಿ ಜಾರಿ ಮಾಡುವ ಜಾಹೀರಾತು ಇಂಗ್ಲಿಶಿನಲ್ಲಿದ್ದರೆ ಜನರನ್ನು ತಲುಪುವುದೇ? ಹೀಗಾಗಿ DAVP ತನ್ನ ನಿಯಮಗಳನ್ನು ಬದಲಿಸಿಕೊಂಡು ಹಿಂದೀ ಅಥವಾ ಜನರ ಭಾಷೆಯನ್ನು ಬಳಸಬೇಕು.

೧೬.೧೪.೧ ವಿವಿಧ ಸರ್ಕಾರಿ ಬ್ಯಾಂಕುಗಳ ಮುದ್ರಣ ಮಾಧ್ಯಮದ ಜಾಹೀರಾತಿನಲ್ಲಿ ಹಿಂದೀ ಬಳಸುವ ಪ್ರಮಾಣ ಇಂತಿದೆ.

| | |
|---|---|
| ನ್ಯಾಶನಲ್ ಹೌಸಿಂಗ್ ಬ್ಯಾಂಕ್ | ೨೫% |
| ಆಂಧ್ರ ಬ್ಯಾಂಕ್ | ೧೪% |
| ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೋರ್ | ೦.೦೪% |
| ವಿಜಯಾ ಬ್ಯಾಂಕ್ | ೧% |
| ಇಂಡಿಯನ್ ಒವರ್ ಸೀಸ್ ಬ್ಯಾಂಕ್ | ೧% |
| ಒರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | ೩೮% |
| ಪಂಜಾಬ್ ನ್ಯಾಶನಲ್ ಬ್ಯಾಂಕ್ | ೩೬% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾರ್ಪೋರೇಟ್ ಕಛೇರಿ | ೩೦% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಬೆಂಗಳೂರು Local Head Office | ೧% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ದೆಹಲಿ Local Head Office | ೫೦% |
| ಬ್ಯಾಂಕ್ ಆಫ್ ಮಹಾರಾಷ್ಟ್ರ | ೪೧% |
| ದೇನಾ ಬ್ಯಾಂಕ್ | ೩೦% |
| ಕೆನರಾ ಬ್ಯಾಂಕ್ | ೨೯% |
| ಯುನಿಯನ್ ಬ್ಯಾಂಕ್ ಆಫ್ ಇಂಡಿಯಾ | ೩೮% |
| ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | ೧೪% |
| ಬ್ಯಾಂಕ್ ಆಫ್ ಬರೋಡಾ, ಹೆಡ್ ಆಫೀಸ್ | ೮೦% |
| ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | ೧೧% |
| UCO ಬ್ಯಾಂಕ್ | ೧೩% |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೭೮% |

೧೬.೪.೨ – ವಿವಿಧ ಸರ್ಕಾರಿ ಬ್ಯಾಂಕುಗಳ ವಿದ್ಯುನ್ಮಾನ ಮಾಧ್ಯಮದ ಜಾಹೀರಾತಿನಲ್ಲಿ ಹಿಂದೀ ಬಳಸುವ ಪ್ರಮಾಣ ಇಂತಿದೆ.

| | |
|---|---|
| ಆಂಧ್ರ ಬ್ಯಾಂಕ್ | ೧೪% |
| ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೋರ್ | ೦% |
| ಒರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | ೧೦೦% |
| ಪಂಜಾಬ್ ನ್ಯಾಶನಲ್ ಬ್ಯಾಂಕ್ | ೩೮% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾರ್ಪೋರೇಟ್ ಕಛೇರಿ | ೩೦% |
| ಬ್ಯಾಂಕ್ ಆಫ್ ಮಹಾರಾಷ್ಟ್ರ | ೩೮% |
| Small Industries Development Bank of India | ೦% |
| ದೇನಾ ಬ್ಯಾಂಕ್ | ೧೦೦% |
| ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | ೧೯% |
| ಬ್ಯಾಂಕ್ ಆಫ್ ಬರೋಡಾ, ಹೆಡ್ ಆಫೀಸ್ | ೧೦೦% |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೧೨% |

೧೬.೪.೩ ವಿವಿಧ ಸರ್ಕಾರಿ ಬ್ಯಾಂಕುಗಳು ಬ್ಯಾನರ್ಸ್ ಮತ್ತು ಭಿತ್ತಿ ಫಲಕಗಳ ಜಾಹೀರಾತಿನಲ್ಲಿ ಹಿಂದೀ ಬಳಸುವ ಪ್ರಮಾಣ ಇಂತಿದೆ.

| | |
|---|---|
| ಆಂಧ್ರ ಬ್ಯಾಂಕ್ | ೪% |
| ಸ್ಟೇಟ್ ಬ್ಯಾಂಕ್ ಆಫ್ ಟ್ರಾವಂಕೋರ್ | ೦% |
| ವಿಜಯಾ ಬ್ಯಾಂಕ್ | ೦.೪% |
| ಇಂಡಿಯನ್ ಒವರ್ ಸೀಸ್ ಬ್ಯಾಂಕ್ | ೩೪% |
| ಒರಿಯಂಟಲ್ ಬ್ಯಾಂಕ್ ಆಫ್ ಕಾಮರ್ಸ್ | ೪೯% |
| ಪಂಜಾಬ್ ನ್ಯಾಶನಲ್ ಬ್ಯಾಂಕ್ | ೪೫% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾರ್ಪೋರೇಟ್ ಕಛೇರಿ | ೪% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಬೆಂಗಳೂರು Local Head Office | ೩೬% |
| ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ದೆಹಲಿ Local Head Office | ೪೮% |
| ಬ್ಯಾಂಕ್ ಆಫ್ ಮಹಾರಾಷ್ಟ್ರ | ೪೧% |
| Small Industries Development Bank of India | ೧೦೦% |
| ದೇನಾ ಬ್ಯಾಂಕ್ | ೫೪% |
| ಕೆನರಾ ಬ್ಯಾಂಕ್ | ೧೫% |

| | |
|---|---|
| ಸ್ಟೇಟ್ ಬ್ಯಾಂಕ್ ಆಫ್ ಸೌರಾಷ್ಟ್ರ | ೨೭% |
| ಬ್ಯಾಂಕ್ ಆಫ್ ಬರೋಡಾ, ಕಾರ್ಪೋರೇಟ್ ಆಫೀಸ್ | ೪೦% |
| ಬ್ಯಾಂಕ್ ಆಫ್ ಬರೋಡಾ, ಹೆಡ್ ಆಫೀಸ್ | ೭೧% |
| ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | ೪% |
| UCO ಬ್ಯಾಂಕ್ | ೨೯% |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೫೯% |

೧೬.೧೪.೪ ನಮ್ಮ ದೇಶದಲ್ಲಿ ಬ್ಯಾಂಕುಗಳು ಆರ್ಥಿಕ ಮತ್ತು ಸಾಮಾಜಿಕ ಉದ್ದೇಶಗಳನ್ನು ಪೂರೈಸುತ್ತವೆ. ಅವು ದೇಶದ ಮೂಲೆ ಮೂಲೆಯನ್ನು ತಲುಪಬೇಕು. ತಮ್ಮ ಜಾಹೀರಾತಿನಲ್ಲಿ ಹಿಂದೀ ಬಳಸುವುದು ಅವುಗಳ ಆರ್ಥಿಕ ಹಿತಾಸಕ್ತಿಗೆ ಪೂರಕವಾಗಿಯೂ ಮತ್ತು ಸಾಮಾಜಿಕ ಜವಾಬ್ದಾರಿಯ ಭಾಗವೂ ಆಗುತ್ತದೆ.

೧೬.೧೫ ಜಾಹೀರಾತಿನ ಮೇಲೆ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳು ಮಾಡಿರುವ ವೆಚ್ಚ:

ಸಾರ್ವಜನಿಕ ಸ್ವಾಮ್ಯದ ಕಂಪನಿಗಳು ಮುದ್ರಣ ಮಾಧ್ಯಮದಲ್ಲಿ ನೀಡಿದ ಜಾಹೀರಾತುಗಳಲ್ಲಿ ಸುಮಾರು ೩೦.೯೦% ದಷ್ಟು ಮಾತ್ರ ಹಿಂದೀಯಲ್ಲಿದೆ. ಇಂಗ್ಲೀಶ್ ೫೨.೪೯% ಮತ್ತು ಇತರ ಭಾಷೆಗಳ ಪಾಲು ೧೬.೬% ಇದೆ.

ಸಾರ್ವಜನಿಕ ಸ್ವಾಮ್ಯದ ಕಂಪನಿಗಳು ಬ್ಯಾನರ್ಸ್ ಮತ್ತು ಭಿತ್ತಿ ಪತ್ರಗಳ ಮೂಲಕ ನೀಡಿದ ಜಾಹೀರಾತುಗಳಲ್ಲಿ ಸುಮಾರು ೩೩.೮೨% ದಷ್ಟು ಮಾತ್ರ ಹಿಂದೀಯಲ್ಲಿದ್ದರೆ, ಇಂಗ್ಲೀಶ್ ೪೬.೯೮% ಮತ್ತು ಇತರ ಭಾಷೆಗಳ ಪಾಲು ೧೯.೨೦% ಇದೆ.

ಸಾರ್ವಜನಿಕ ಸ್ವಾಮ್ಯದ ಕಂಪನಿಗಳು ದೃಶ್ಯ ಮಾಧ್ಯಮದಲ್ಲಿ ನೀಡಿದ ಜಾಹೀರಾತುಗಳಲ್ಲಿ ಸುಮಾರು ೫೪% ಮಾತ್ರ ಹಿಂದೀಯಲ್ಲಿ ಹಿಂದೀಯಲ್ಲಿದ್ದರೆ, ಇಂಗ್ಲೀಶ್ ೩೦% ಮತ್ತು ಇತರ ಭಾಷೆಗಳ ಪಾಲು ೧೬% ಇದೆ.

ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳಲ್ಲಿ ಪ್ರಮುಖವಾದದ್ದು: BHEL, BEL, GAIL, IBP, HP Petroleum, IOC, FCI, Coir Board, NTPC, BP, ITI

೧೬.೧೬ – ಜಾಹೀರಾತಿನ ಮೇಲೆ ಸರ್ವಿಸಸ್ ಕಂಪನಿಗಳು ಮಾಡಿರುವ ವೆಚ್ಚ: ಸರ್ವಿಸಸ್ ಕಂಪನಿಗಳು ಮುದ್ರಣ ಮಾಧ್ಯಮದಲ್ಲಿ ನೀಡಿದ ಜಾಹೀರಾತುಗಳಲ್ಲಿ ಸುಮಾರು ೨೭.೪% ರಷ್ಟು ಮಾತ್ರ ಹಿಂದೀಯಲ್ಲಿದೆ. ಇಂಗ್ಲೀಶ್ ೬೫.೪% ಮತ್ತು ಇತರ ಭಾಷೆಗಳ ಪಾಲು ೭.೨% ಇದೆ.

ಸರ್ವಿಸಸ್ ಕಂಪನಿಗಳು ಬ್ಯಾನರ್ಸ್ ಮತ್ತು ಭಿತ್ತಿ ಪತ್ರಗಳ ಮೂಲಕ ನೀಡಿದ ಜಾಹೀರಾತುಗಳಲ್ಲಿ ಸುಮಾರು ೩೮.೦೭% ರಷ್ಟು ಮಾತ್ರ ಹಿಂದೀಯಲ್ಲಿದ್ದರೆ, ಇಂಗ್ಲೀಶ್ ೬೦.೨೬% ಮತ್ತು ಇತರ ಭಾಷೆಗಳ ಪಾಲು ೧.೬೭% ಇದೆ.
ಸರ್ವಿಸಸ್ ಕಂಪನಿಗಳು ದೃಶ್ಯ ಮಾಧ್ಯಮದಲ್ಲಿ ನೀಡಿದ ಜಾಹೀರಾತುಗಳಲ್ಲಿ ಸುಮಾರು ೮೫.೨೬% ರಷ್ಟು ಹಿಂದೀಯಲ್ಲಿದೆ. ಇಂಗ್ಲೀಶ್ ೭.೯೫% ಮತ್ತು ಇತರ ಭಾಷೆಗಳ ಪಾಲು ೬.೭೯% ಇದೆ. ಸರ್ವಿಸಸ್ ಕಂಪನಿಗಳಲ್ಲಿ ಪ್ರಮುಖವಾದದ್ದು: ಇಂಡಿಯನ್ ಏರ್ ಲೈನ್ಸ್, ಏರ್ ಇಂಡಿಯಾ, BSNL, MTNL

೧೬.೧೭ – ಜಾಹೀರಾತಿನ ಮೇಲೆ ಸೆಂಟ್ರಲ್ ರೆವಿನ್ಯೂ ಸಂಸ್ಥೆಗಳು ಮಾಡಿರುವ ವೆಚ್ಚ:

ಮುದ್ರಣ ಮಾಧ್ಯಮ: ಹಿಂದೀ ೩೩.೬೮% – ಇಂಗ್ಲೀಶ್ – ೫೫.೬೨% – ಇತರ ಭಾಷೆಗಳು ೧೦.೭%

ದೃಶ್ಯ ಮಾಧ್ಯಮ: ಹಿಂದೀ ೮೭% – ಇಂಗ್ಲೀಶ್ – ೦% – ಇತರ ಭಾಷೆಗಳು ೧೩% (ಕಸ್ಟಮ್ಸ್ ಮತ್ತು ಸೆಂಟ್ರಲ್ ಎಕ್ಸೈಸ್ ಇಲಾಖೆಯಲ್ಲಿ ಮಾತ್ರ ವಿವರ ಪಡೆಯಲಾಗಿದೆ)

ಸೆಂಟ್ರಲ್ ರೆವಿನ್ಯೂ ಸಂಸ್ಥೆಗಳು: ಆದಾಯ ತೆರಿಗೆ ಕಮಿಷನರ್ ಕಛೇರಿ ಮತ್ತು ಕಸ್ಟಮ್ಸ್ ಮತ್ತು ಸೆಂಟ್ರಲ್ ಎಕ್ಸೈಸ್ ಇಲಾಖೆ.

ದೃಶ್ಯ ಮಾಧ್ಯಮದಲ್ಲಿ ಹಿಂದೀಯನ್ನು ಪರಿಣಾಮಕಾರಿಯಾಗಿ ಬಳಸಿರುವ ಕಸ್ಟಮ್ಸ್ ಮತ್ತು ಸೆಂಟ್ರಲ್ ಎಕ್ಸೈಸ್ ಇಲಾಖೆಯ ಪ್ರಯತ್ನಗಳು ಹೊಗಳಿಕೆಗೆ ಅರ್ಹವಾದದ್ದು.. ಇದರಿಂದ ಖಂಡಿತವಾಗಿಯೂ ಹೆಚ್ಚಿನ ತೆರಿಗೆ ಸಂಗ್ರಹಿಸುವಲ್ಲಿ ಸಹಾಯ ಮಾಡುತ್ತೆ.

ಸಮಿತಿಯ ಪ್ರಕಾರ ಹೆಚ್ಚೆಚ್ಚು ಜಾಹಿರಾತು ಹಿಂದೀಯಲ್ಲಿ ಕೊಡುವುದರಿಂದ ಹಲವಾರು ಉದ್ದೇಶಗಳು ಇಡೇರುತ್ತವೆ.

೧. ಹಿಂದೀ ಸಿನಿಮಾ ಮತ್ತು ಹಿಂದೀ ಹಾಡುಗಳು ಹಿಂದೀ ಭಾಷೆಯನ್ನು ಹಿಂದೀಯೇತರ ರಾಜ್ಯಗಳಲ್ಲಿ ಜನಪ್ರಿಯಗೊಳಿಸುವಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸಿವೆ. ದೂರದರ್ಶನ ಮತ್ತು ಇತರ ಖಾಸಗಿ ವಾಹಿನಿಗಳಲ್ಲಿ ಪ್ರಸಾರವಾಗುವ ಹಿಂದೀ ಧಾರಾವಾಹಿಗಳು ಹಿಂದೀಯನ್ನು ಜನಪ್ರಿಯಗೊಳಿಸುವಲ್ಲಿ ಸಹಾಯ ಮಾಡಿವೆ. ಜನರ ಆಸಕ್ತಿ ಕೆರಳಿಸುವ ಮತ್ತು ಕುತೂಹಲ ಹುಟ್ಟಿಸುವ ರೀತಿಯಲ್ಲಿ ಈ ಮಾಧ್ಯಮಗಳು ಜನರನ್ನು ಹಿಂದೀಯತ್ತ ಸೆಳೆಯುತ್ತಿವೆ. ಇದೆ ರೀತಿ ಜಾಹಿರಾತುಗಳಲ್ಲಿ ಹಿಂದೀ ಬಳಸುವುದು ಹಿಂದೀಯನ್ನು ಜನಪ್ರಿಯಗೊಳಿಸುವಲ್ಲಿ ಸಹಾಯ ಮಾಡುವುದಲ್ಲದೇ ಹಿಂದೀ ಬಳಕೆಯ ವೇಗ ಹೆಚ್ಚುವುದು.

೨. ಯಾವುದೇ ಭಾಷೆಯ ಅರಿವು ಜನರಿಗೆ ಕೆಲಸ ಗಿಟ್ಟಿಸುವಲ್ಲಿ ಸಹಾಯ ಮಾಡುತ್ತಿದ್ದು, ಜನರಿಗೆ ಅನ್ನ ಸಂಪಾದಿಸುವ ಸಾಮರ್ಥ್ಯ ಕೊಡುತ್ತಿದ್ದಲ್ಲಿ ಅಂತಹ ಭಾಷೆಯತ್ತ ಸಹಜವಾಗಿಯೇ ಜನರ ಒಲವು ಬೆಳೆಯುವುದು. ಹಿಂದೀಯನ್ನು ಮಾರುಕಟ್ಟೆಯ ನುಡಿಯಾಗಿಸುವಲ್ಲಿ ಹಿಂದೀ ಜಾಹಿರಾತುಗಳ ಪಾತ್ರ ಹಿರಿದಿದೆ. ಯಾವಾಗ ಹೆಚ್ಚಿನ ಎಲ್ಲಾ ಜಾಹಿರಾತುಗಳು ಹಿಂದೀಯಲ್ಲಿ ಬರಲಾರಂಭಿಸುವುದೋ, ಸಹಜವಾಗಿ ಹಿಂದೀ ಬಲ್ಲ ಜನರಿಗೆ ಮಾರ್ಕೆಟಿಂಗ್ ಕ್ಷೇತ್ರದಲ್ಲಿ ಹೆಚ್ಚಿನ ಕೆಲಸಗಳು ದೊರಕುತ್ತವೆ. ಜಾಹಿರಾತಿನಲ್ಲಿ ಹಿಂದೀ ಬಳಕೆಯನ್ನು ಉತ್ತೇಜಿಸಿದರೆ, ಸಮಾಜದ ಎಲ್ಲಾ ಸ್ಥರದ ಜನರಿಗೂ ಉದ್ಯೋಗದ ಲಾಭ ದೊರಕುವುದು.

೩. ಮುದ್ರಣ ಮಾಧ್ಯಮದಲ್ಲಿ ಹಿಂದೀ ಜಾಹಿರಾತುಗಳು ಹೆಚ್ಚಿದರೆ, ಹಿಂದೀ ಪತ್ರಿಕೆಗಳಿಗೆ ಬೆಂಬಲ ದೊರಕುವುದು. ಅದರ ಪರಿಣಾಮವಾಗಿ ಈ ಪತ್ರಿಕೆಗಳು

ಜನರಲ್ಲಿ ಹಿಂದೀ ಭಾಷೆ ಮತ್ತು ಹಿಂದೀ ಸಂಸ್ಕೃತಿ ಬಗ್ಗೆ ಆಸಕ್ತಿ ಹುಟ್ಟಿಸಬಲ್ಲವು. ಹಿಂದೀ ಸಾಹಿತ್ಯ ಮತ್ತು ಭಾಷೆಗೆ ಇದರಿಂದ ಉತ್ತೇಜನ ಸಿಗುವುದು ಮತ್ತು ಇದರಿಂದ ಹಿಂದೀಯನ್ನು ಆಧುನಿಕ ಮತ್ತು ಭವ್ಯ ಭಾಷೆಯಾಗಿ ಉಳಿಸಿಕೊಳ್ಳಬಹುದು.

೪. ವ್ಯವಹಾರಿಕ ದೃಷ್ಟಿಯಿಂದಲೂ ಹಿಂದೀ ಬಳಕೆ ಲಾಭದಾಯಕ. ಭಾರತದ ಗ್ರಾಹಕರನ್ನು ಪರಿಣಾಮಕಾರಿಯಾಗಿ ಮೆಚ್ಚಿಸಲು ಹಿಂದೀ ಅಥವಾ ಸ್ಥಳೀಯ ಭಾಷೆಯ ಬಳಕೆಯಿಂದ ಮಾತ್ರವೇ ಸಾಧ್ಯ. ಇಂಗ್ಲೀಶ್ ಜಾಹಿರಾತುಗಳು ಕೇವಲ ನಗರವಾಸಿಗಳು ಅಥವಾ ಮೇಲ್ ಮಧ್ಯಮ ವರ್ಗದ ಜನರನ್ನು ಮಾತ್ರವೇ ಓಲೈಸಲು ಸಾಧ್ಯ.

೧೬.೨೪ ಮುದ್ರಣ ಮಾಧ್ಯಮದ ಜಾಹೀರಾತಿನ ಖರ್ಚಿನಲ್ಲಿ ಹಿಂದೀಗಿಂತಲೂ ಇಂಗ್ಲೀಶ್ ಬಳಕೆಗೆ ಹೆಚ್ಚಿನ ವೆಚ್ಚವಾಗಿರುವುದರ ಕಾರಣ ತಿಳಿಯಲು ಸಮಿತಿ ಪ್ರಯತ್ನಿಸಿದಾಗ ತಿಳಿದು ಬಂದೀದ್ದು ಏನೆಂದರೆ ಇಂಗ್ಲೀಶ್ ಪತ್ರಿಕೆಗಳ ಜಾಹಿರಾತು ದರ ಹೆಚ್ಚು ಆದ್ದರಿಂದ ವೆಚ್ಚವು ಹೆಚ್ಚಿದೆ.

ಶಿಫಾರಸ್ಸುಗಳು :

೧. ಇಂಗ್ಲೀಶ್ ಪತ್ರಿಕೆಗಳಲ್ಲಿ ಹಿಂದೀ ಜಾಹಿರಾತನ್ನು ಕೊಡಬಹುದು. ಹಾಗೆಯೇ ಇಂಗ್ಲೀಶ್ ಜಾಹಿರಾತನ್ನು ಹಿಂದೀ ಪತ್ರಿಕೆಗಳಲ್ಲಿ ಕೊಡಬಹುದು. ಆದ್ದರಿಂದ ಎಲ್ಲಾ ಕೇಂದ್ರ ಕಛೇರಿಗಳು ಜಾಹಿರಾತನ್ನು ಹಿಂದೀ ಮತ್ತು ಇಂಗ್ಲೀಶ್ ಬಳಸಿ ದ್ವಿಭಾಷೆಯಲ್ಲಿ ಕೊಡಬೇಕು.

೨. ಜಾಹಿರಾತಿಗೆ ಖರ್ಚು ಮಾಡುವ ಒಟ್ಟು ವೆಚ್ಚದಲ್ಲಿ ಕನಿಷ್ಠ೫೦% ದಷ್ಟು ಹಿಂದೀಯಲ್ಲಿ ಕೊಡಬೇಕು. ಇನ್ನುಳಿದ ೫೦%ವನ್ನು ಇಂಗ್ಲೀಶ್ ಮತ್ತು ಇತರ ಪ್ರಾದೇಶಿಕ ಭಾಷೆಯಲ್ಲಿ ಕೊಡಬೇಕು.

## ೧೭. ಸಂಸತ್ ಸಮಿತಿಯ ವರದಿಯ ಸಾರಾಂಶ ಮತ್ತು ಕಡೆನುಡಿ

ಬೇರೆ ಬೇರೆ ಕೇಂದ್ರಸರ್ಕಾರಿ ಇಲಾಖೆಗಳ ವ್ಯವಹಾರಗಳಲ್ಲಿ ಆಡಳಿತ ಭಾಷೆಯಾಗಿ ಹಿಂದೀ ಬಳಕೆಯ ಪ್ರಮಾಣವನ್ನು ಪರಿಶೀಲಿಸಲು ಸಂಸತ್ ಸದಸ್ಯರ ನೇತೃತ್ವದಲ್ಲಿ ಸಮಿತಿಯೊಂದನ್ನು ರಚಿಸಲಾಗಿದೆ. ಈ ಸಮಿತಿ ದೇಶದೆಲ್ಲೆಡೆ ಹಿಂದೀ ಬಳಕೆಯನ್ನು ಹೆಚ್ಚಿಸುವ ಬಗ್ಗೆ ಹಲವು ಶಿಫಾರಸ್ಸುಗಳನ್ನುಳ್ಳ ವರದಿಯನ್ನು ರಾಷ್ಟ್ರಪತಿಗಳಿಗೆ ಸಲ್ಲಿಸುತ್ತದೆ. ಆ ವರದಿಯನ್ನು ಮುಂದೆ ಸಂಸತ್ತಿನಲ್ಲಿ ಮಂಡಿಸಲಾಗುತ್ತದೆ ಮತ್ತು ಅದು ಎಲ್ಲಾ ರಾಜ್ಯಸರ್ಕಾರಗಳಿಗೂ ರವಾನೆಯಾಗುತ್ತದೆ. ಆಡಳಿತ ಭಾಷಾ ಕಾಯ್ದೆಯ ಏಳು ಬೇರೆ ಬೇರೆ ಮಗ್ಗಲುಗಳ ಬಗ್ಗೆ ಅನೇಕ ಭಾಗಗಳಲ್ಲಿ ಈ ಸಮಿತಿ ನೀಡಿದ ವರದಿಯ ಅಂಶಗಳು ಇಂತಿವೆ:

೧. ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಈಗ ಇಂಗ್ಲಿಶಿನಲ್ಲಿರುವ ಹಲವು ಕಾಯ್ದೆಗಳ ಮಾಹಿತಿ, ಅರ್ಜಿ, ತರಬೇತಿ ವಿವರ... ಇತ್ಯಾದಿಯನ್ನು ಹಿಂದೀಗೆ ಭಾಷಾಂತರಿಸುವ ಬಗ್ಗೆ ಹಲವು ಶಿಫಾರಸ್ಸುಗಳನ್ನು ಮೊದಲ ಭಾಗದಲ್ಲಿ ಮಾಡಲಾಗಿದೆ.

೨. ಎರಡನೇ ಭಾಗದಲ್ಲಿ ಭಾಷಾಂತರಕ್ಕೆ ಬೇಕಾದ ಗಣಕಯಂತ್ರವೇ ಮೊದಲಾದ ಸಲಕರಣೆಗಳನ್ನು ಪಡೆದುಕೊಳ್ಳುವ ಬಗ್ಗೆ, ಅವುಗಳಲ್ಲಿ ದೇವನಾಗರಿ ಲಿಪಿಯು ಲಭ್ಯವಾಗುವಂತೆ ಮಾಡುವುದರ ಬಗ್ಗೆ ಮತ್ತು ಈ ನಿಟ್ಟಿನಲ್ಲಿ ಅಗತ್ಯ ತರಬೇತಿ ಕೊಡುವ ಬಗೆಗಿನ ಶಿಫಾರಸ್ಸುಗಳನ್ನು ಮಾಡಲಾಗಿದೆ.

೩. ಮೂರನೇ ಭಾಗದಲ್ಲಿ ಭಾರತದ ಒಳಗೂ, ಹೊರಗೂ ಇರುವ ಶಾಲೆ ಮತ್ತು ವಿಶ್ವವಿದ್ಯಾಲಯಗಳಲ್ಲಿ ಹಿಂದೀಯನ್ನು ಕಲಿಸಲು ಮತ್ತು ತ್ರಿಭಾಷಾ ಸೂತ್ರದನ್ವಯ ಹಿಂದೀಮಾಧ್ಯಮದಲ್ಲಿ ಇತರ ವಿಷಯಗಳನ್ನು ಕಲಿಯಲು ಇರುವ ವ್ಯವಸ್ಥೆ ಹಾಗೂ ಕೇಂದ್ರಸರ್ಕಾರಿ ಸಾಮ್ಯದ ಇತರ ಹಲವು ಸಂಸ್ಥೆಗಳಲ್ಲಿ ಹಿಂದೀ ಬಳಕೆ ಹೆಚ್ಚಿಸಲು ಕೈಗೊಂಡಿರುವ ಕ್ರಮಗಳನ್ನು ಪರಿಶೀಲಿಸಲಾಗಿದೆ. ಭಾರತದ ಬೇರೆ ಬೇರೆ ಭಾಗಗಳಲ್ಲಿ ಹಲವು ಸಚಿವಾಲಯಗಳ ಸಮೀಕ್ಷೆ ನಡೆಸಿದ ಸಮಿತಿ, ಕೇಂದ್ರಸರ್ಕಾರದ ಹುದ್ದೆಗಳ ನೇರ ನೇಮಕಾತಿ ಮತ್ತು ಇತರೆ ಇಲಾಖಾ ಪರೀಕ್ಷೆಗಳಲ್ಲಿ ಹಿಂದೀ ಅಥವಾ ಇಂಗ್ಲಿಶನ್ನು ಕಡ್ಡಾಯಗೊಳಿಸಲು ಮಾಡಿರುವ ವ್ಯವಸ್ಥೆಯನ್ನು ಪರಿಶೀಲಿಸಿದೆ. ಬೇರೆ ಬೇರೆ ಹುದ್ದೆಗಳ ಆಯ್ಕೆ ನಿಯಮಗಳು ಮತ್ತು ತರಬೇತಿಯ ಭಾಷೆಯಾಗಿ ಹಿಂದೀಯನ್ನು ಬಳಸುವ ಪ್ರಮಾಣದ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೪. ಈ ಸಮಿತಿಯು ದೇಶದ ವಿವಿಧ ಭಾಗಗಳಲ್ಲಿರುವ ಕೇಂದ್ರಸರ್ಕಾರಿ ಕಛೇರಿಗಳಲ್ಲಿ, ಸಚಿವಾಲಯಗಳಲ್ಲಿ, ಇಲಾಖೆಗಳಲ್ಲಿ, ಸರ್ಕಾರಿ ಅಧೀನ ಸಂಸ್ಥೆಗಳಲ್ಲಿ, ಸ್ವಾಯತ್ತ ಸಂಸ್ಥೆಗಳಲ್ಲಿ ಆಡಳಿತ ಭಾಷಾ ಕಾಯ್ದೆಯಲ್ಲಿ ನಿಗದಿ ಪಡಿಸಿದ ಪ್ರಮಾಣದಲ್ಲಿ ನಿಯಮಿತವಾಗಿ ಹಿಂದೀ ಬಳಕೆ ಹೆಚ್ಚಿಸಲಾಗುತ್ತಿದೆಯೇ ಎಂಬ ಬಗ್ಗೆ ಪರಿಶೀಲನೆ ನಡೆಸಿದೆ.

೫. ನ್ಯಾಯಾಲಯಗಳು, ನ್ಯಾಯಾಧಿಕರಣಗಳು ಮತ್ತು ಶಾಸನಗಳಲ್ಲಿ ಹಿಂದೀ ಬಳಕೆಯ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೬. ರಾಜ್ಯ ಮತ್ತು ಕೇಂದ್ರಸರ್ಕಾರಗಳ ನಡುವಿನ ಎಲ್ಲಾ ವಹಿವಾಟಿನಲ್ಲಿ ಎಷ್ಟರ ಮಟ್ಟಿಗೆ ಹಿಂದೀ ಬಳಕೆಯಾಗುತ್ತಿದೆ ಎಂಬ ಬಗ್ಗೆ ಸಮಿತಿ ಪರಿಶೀಲನೆ ನಡೆಸಿದೆ.

೭. ಏಳನೇ ಭಾಗದಲ್ಲಿ, ಜಾಗತೀಕರಣದ ಈ ದಿನಗಳಲ್ಲಿ ಹಿಂದೀಯ ಸ್ಥಿತಿ, ಗಣಕಯಂತ್ರಗಳಲ್ಲಿ ಹಿಂದೀ ಬಳಕೆಗಿರುವ ಸವಾಲು, ಹಿಂದೀಯ ಪ್ರಚಾರ, ಪ್ರಸಾರದ ಬೇರೆ ಬೇರೆ ವಿಧಾನಗಳ ಬಗ್ಗೆ ಸಮಿತಿ ಪರಿಶೀಲನೆ ನಡೆಸಿ ಶಿಫಾರಸ್ಸುಗಳನ್ನು ನೀಡಿದೆ.

ಪರಿಶೀಲನೆಯ ಸಂದರ್ಭದಲ್ಲಿ ಈ ಕೆಳಗಿನ ವಿಷಯಗಳನ್ನು ಸಮಿತಿ ಗಣನೆಗೆ ತೆಗೆದುಕೊಂಡಿದೆ.

- ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಖರೀದಿಸಲಾಗುವ ಪುಸ್ತಕಗಳು.
- ಗಣಕೀಕರಣ ಮತ್ತು ಹಿಂದೀ
- ಉದ್ಯೋಗ ನೇಮಕಾತಿ ನಿಯಮಗಳಲ್ಲಿ ಹಿಂದೀ ಭಾಷೆಯ ಅರಿವನ್ನು ಕಡ್ಡಾಯಗೊಳಿಸುವ ವ್ಯವಸ್ಥೆ
- ಕೇಂದ್ರಸರ್ಕಾರಿ ಕಛೇರಿಗಳಲ್ಲಿ ಹಿಂದೀ ಹುದ್ದೆಗಳ ಸ್ಥಿತಿಗತಿ
- ಶೈಕ್ಷಣಿಕ ಮತ್ತು ತರಬೇತಿ ಸಂಸ್ಥೆಗಳಲ್ಲಿ ಹಿಂದೀ ಮಾಧ್ಯಮದ ಲಭ್ಯತೆ

- ಸಾರ್ವಜನಿಕ ಸಾಮ್ಯದ ಸಂಸ್ಥೆಗಳಲ್ಲಿ ವ್ಯವಹಾರಿಕ ಸಂದರ್ಭಗಳಲ್ಲಿ ಹಿಂದೀ ಬಳಕೆ

**ಮಾಡಲಾದ ಶಿಫಾರಸ್ಸುಗಳು:**

೧. ಕೇಂದ್ರಸರ್ಕಾರಿ ಇಲಾಖೆಗಳಾದ ಗೃಹಖಾತೆ, ರಕ್ಷಣಾ ಇಲಾಖೆ, ಕಲ್ಲಿದ್ದಲು ಮತ್ತು ಗಣಿ, ರಾಸಾಯನಿಕ ಮತ್ತು ಗೊಬ್ಬರ, ಗ್ರಾಮೀಣ ಅಭಿವೃದ್ಧಿ, ವಿದ್ಯುತ್ ಮತ್ತು ಉಕ್ಕು ಸಚಿವಾಲಯಗಳ ಇಲಾಖೆಗಳಲ್ಲಿ ನೂರಕ್ಕೆ ಇಪ್ಪತ್ತೈದಕ್ಕೂ ಹೆಚ್ಚು ಜನಕ್ಕೆ ಹಿಂದೀ ಬರುತ್ತಿಲ್ಲ ಎನ್ನುವುದು ಗಂಭೀರವಾದ ಆತಂಕದ ವಿಷಯ. ಒಂದು ವರ್ಷದೊಳಗೆ ಇವರಿಗೆಲ್ಲಾ ಗನಕಯಂತ್ರ ಅಥವಾ ದೂರಶಿಕ್ಷಣದ ವ್ಯವಸ್ಥೆಯ ಮೂಲಕವಾದರೂ ಸರಿಯೇ ಹಿಂದೀ ತರಬೇತಿ ನೀಡಬೇಕು. ಹಿಂದೀ ಪತ್ರಕ್ಕೆ ಹಿಂದೀಯಲ್ಲೇ ಉತ್ತರಿಸಬೇಕೆನ್ನುವ ನಿಯಮ ಪಾಲಿಸಿರದ ಬಗ್ಗೆ ಕಾರ್ಯದರ್ಶಿಗಳ ಹಂತದಲ್ಲಿ ಸೂಕ್ತಕ್ರಮ ಕೈಗೊಳ್ಳಬೇಕು.

೨. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ರಕ್ಷಣಾ ಇಲಾಖೆ, ಹಡಗು ಇಲಾಖೆ, ಕೃಷಿ ಇಲಾಖೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಡತಗಳು ಇಂಗ್ಲಿಷಿನಲ್ಲಿದ್ದು, ಒಂದು ವಿಶೇಷ ಸಮಿತಿಯನ್ನು ರಚಿಸಿ ಒಂದು ವರ್ಷದ ಅವಧಿಯೊಳಗೆ ಈ ಎಲ್ಲಾ ಮಾಹಿತಿಯನ್ನು ಹಿಂದೀಯಲ್ಲಿ ಸಿಗುವಂತೆ ಮಾಡಬೇಕು. ಅಣುಶಕ್ತಿ, ರಾಸಾಯನಿಕ ಮತ್ತು ಗೊಬ್ಬರ, ವಿದ್ಯುತ್, ವಾಣಿಜ್ಯ ಮತ್ತು ಉದ್ಯಮ ಇಲಾಖೆ, ಗೃಹಖಾತೆ, ಯೋಜನಾ ಖಾತೆ ಮತ್ತು ಮಾನವ ಸಂಪನ್ಮೂಲ ಇಲಾಖೆ, ನಾಗರೀಕ ವಿಮಾನ ಯಾನ ಮತ್ತು ಪೆಟ್ರೋಲಿಯಂ ಖಾತೆಯ ಕಡತ ಮತ್ತು ಕೈಪಿಡಿಗಳನ್ನು ೬ರಿಂದ ೯ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು. ನಗರಾಭಿವೃದ್ಧಿ, ಕಲ್ಲಿದ್ದಲು ಮತ್ತು ಗಣಿ, ಜಲ ಸಂಪನ್ಮೂಲ, ಯುವಜನ ಸೇವೆ ಮತ್ತು ಕ್ರೀಡೆ, ರೈಲ್ವೆ ಇಲಾಖೆ, ಸಮಾಜ ಕಲ್ಯಾಣ, ವಿಜ್ಞಾನ ಮತ್ತು ತಂತ್ರಜ್ಞಾನ, ಕಾರ್ಮಿಕ ಮತ್ತು ಹಣಕಾಸು ಖಾತೆಯ ಎಲ್ಲಾ ಕಡತ ಮತ್ತು ಕೈಪಿಡಿಗಳನ್ನು ೬ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು. ವಿದೇಶಾಂಗ ವ್ಯವಹಾರ, ಕಾನೂನು, ಪರಿಸರ,

ಐಟಿ, ಗ್ರಾಹಕ ವ್ಯವಹಾರ, ಆಹಾರ ಮತ್ತು ನಾಗರೀಕ ಸರಬರಾಜು, ಗ್ರಾಮೀಣ ಅಭಿವೃದ್ಧಿ ಇಲಾಖೆಗಳ ಕಡತ ಮತ್ತು ಕೈಪಿಡಿಗಳನ್ನು ೩ ತಿಂಗಳೊಳಗೆ ಹಿಂದೀಗೆ ಭಾಷಾಂತರಿಸಬೇಕು.

೩. ಮಾನವ ಸಂಪನ್ಮೂಲ ಇಲಾಖೆ, ಸಂಸ್ಕೃತಿ ಇಲಾಖೆ, ಜಲ ಸಂಪನ್ಮೂಲ ಇಲಾಖೆ ಮತ್ತು ಗ್ರಾಹಕ ವಹಿವಾಟು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಗಳು ಇತರೇ ಭಾಷೆಗಳಲ್ಲಿ ಹೊರತಂದಿರುವ ಪ್ರಕಾಶನಗಳ ಸಂಖ್ಯೆಯು ಹಿಂದೀ ಭಾಷೆಯ ಪುಸ್ತಕಗಳ ಸಂಖ್ಯೆಗಿಂತಾ ಹೆಚ್ಚಿದೆ. ೧೯೬೨ರ ಸರ್ಕಾರಿ ಆದೇಶದ ಪ್ರಕಾರ ಹಿಂದೀ ಭಾಷೆಯ ಪ್ರಕಾಶನಗಳಿಗಿಂತ ಇನ್ನುಳಿದ ಯಾವ ಭಾಷೆಯ ಪ್ರಕಾಶನವೂ ಹೆಚ್ಚಿರಬಾರದು.

೪. ‘ಸಿ’ ವಲಯದಲ್ಲಿನ (ಕರ್ನಾಟಕ ಇದರಲ್ಲಿ ಬರುತ್ತೆ) ಕೇಂದ್ರಕಛೇರಿಗಳಲ್ಲಿ ಕಡಿಮೆಯೆಂದರೆ ಇಂತಿಷ್ಟು ಪ್ರತಿಶತ ದಾಖಲೆಗಳನ್ನು ಹಿಂದೀಯಲ್ಲೇ ಮಾಡಬೇಕೆನ್ನುವ ನಿಯಮವನ್ನು ರೂಪಿಸಬೇಕು ಮತ್ತು ಈ ಭಾಗದ ಕಛೇರಿಗಳಲ್ಲಿ "ಸಾಧ್ಯವಾದಷ್ಟು (as far as possible)" ಹಿಂದೀಯಲ್ಲಿ ದಾಖಲೆಗಳನ್ನು ಮಾಡಬೇಕು ಅನ್ನುವ ನಿಯಮವನ್ನು ತೆಗೆದುಹಾಕಬೇಕು.

೫. ಯಾವ ಯಾವ ರಾಜ್ಯದಲ್ಲಿ ಹಿಂದೀ ಆಡಳಿತ ಭಾಷೆಯಾಗಿಲ್ಲವೋ, ಅಂತಹ ರಾಜ್ಯಸರ್ಕಾರವನ್ನು ಗೃಹ ಇಲಾಖೆಯು ಮಾತನ್ನಾಡಿಸಿ ಆಯಾ ರಾಜ್ಯದ ಆಡಳಿತ ಭಾಷೆಯ ಜೊತೆಗೆ ಹಿಂದೀಗೂ ಆಡಳಿತ ಭಾಷೆಯ ಮನ್ನಣೆ ಕೊಡಿಸಲು ಮುಂದಾಗಬೇಕು.

೬. ವಲಯ ‘ಸಿ’ ಯಲ್ಲಿ ಬರುವ ಎಲ್ಲಾ ಕಛೇರಿಗಳಲ್ಲಿ ಆಯಾರಾಜ್ಯದ ಭಾಷೆಗಳನ್ನು ಬಳಸಿ ಹಿಂದೀಯನ್ನು ಕಲಿಸುವ ಗಣಕಯಂತ್ರ ಆಧಾರಿತ ಕಲಿಕಾ ವ್ಯವಸ್ಥೆಗೆ ವ್ಯಾಪಕ ಪ್ರಚಾರ ಕೊಡಬೇಕು.

೭. ಹಿಂದೀ ಬಳಕೆಯನ್ನು ಹೆಚ್ಚಿಸಲು ಇರುವ ನಗರ ಆಡಳಿತ ಭಾಷಾ ಅನುಷ್ಠಾನ ಸಮಿತಿ(ಟೋಲಿಕ್)ಗಳ ಸಭೆ ನಡೆಸಲು ಆಗುವ ವೆಚ್ಚದ ಪ್ರಮಾಣ ಹೆಚ್ಚಿರುವುದರಿಂದ, ಪ್ರತಿಸಭೆಗೆ ನಿಗದಿಪಡಿಸಿದ ಮೊತ್ತವನ್ನು ೩,೦೦೦ ರೂಪಾಯಿಗಳಿಂದ ೧೦,೦೦೦ರೂಪಾಯಿಗೆ ಏರಿಸಬೇಕು.

೮. ತಮಿಳುನಾಡು, ಕೇರಳ, ಕರ್ನಾಟಕದಂತಹ ಹಿಂದೀಯೇತರ ರಾಜ್ಯಗಳಲ್ಲಿ ಹಿಂದೀ ಪತ್ರಿಕೆ, ಹಿಂದೀ ಸಾಪ್ತಾಹಿಕಗಳನ್ನು ಹೊರತರಲು ಮತ್ತು ಅವುಗಳಲ್ಲಿ ಕೆಲಸ ಮಾಡುವ ಪತ್ರಕರ್ತರನ್ನು ಉತ್ತೇಜಿಸಲು ಕೆಲವು ವಿಶೇಷ ಯೋಜನೆಗಳನ್ನು ಕೈಗೆತ್ತಿಕೊಳ್ಳಬೇಕು.

೯. 'ಸಿ' ವಲಯದಲ್ಲಿ (ಕರ್ನಾಟಕ ಇದರಲ್ಲಿ ಬರುತ್ತೆ) ಬರುವ ಎಲ್ಲಾ ಕಛೇರಿಗಳಲ್ಲಿ ಕೊನೆಪಕ್ಷ ಒಬ್ಬರಾದರೂ ಹಿಂದೀ ಬಲ್ಲ ಉದ್ಯೋಗಿಯನ್ನು ನೇಮಿಸಿಕೊಳ್ಳಬೇಕು.

೧೦. 'ಎ', 'ಬಿ' ಮತ್ತು 'ಸಿ' ವಲಯಗಳಲ್ಲಿ ಬರುವ ಎಲ್ಲಾ ಇಲಾಖೆಯ ಕಛೇರಿಗಳು ಮತ್ತು ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳಲ್ಲಿ ಕ್ರಮವಾಗಿ ೫೦%, ೩೦% ಮತ್ತು ೨೦% ಕೆಲಸವನ್ನು ಹಿಂದೀಯಲ್ಲಿ ಕಡ್ಡಾಯವಾಗಿ ಮಾಡುವಂತೆ ಶಿಫಾರಸ್ಸು ಮಾಡಲಾಗಿದೆ.

೧೧. ಸ್ವಾತಂತ್ರ್ಯ ಹೋರಾಟಗಾರರ, ದೇಶಭಕ್ತರ ಆತ್ಮಕತೆ, ಜೀವನ ಚರಿತ್ರೆಯುಳ್ಳ ಸರಳ ಹಿಂದೀ ಪುಸ್ತಕಗಳನ್ನು ಖರೀದಿಸಿ ಕೇಂದ್ರಸರ್ಕಾರಿ ಉದ್ಯೋಗಿಗಳಿಗೆ ಓದಲು ಉತ್ತೇಜಿಸಬೇಕು.

೧೨. ಹಿಂದೀ ಬಳಕೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿ ನಡೆಸಲು ಕೇಂದ್ರೀಯ ಆಡಳಿತ ಭಾಷಾ ಅನುಷ್ಠಾನ ಸಮಿತಿ(ಕೋಲಿಕ್)ಯ ಸಭೆಯ ಅಧ್ಯಕ್ಷತೆಯನ್ನು ಕ್ಯಾಬಿನೇಟ್ ಸೆಕ್ರಟರಿ ಮತ್ತು ಎಲ್ಲಾ ಇಲಾಖೆಗಳ ಕಾರ್ಯದರ್ಶಿಗಳ ನೇತೃತ್ವದಲ್ಲಿ ನಡೆಸಬೇಕು.

೧೩. ಹಿಂದೀಯಲ್ಲಿ ವೈಜ್ಞಾನಿಕ, ತಾಂತ್ರಿಕ ಮತ್ತು ಸಂಶೋಧನಾ ಸಾಹಿತ್ಯವೆಲ್ಲಗಳೆಲ್ಲವನ್ನು ಒಂದೆಡೆ ದೊರಕುವಂತೆ ಮಾಡಲು ಪುಸ್ತಕ

ಬ್ಯಾಂಕ್‌ಗಳ ಸ್ಥಾಪನೆಯನ್ನು ತಕ್ಷಣವೇ ಸರ್ಕಾರ ಮಾಡಬೇಕು ಮತ್ತು ಅಂತಹ ಸಾಹಿತ್ಯಕ್ಕೆ ವ್ಯಾಪಕ ಪ್ರಚಾರ ಕೊಟ್ಟು ಸಾಮಾನ್ಯ ಜನರು ಬಳಸುವಂತೆ ಮಾಡಬೇಕು.

೧೪. ಅನುವಾದ ಕೇಂದ್ರ (ಟ್ರಾನ್ಸಲೇಶನ್ ಬ್ಯುರೋ)ವೊಂದನ್ನು ಸ್ಥಾಪಿಸಿ ವೈಜ್ಞಾನಿಕ ಮತ್ತು ತಾಂತ್ರಿಕ ಪದಗಳನ್ನು ಇಂಗ್ಲೀಶಿನಿಂದ ಹಿಂದೀಗೆ ಭಾಷಾಂತರಿಸಲು ಹಿಂದೀ ಬಲ್ಲ ಯೋಗ್ಯರನ್ನು ನೇಮಿಸಿಕೊಳ್ಳಬೇಕು.

೧೫. ವಲಯ 'ಎ' ಮತ್ತು 'ಬಿ' (ಮಹಾರಾಷ್ಟ್ರ, ಗುಜರಾತ್‌ನಂತಹ ರಾಜ್ಯಗಳು ಇಲ್ಲಿ ಬರುತ್ತೆ)ಯಲ್ಲಿರುವ ವಿಶ್ವವಿದ್ಯಾಲಯಗಳಲ್ಲಿ ಇಂಜಿನಿಯರಿಂಗ್, ಕಂಪ್ಯೂಟರ್ಸ್, ತಂತ್ರಜ್ಞಾನ, ಸಂಶೋಧನೆಯಂತಹ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಸಬಹುದು.

೧೬. ರಿಸರ್ವ್‌ಬ್ಯಾಂಕ್ ಮತ್ತು ಹಣಕಾಸು ಇಲಾಖೆ ಎಲ್ಲಾ ಸಾರ್ವಜನಿಕ ಬ್ಯಾಂಕುಗಳಲ್ಲಿ ಬಳಸಲು ಹಿಂದೀ/ ಇಂಗ್ಲೀಶ್‌ಗಳನ್ನು ಬೆಂಬಲಿಸುವ ತಂತ್ರಾಂಶ ಅಭಿವೃದ್ಧಿಗೆ ಮುಂದಾಗಬೇಕು.

೧೭. ಬ್ಯಾಂಕುಗಳು ಕೊಡಮಾಡುವ ಎಟಿಎಮ್ ಮತ್ತು ಕ್ರೆಡಿಟ್ ಕಾರ್ಡ್ ಮುಂತಾದ ಸೇವೆಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಕೊಡಬೇಕು.

೧೮. ಸರ್ಕಾರಿ ಸ್ವಾಮ್ಯದ ವಿಮಾಸಂಸ್ಥೆಗಳು ಕೊಡುವ ಎಲ್ಲಾ ಪಾಲಿಸಿಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಕೊಡುವಂತೆ ಹಣಕಾಸು ಇಲಾಖೆ ಕ್ರಮ ಕೈಗೊಳ್ಳಬೇಕು.

೧೯. ರೈಲ್ವೇ ಮತ್ತು ವಿಮಾನಯಾನ ಇಲಾಖೆಗಳು ತನ್ನೆಲ್ಲ ನಿಲ್ದಾಣಗಳಲ್ಲಿ ಡಿಜಿಟಲ್ ಮಾಹಿತಿ ಬೋರ್ಡ್‌ಗಳಲ್ಲಿ ಮಾಹಿತಿಯನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಲಭ್ಯವಾಗಿಸಬೇಕು.

೨೦. ಎಲ್ಲಾ ಕೇಂದ್ರಸರ್ಕಾರಿ ಇಲಾಖೆಗಳು ತಮ್ಮ ಅಂತರ್ಜಾಲ ತಾಣಗಳನ್ನು ಹಿಂದೀ/ ಇಂಗ್ಲೀಶ್‌ಗಳಲ್ಲಿ ಸಿಗುವಂತೆ ಮಾಡಬೇಕು.

೨೧. ಕೇಂದ್ರಸರ್ಕಾರಿ ಕೆಲಸಗಳಿಗಾಗಿ ನಡೆಯುವ ಎಲ್ಲಾ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಮೆಟ್ರಿಕ್ ಮಟ್ಟದ ಹಿಂದೀ ಪರೀಕ್ಷೆಯೊಂದನ್ನು ಕಡ್ಡಾಯ ಮಾಡಬೇಕು. ಈ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಅಭ್ಯರ್ಥಿಗಳನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಬೇಕು.

೨೨. 'ಎ' ವಲಯದಿಂದ 'ಸಿ' ವಲಯಕ್ಕೆ ವರ್ಗವಾಗಿ ಬಂದು ಕೆಲಸ ಮಾಡುವ ಹಿಂದೀ ಉದ್ಯೋಗಿಗಳಿಗೆ ವಿಶೇಷ ಭತ್ಯ ನೀಡಬೇಕು. 'ಎ' ವಲಯದಿಂದ ಬಂದು ಕೆಲಸ ಮಾಡುವ ಉದ್ಯೋಗಿಗಳು ಯಾವುದೇ ಹಿಂಜರಿಕೆ ಇಲ್ಲದೇ 'ಸಿ' ವಲಯಕ್ಕೆ ಬರುವಂತಾಗುವ ಸಲುವಾಗಿ ಇಂತಹ ವರ್ಗಾವಣೆಯನ್ನು ಅಲ್ಪಾವಧಿಗೆ ಸೀಮಿತಗೊಳಿಸಬೇಕು.

೨೩. ಎಲ್ಲಾ ಕೇಂದ್ರೀಯ ವಿದ್ಯಾಲಯ, ನವೋದಯ ವಿದ್ಯಾಲಯ ಮತ್ತು 'ಎ' ಮತ್ತು 'ಬಿ' ವಲಯಗಳಲ್ಲಿರುವ ಎಲ್ಲಾ ಸರ್ಕಾರಿ ಶಾಲೆಗಳಲ್ಲಿ ತಕ್ಷಣದಿಂದಲೇ ಹತ್ತನೇ ತರಗತಿಯವರೆಗಿನ ಎಲ್ಲಾ ವಿಷಯಗಳನ್ನು ಹಿಂದೀ ಮಾಧ್ಯಮದಲ್ಲಿ ಕಲಿಸಲು ಮುಂದಾಗಬೇಕು. ಸ್ಥಳೀಯ ಭಾಷೆ ಮತ್ತು ಇಂಗ್ಲೀಶ್‌ಗಳನ್ನು ಒಂದು ವಿಷಯವಾಗಿ ಕಲಿಸಬಹುದು. ಕೆಲಕಾಲದ ನಂತರ ಇದನ್ನು 'ಸಿ' ವಲಯದಲ್ಲಿರುವ ಶಾಲೆಗಳಿಗೂ ವಿಸ್ತರಿಸಬೇಕು.

೨೪. ಎಲ್ಲಾ ಕೇಂದ್ರೀಯ ವಿಶ್ವವಿದ್ಯಾಲಯಗಳಲ್ಲಿ ಹಿಂದೀ ಕಲಿಕೆಯ ಪೀಠವನ್ನು ಕಡ್ಡಾಯವಾಗಿ ಆರಂಭಿಸಬೇಕು.

೨೫. ರಾಷ್ಟ್ರೀಯ ಶಿಕ್ಷಣ ಯೋಜನೆಗಳಾದ "ಸರ್ವ ಶಿಕ್ಷಾ ಅಭಿಯಾನ"ದಲ್ಲಿ ಕಲಿಕೆಯನ್ನು ಕಡ್ಡಾಯವಾಗಿ ಹಿಂದೀ ಮಾಧ್ಯಮದಲ್ಲಿ ಮಾತ್ರ ಮಾಡಬೇಕು.

೨೬. ವಿಶ್ವವಿದ್ಯಾಲಯ, ತಾಂತ್ರಿಕ, ವೃತ್ತಿಪರ ಮತ್ತು ಸಂಶೋಧನಾ ಸಂಸ್ಥೆಗಳ ಪ್ರವೇಶ ಪರೀಕ್ಷೆಯಲ್ಲಿ ಹಿಂದೀ ಮಾಧ್ಯಮದ ಆಯ್ಕೆಯನ್ನು ಕಡ್ಡಾಯವಾಗಿ ಕೊಡಮಾಡಬೇಕು.

೨೭. ಅತಿ ಹೆಚ್ಚು ಪ್ರಸಾರ ವ್ಯಾಪ್ತಿ ಇರುವ ಟಿವಿ, ರೇಡಿಯೋ ಮುಂತಾದ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಮಾಡಲಾಗುವ ಶೈಕ್ಷಣಿಕ ಪ್ರಸಾರಗಳು ಕೇವಲ ಹಿಂದೀ ಭಾಷೆಯಲ್ಲಿರಬೇಕು.

೨೮. ಹಿಂದೀ ಪತ್ರಿಕೆಗಳಲ್ಲಿ ಇಂಗ್ಲೀಶಿನಲ್ಲಿ ಮತ್ತು ಇಂಗ್ಲಿಶ್ ಪತ್ರಿಕೆಗಳಲ್ಲಿ ಹಿಂದೀಯಲ್ಲಿ ಜಾಹೀರಾತು ನೀಡಬಹುದು. ಆದರೆ ಕೊನೇಪಕ್ಷ ೫೦% ಜಾಹೀರಾತು ಕೇವಲ ಹಿಂದೀಯಲ್ಲಿರಬೇಕು, ಇನ್ನುಳಿದ ೫೦% ಇಂಗ್ಲೀಶ್ ಮತ್ತಿತರ ಪ್ರಾದೇಶಿಕ ಭಾಷೆಯಲ್ಲಿರಬಹುದು.

೨೯. ಹಿಂದೀ ಹುದ್ದೆಗಳನ್ನು ಸೃಷ್ಟಿಸಲು ಇರುವ ಕಟ್ಟುಪಾಡುಗಳನ್ನು ಸರಳಗೊಳಿಸಬೇಕು, ವಿಶೇಷವಾಗಿ 'ಸಿ' ವಲಯದಲ್ಲಿ ಬರುವ ಕಛೇರಿಗಳಲ್ಲಿ ಇದನ್ನು ಆದಷ್ಟು ಸರಳಗೊಳಿಸಬೇಕು.

೩೦. ಎ, ಬಿ, ಸಿ ಮತ್ತು ಡಿ ದರ್ಜೆಯ ಹುದ್ದೆಗಳಿಗೆ ನಡೆಯುವ ನೇರ ನೇಮಕಾತಿಯಲ್ಲಿ ಇಂತಿಷ್ಟು ಪ್ರಮಾಣದ ಹಿಂದೀ ಜ್ಞಾನ ಕಡ್ಡಾಯವೆಂದು ನಿಗದಿಪಡಿಸಬೇಕು. ಇದರಿಂದ ತರಬೇತಿ ಕೊಡಲು ಉಂಟಾಗುವ ತೊಂದರೆಗಳನ್ನು ನಿವಾರಿಸಬಹುದು. ಎ, ಬಿ, ಸಿ ದರ್ಜೆಯ ಹುದ್ದೆಗಳಿಗೆ ಕೊನೇಪಕ್ಷ ಮೆಟ್ರಿಕ್ ಹಂತದ ಹಿಂದೀ ಜ್ಞಾನವನ್ನೂ, 'ಡಿ' ದರ್ಜೆಯ ಹುದ್ದೆಗಳಿಗೆ ಕೊನೇಪಕ್ಷ ಎಂಟನೇ ತರಗತಿಯ ಮಟ್ಟದ ಹಿಂದೀ ಜ್ಞಾನವನ್ನು ನಿಗದಿಪಡಿಸಬಹುದು.

## ೨೦೧೧ ~ ೨೦೧೨ರಲ್ಲಿ ಹಿಂದೀ ಹೇರಿಕೆಗೆ ಇರುವ ಗುರಿಗಳು

ಹಿಂದೀ ಭಾಷೆಯನ್ನು ದೇಶದ ಎಲ್ಲೆಡೆ ಹರಡಲು ಪ್ರತಿವರ್ಷ ಆಡಳಿತ ಭಾಷಾ ಇಲಾಖೆಯು ಕೋಟ್ಯಾಂತರ ರೂಪಾಯಿಗಳ ಯೋಜನೆಗಳನ್ನು ಹಾಕಿಕೊಂಡು ಕೆಲಸ ಮಾಡುತ್ತದೆ. ಈ ಇಲಾಖೆಯು ೨೦೧೧~೨೦೧೨ನೇ ಸಾಲಿನಲ್ಲಿ ಕೇಂದ್ರದ

೪೩ ಸಚಿವಾಲಯಗಳೂ ಸೇರಿದಂತೆ ಎಲ್ಲಾ ಕೇಂದ್ರಸರ್ಕಾರಿ ಇಲಾಖೆ, ಕಛೇರಿ, ಸಂಸ್ಥೆಗಳಿಗೆ ನಿಗದಿಪಡಿಸಿರುವ ಗುರಿಯನ್ನು ಈ ಕೆಳಗಿನ ಪಟ್ಟಿಯಲ್ಲಿ ನೋಡಿ.

ಇದೂ ಕೂಡಾ www.rajbhasha.nic ಅಂತರ್ಜಾಲ ತಾಣದಲ್ಲಿನ ಮಾಹಿತಿಯೇ.

| ಕ್ರ. ಸಂ. | ಕೆಲಸದ ವಿವರ | ವಲಯ | | |
|---|---|---|---|---|
| | | ಎ | ಬಿ | ಸಿ |
| ೧ | ಹಿಂದೀಯಲ್ಲಿ ಮೂಲ ಸಂವಹನ – (ಟೆಲೆಕ್ಸ್, ಫ್ಯಾಕ್ಸ್, ಮಿಂಚೆ... ಒಳಗೊಂಡಂತೆ) | ಎ ವಲಯಕ್ಕೆ – ೭೫% ~ ೧೦೦% | ಎ ವಲಯಕ್ಕೆ – ೭೫% ~ ೯೦% | ಎ ವಲಯಕ್ಕೆ – ೫೫% |
| | | ಬಿ ವಲಯಕ್ಕೆ – ೬೫% ~ ೧೦೦% | ಬಿ ವಲಯಕ್ಕೆ – ೬೫% ~ ೯೦% | ಬಿ ವಲಯಕ್ಕೆ – ೬೫% |
| | | ಸಿ ವಲಯಕ್ಕೆ – ೫೦% ~ ೬೫% | ಸಿ ವಲಯಕ್ಕೆ – ೪೫% ~ ೫೫% | ಸಿ ವಲಯಕ್ಕೆ – ೫೫% |
| | ಇಲಾಖೆಗಳು/ ಎ ಮತ್ತು ಬಿ ವಲಯದ ರಾಜ್ಯಗಳು. ಕೇಂದ್ರಾಡಳಿತ ಪ್ರದೇಶದ ವ್ಯಕ್ತಿಗಳ ಜೊತೆ ಸಂವಹನ | ಎ ವಲಯಕ್ಕೆ – ೭೫% ~ ೧೦೦% | ಎ ವಲಯಕ್ಕೆ – ೭೫% ~ ೯೦% | ೫೫% |
| | | ಬಿ ವಲಯಕ್ಕೆ – ೬೫% ~ ೧೦೦% | ಬಿ ವಲಯಕ್ಕೆ – ೬೫% ~ ೯೦% | -- |
| ೨ | ಹಿಂದೀಯಲ್ಲಿ ಬಂದ ಪತ್ರಕ್ಕೆ ಹಿಂದೀಯಲ್ಲೇ | ೧೦೦% | ೧೦೦% | ೧೦೦% |

| | | | | |
|---|---|---|---|---|
| | ಉತ್ತರಿಸುವುದು | | | |
| ೩ | ಹಿಂದೀಯಲ್ಲಿ ಟಿಪ್ಪಣಿ ಮಾಡಿಕೊಳ್ಳುವುದು | ೫೫% ~ ೭೫% | ೪೦% ~ ೫೦% | ೨೦% ~ ೩೦% |
| ೪ | ಹಿಂದೀ ಟೈಪಿಸ್ಟ್ ಮತ್ತು ಸ್ಟೆನೋಗ್ರಾಫರ್‌ಗಳ ನೇಮಕಾತಿ | ೮೦% | ೭೦% | ೪೦% |
| ೫ | ಹಿಂದೀಯಲ್ಲಿ ಡಿಕ್ಟೇಷನ್/ ನೇರವಾಗಿ ಟೈಪಿಸುವುದು | ೬೫% | ೫೫% | ೩೦% |
| ೬ | ಹಿಂದೀ ತರಬೇತಿ (ಭಾಷೆ/ ಟೈಪಿಂಗ್/ ಸ್ಟೆನೋಗ್ರಫಿ) | ೧೦೦% | ೧೦೦% | ೧೦೦% |
| ೭ | ದ್ವಿಭಾಷಾ ತರಬೇತಿ ಕೈಪಿಡಿಗಳನ್ನು ಸಿದ್ಧಪಡಿಸುವುದು | ೧೦೦% | ೧೦೦% | ೧೦೦% |
| ೮ | ಸಿಡಿ, ಡಿವಿಡಿ, ಪೆನ್ ಡ್ರೈವ್, ಪ್ರಾದೇಶಿಕ ಭಾಷೆಯಿಂದ/ಇಂಗ್ಲೀಶಿನಿಂದ ಹಿಂದೀಗೆ ಭಾಷಾಂತರ, ಹಿಂದೀ ಪುಸ್ತಕಗಳ ಕೊಳ್ಳುವಿಕೆ. (ಪುಸ್ತಕಾಲಯಕ್ಕೆ ಕೊಡಲಾದ ಒಟ್ಟು ಅನುದಾನದಲ್ಲಿ ನಿಯತಕಾಲಿಕ, ಸ್ಟಾಂಡರ್ಡ್ ಪುಸ್ತಕಗಳನ್ನು | ೫೦% | ೫೦% | ೫೦% |

| | | | | |
|---|---|---|---|---|
| | ಹೊರತುಪಡಿಸಿ) | | | |
| ೯ | ಗಣಕಯಂತ್ರ ಮೊದಲಾದ ವಿದ್ಯುನ್ಮಾನ ಸಾಮಾಗ್ರಿಗಳ ಕೊಳ್ಳುವಿಕೆ | ೧೦೦% | ೧೦೦% | ೧೦೦% |
| ೧೦ | ಅಂತರ್ಜಾಲ ತಾಣ – ದ್ವಿಭಾಷೆಯಲ್ಲಿ (ಹಿಂದೀ ಮತ್ತು ಇಂಗ್ಲೀಶ್‌ನಲ್ಲಿ) | ೧೦೦% | ೧೦೦% | ೧೦೦% |
| ೧೧ | ಸಿಟಿಜ಼ನ್ ಛಾಪ್ಟರ್, ಸಾರ್ವಜನಿಕ ಮುಖಾಮುಖಿ ಮಾಹಿತಿ ಬೋರ್ಡು | ೧೦೦% | ೧೦೦% | ೧೦೦% |
| ೧೨ | ೧) ಕೇಂದ್ರಸ್ಥಾನದಿಂದ ಹೊರಗಿರುವ ಸಚಿವಾಲಯ/ ಇಲಾಖೆ/ ಕಛೇರಿಗಳ ಪರಿವೀಕ್ಷಣೆ (ಆಡಳಿತ ಭಾಷಾ ಇಲಾಖೆಯಿಂದ) | ಕನಿಷ್ಠ ೨೫% | ಕನಿಷ್ಠ ೨೫% | ಕನಿಷ್ಠ ೨೫% |
| | ೨) ಕೇಂದ್ರಕಛೇರಿಗಳಲ್ಲಿ | ಕನಿಷ್ಠ ೨೫% | ಕನಿಷ್ಠ ೨೫% | ಕನಿಷ್ಠ ೨೫% |

| | | | | |
|---|---|---|---|---|
| | ೩) ಕೇಂದ್ರಸರ್ಕಾರ ನಡೆಸುತ್ತಿರುವ ವಿದೇಶಿ ಸಹಯೋಗದ ಸಂಸ್ಥೆ/ ಕಛೇರಿಗಳಲ್ಲಿ ಆಡಳಿತ ಭಾಷಾ ಇಲಾಖೆ ಮತ್ತು ಸಂಬಂಧಿಸಿದ ಸಂಸ್ಥಾ ಅಧಿಕಾರಿಗಳಿಂದ ಜಂಟಿ ಪರಿವೀಕ್ಷಣೆ | ಕನಿಷ್ಠ ವರ್ಷಕ್ಕೊಮ್ಮೆ | ಕನಿಷ್ಠ ವರ್ಷಕ್ಕೊಮ್ಮೆ | ಕನಿಷ್ಠ ವರ್ಷಕ್ಕೊಮ್ಮೆ |
| ೧೩ | ಆಡಳಿತ ಭಾಷಾ ಸಭೆಗಳು | ಎ. ಹಿಂದೀ ಸಲಹಾಕಾರ್ ಸಮಿತಿ ಸಭೆ – ಕನಿಷ್ಠವರ್ಷಕ್ಕೆ ಎರಡು ಸಭೆ<br>ಬಿ. ಪಟ್ಟಣ ಆಡಳಿತ ಭಾಷಾ ಜಾರಿ ಸಮಿತಿ (TOLIC) – ವರ್ಷಕ್ಕೆರಡು ಸಭೆ (ಆರು ತಿಂಗಳಿಗೆ ಒಂದು)<br>ಸಿ. ಆಡಳಿತಾ ಭಾಷಾ ಜಾರಿ ಸಮಿತಿ – ವರ್ಷಕ್ಕೆ ನಾಲ್ಕು ಸಭೆಗಳು | | |
| ೧೪ | ಕೋಡ್, ಮ್ಯಾನುಯಲ್, ವಿಧಾನಗಳ ತರ್ಜುಮೆ | ೧೦೦% | ೧೦೦% | ೧೦೦% |
| ೧೫ | ನೂರಕ್ಕೆ ನೂರರಷ್ಟು ಹಿಂದೀಯಲ್ಲೇ ಕಾರ್ಯ ನಿರ್ವಹಿಸಬೇಕಾದ ಸಚಿವಾಲಯ/ ಇಲಾಖೆ/ ಕಛೇರಿಗಳಲ್ಲಿನ ವಿಭಾಗಗಳ ಪ್ರಮಾಣ | ಕನಿಷ್ಠ ೪೦% | ಕನಿಷ್ಠ ೩೦% | ಕನಿಷ್ಠ ೨೦% |
| | ವಿಭಾಗಗಳಿಲ್ಲದೆಡೆ ನೂರಕ್ಕೆ ನೂರರಷ್ಟು ಹಿಂದೀಯಲ್ಲಿ ಕೆಲಸ ಮಾಡಬೇಕಾದ | ೪೦% | ೨೫% | ೧೫% |

| | | | | |
|---|---|---|---|---|
| | ಸಾರ್ವಜನಿಕ ಉದ್ದಿಮೆ/ ಕಾರ್ಪೋರೇಶನ್ನುಗಳು | | | |
| | ವಿದೇಶಿ ಮೂಲದ ಭಾರತೀಯ ಕಛೇರಿಗಳಲ್ಲಿ | | | |
| ೧೬ | ಹಿಂದೀಯಲ್ಲಿ ಸಂವಹನ | ೩೦% | | |
| | ಪಟ್ಟಣ ಆಡಳಿತ ಭಾಷಾ ಜಾರಿ ಸಮಿತಿ (TOLIC) ರಚನೆ | ಕನಿಷ್ಠ ವರ್ಷಕ್ಕೆರಡು ಸಭೆ | | |
| | ಯೂನಿಕೋಡ್ ಬೆಂಬಲಿತ ದ್ವಿಭಾಷಾ ಗಣಕಯಂತ್ರಗಳ ಲಭ್ಯತೆ | ೧೦೦% | | |
| | ಹಿಂದೀ ಟೈಪಿಸ್ಟ್ ಮತ್ತು ಸ್ಟೆನೋಗ್ರಾಫರ್‌ಗಳು | ಪ್ರತಿ ಕಛೇರಿಯಲ್ಲೂ ಕನಿಷ್ಠ ಒಬ್ಬರು | | |
| | ಅನುವಾದಕರ ವ್ಯವಸ್ಥೆ | ಪ್ರತಿಯೊಂದು ದೇಶದಲ್ಲಿನ ರಾಯಭಾರ ಕಛೇರಿಯಲ್ಲಿ/ ಯೋಜನೆಯಲ್ಲಿ ಸ್ಥಳೀಯ ಭಾಷೆಯಿಂದ ಹಿಂದೀಗೆ, ಹಿಂದೀಯಿಂದ ಸ್ಥಳೀಯ ಭಾಷೆಗೆ ಅನುವಾದಕರು ಒಬ್ಬರಾದರೂ ಇರಬೇಕು | | |

ಈ ಹಿಂದೆ ಯಾವುದೇ ಎರಡು ವರ್ಷಗಳು ನಿರಂತರವಾಗಿ ಸಾಧಿಸಿರುವ ಪ್ರಮಾಣ ಅಥವಾ ಇಲಾಖೆಯು ಈಗ ನಿಗಧಿ ಮಾಡಿದ ಗುರಿಯ ಪ್ರಮಾಣದಲ್ಲಿ ಯಾವುದು ಹೆಚ್ಚೋ ಅದು ಈ ಬಾರಿ ಪ್ರತಿಯೊಂದು ಸಚಿವಾಲಯ/ ಇಲಾಖೆ/ ಕಛೇರಿಗೆ ಸಾಧಿಸಲೇಬೇಕಾದ ಕನಿಷ್ಠ ಗುರಿಯಾಗಿರುತ್ತದೆ.

ಈ ಗುರಿಗಳನ್ನು ಎಷ್ಟೆಷ್ಟು ಸಾಧಿಸಲು ಆಗುತ್ತದೆಯೋ ಅಷ್ಟಷ್ಟು ನಮ್ಮ ಮೇಲೆ ಹಿಂದೀಹೇರಿಕೆಯಾಗುತ್ತಾ ಹೋಗುತ್ತದೆ. ಮನರಂಜನೆಯ ಮೂಲಕ ಸಿಹಿಯ ಲೇಪನಹೊದ್ದು ಕಲಿಕೆಯ ಮೂಲಕ ಮಿದುಳು ತೊಳೆದುಕೊಂಡು ಕೆಲಸ, ಭಡ್ತಿಗಳ ಸಾಧನವಾಗುತ್ತಾ ನಮ್ಮ ಬದುಕನ್ನು ಆವರಿಸಿಕೊಳ್ಳುತ್ತದೆ ಹಿಂದೀ... ಇದರಿಂದಾಗಿ

ಅಸಹಜವಾಗಿ ಹಿಂದೀ ಕಲಿಯುವ ನಾವು ಸಹಜವಾಗಿ ಹಿಂದೀ ಬರುವ ಉತ್ತರಭಾರತೀಯರನ್ನು ಎಂದಿಗೂ ಪೈಪೋಟಿಯಲ್ಲಿ ಮೀರಿಸಲಾಗದೆ ಎರಡನೇ ದರ್ಜೆಯ ಪ್ರಜೆಗಳಾಗಿ ಬಾಳಬೇಕಾಗುತ್ತದೆ. ಇಷ್ಟೆಲ್ಲಾ ಅನುಕೂಲಗಳನ್ನು ಕೇಂದ್ರಸರ್ಕಾರ ಹಿಂದೀಭಾಷಿಕರಿಗೆ ಮಾಡಿಕೊಡುತ್ತಿರುವಾಗ ಸಹಜವಾಗೇ ಜನಸಂಖ್ಯಾ ಸ್ಫೋಟದಿಂದ ಕಂಗಾಲಾಗಿರುವ ಹಿಂದೀ ಪ್ರದೇಶಗಳ ಜನರು ನಮ್ಮ ನಾಡಿಗೆ ವಲಸೆ ಬರಲು ಇದು ಸಾಧನವಾಗುತ್ತದೆ. ಇದರಿಂದಾಗಿ ಮುಂದಿನ ದಿನಗಳಲ್ಲಿ ಏನಾಗಬಹುದೆಂದು ಇಂದು ಕಲ್ಪಿಸಿಕೊಳ್ಳಲೂ ಆಗದಂತಹ ನಷ್ಟ ಕನ್ನಡಿಗರ ಬದುಕಿನಲ್ಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಒಟ್ಟಾರೆ ಸನ್ನಿವೇಶವನ್ನು ನೋಡಿದಾಗ ಭಾರತದಲ್ಲಿ ಇಂದು ಅನುಸರಿಸುತ್ತಿರುವ ಭಾಷಾನೀತಿಯು ತುರ್ತಾಗಿ ಬದಲಾಗಬೇಕಾದ ಅಗತ್ಯವು ಎದ್ದು ಕಾಣುತ್ತಿದೆ. ಸಮಗೌರವದ ಒಕ್ಕೂಟಕ್ಕೆ ಹೊಂದುವಂತಹ ಭಾಷಾನೀತಿಯೊಂದು ರೂಪುಗೊಳ್ಳುವ ದಿಕ್ಕಿನಲ್ಲಿ ನಮ್ಮ ಸಂಸತ್ತು, ನಮ್ಮ ಜನಪ್ರತಿನಿಧಿಗಳು ಮುಂದಾಗಲಿ. ಇಂತಹ ಅಗತ್ಯವು ನಮ್ಮ ಜನರಿಗೆ ಮನವರಿಕೆಯಾಗಲಿ... ಈ ನಿಟ್ಟಿನಲ್ಲಿ ಈ ಹೊತ್ತಗೆಯದು ಅಳಿಲುಸೇವೆ ಎಂಬ ಅನಿಸಿಕೆ, ಬದಲಾವಣೆಯ ಬೆಳಕು ನಿಮ್ಮಿಂದಲೇ ಹೊರಡಲಿದೆ ಎಂಬ ಆಶಯ ನಮ್ಮದು.